ಎಂಬುದು ಸಂಬೋಧನದ್ಯೋತಕ. ಬೇರೆ ಕಡೆ ಇರುವವನನ್ನು ತನ್ನ ಕಡೆಗೆ ಕರೆದು ತಿಳಿಸುವ ವ್ಯಾಪಾರವೇ ಸಂಬೋಧನ.

ಕರ್ಮಸಂಜ್ಞಾವಿಧಾಯಕ ಸೂತ್ರ.

**೮೯೩. ಕರ್ತುರೀಪ್ಸಿತತಮಂ ಕರ್ಮ ॥ ೧-೪-೪೯ ॥**

**ಕರ್ತುಃ ಕ್ರಿಯಯಾ ಆಪ್ತುಮಿಷ್ಟತಮಂ ಕಾರಕಂ ಕರ್ಮಸಂಜ್ಞಂ ಸ್ಯಾತ್ ॥**

ಕರ್ತುಃ, ಈಪ್ಸಿತತಮಂ, ಕರ್ಮ ॥ ತ್ರಿಪದ ಸೂತ್ರ. ಆಪ್ತುಂ ಇಷ್ಟತಮಂ ಈಪ್ಸಿತತಮಂ । ಇಚ್ಛಾ ಉದ್ದೇಶ್ಯ. ಸಂಬಂಧವನ್ನು ಹೊಂದಿಸಲು ಇಷ್ಟವಾದುದು. ಯಾವುದರ ಸಂಬಂಧವೆಂದರೆ ಕರ್ತುಃ ಎಂದುದರಿಂದ ಕರ್ತೃವಿನ ಕ್ರಿಯೆಯ ಸಂಬಂಧವೆಂದು ಲಬ್ಧವಾಗುತ್ತದೆ. ಕ್ರಿಯಾ ಎಂದರೆ ಧಾತ್ವರ್ಥ. ಫಲ, ವ್ಯಾಪಾರ ಎರಡು ಧಾತ್ವರ್ಥ. ವ್ಯಾಪಾರದಿಂದ ಹುಟ್ಟುವುದು ಫಲ. ಪ್ರಕೃತ ಕ್ರಿಯಾಸಂಬಂಧವೆಂದರೆ ವ್ಯಾಪಾರಜನ್ಯವಾದ ಫಲದ ಸಂಬಂಧವೆಂದು ತಿಳಿಯಬೇಕು. 'ಕಾರಕೇ' ಅಧಿಕಾರ. ಇಲ್ಲಿ ಪ್ರಥಮಾಂತವಾಗಿ ವಿಪರಿಣತವಾಗುತ್ತದೆ. ಕ್ರಿಯೆಯನ್ನು ಹುಟ್ಟಿಸುವುದು ಕಾರಕ. 'ಕ್ರಿಯಾಂ ಕರೋತಿ ನಿಷ್ಪಾದಯತಿ' ಎಂದು ಭಾಷ್ಯದಲ್ಲಿ ಹೇಳಿರುತ್ತಾರೆ. ಪ್ರತಿಯೊಂದು ಕಾರಕವೂ ತನ್ನ ತನ್ನ ಕ್ರಿಯೆಯಿಂದ ಪ್ರಧಾನಕ್ರಿಯೆಯನ್ನು ಹುಟ್ಟಿಸಿ ಕೊಡುತ್ತದೆ. **ಸೂತ್ರಾರ್ಥ**—ಕರ್ತೃವು ತನ್ನ ವ್ಯಾಪಾರದಿಂದ ಉಂಟಾದ ಫಲದ ಸಂಬಂಧವನ್ನು ಯಾವುದಕ್ಕೆ ಅತಿಶಯವಾಗಿ ಹೊಂದಿಸಲು ಬಯಸುವನೋ ಆ ಕಾರಕಕ್ಕೆ ಕರ್ಮ ಎಂಬ ಸಂಜ್ಞೆ ಬರುತ್ತದೆ. ಹರಿಂ ಭಜತಿ ಎಂದು ಮುಂದೆ ಉದಾಹರಣೆ ಕೊಡುತ್ತಾನೆ. ಚೈತ್ರನು ಕರ್ತೃವಾದರೆ ಅವನಲ್ಲಿರುವ ಕ್ರಿಯಾ ಪ್ರೀತ್ಯನುಕೂಲ ವ್ಯಾಪಾರ. ಪ್ರೀತಿ ಫಲ. ಅದನ್ನು ಹುಟ್ಟಿಸುವುದು ವ್ಯಾಪಾರ. ವ್ಯಾಪಾರಜನ್ಯ (ಹುಟ್ಟಿದ) ಫಲಸಂಬಂಧವು ಹರಿಗೆ ಆಗಬೇಕೆಂದು ಅತಿಶಯ ಇಚ್ಛೆ ಇರುವುದರಿಂದ ಹರಿಯು ಕರ್ಮಸಂಜ್ಞೆಯನ್ನು ಹೊಂದುತ್ತಾನೆ. ನನ್ನ ವ್ಯಾಪಾರದಿಂದ ಹುಟ್ಟಿದ ಪ್ರೀತಿರೂಪಫಲಾಶ್ರಯನು ಹರಿಯಾಗಲಿ ಎಂಬ ಇಚ್ಛೆಯಲ್ಲಿ ಉದ್ದೇಶ್ಯನಾದವನು ಹರಿ. ಹೀಗೆಯೇ ಗ್ರಾಮಂ ಗಚ್ಛತಿ ಎಂಬಲ್ಲಿಯೂ ಸಂಯೋಗಾನುಕೂಲ (ಹುಟ್ಟಿಸುವ) ವ್ಯಾಪಾರ ಧಾತ್ವರ್ಥ. ನನ್ನ ವ್ಯಾಪಾರದಿಂದ ಉಂಟಾದ ಸಂಯೋಗರೂಪಫಲವು ಗ್ರಾಮದಲ್ಲಾಗಲಿ ಎಂಬ ಚೈತ್ರನ ಇಚ್ಛೆಯಿರುವುದರಿಂದ ಇಚ್ಛೆಯಲ್ಲಿ ಉದ್ದೇಶ್ಯವಾದುದು ಗ್ರಾಮ. ಆದುದರಿಂದ ಗ್ರಾಮವು ಕರ್ಮ. ಚೈತ್ರಃ ತಂಡುಲಂ ಪಚತಿ ॥ ಇಲ್ಲಿ ವಿಕ್ಲಿತ್ಯನುಕೂಲವ್ಯಾಪಾರ ಧಾತ್ವರ್ಥ. ವಿಕ್ಲಿತ್ತಿಯೆಂದರೆ ಮೆತ್ತಗಾಗುವಿಕೆ. ಅನುಕೂಲವೆಂದರೆ ಜನಕವೆಂದರ್ಥ. ಪಾಕ ವ್ಯಾಪಾರದಿಂದುಂಟಾದ ವಿಕ್ಲಿತ್ತಿಯು

ತಂಡುಲ(ಅಕ್ಕಿ)ದಲ್ಲಾಗಲಿಯೆಂದು ಇಚ್ಛೆ ಇರುವುದರಿಂದ ಇಚ್ಛೆಯಲ್ಲಿ ಉದ್ದೇಶ್ಯ ವಾದುದು ತಂಡುಲವಾದುದರಿಂದ ತಂಡುಲ ಕರ್ಮವಾಗುತ್ತದೆ.

### ಕರ್ಮಕ್ಕೆ ದ್ವಿತೀಯಾ ಹೇಳುವ ಸೂತ್ರ.

### ೮೯೪. ಕರ್ಮಣಿ ದ್ವಿತೀಯಾ ॥ ೨-೩-೨ ॥

**ಅನುಕ್ತೇ ಕರ್ಮಣಿ ದ್ವಿತೀಯಾ ಸ್ಯಾತ್ । ಹರಿಂ ಭಜತಿ । ಅಭಿಹಿತೇ ತು ಕರ್ಮಾದೌ ಪ್ರಥಮಾ— ಹರಿಃ ಸೇವ್ಯತೇ । ಲಕ್ಷ್ಮ್ಯಾ ಸೇವಿತಃ ॥**

ದ್ವಿಪದ ಸೂತ್ರ. 'ಅನಭಿಹಿತೇ' ಅಧಿಕಾರ. ಸೂತ್ರಾರ್ಥ—ಕರ್ಮವು ಅಭಿಹಿತವಾಗದಿರುವಾಗ ಕರ್ಮಕ್ಕೆ ದ್ವಿತೀಯಾವಿಭಕ್ತಿ ಬರುತ್ತದೆ. ಹರಿಂ ಭಜತಿ ॥ ಭಜನದಲ್ಲಿ ಹರಿಯು ಕರ್ಮವಾಗುತ್ತದೆಂದು ಹಿಂದೆ ವಿವರಿಸಿದೆ. ಇಲ್ಲಿ ಕರ್ಮವು ಯಾವುದರಿಂದಲೂ ಅಭಿಹಿತವಾಗದಿರುವುದರಿಂದ ಹರಿ ಶಬ್ದದ ಮೇಲೆ ದ್ವಿತೀಯಾ ವಿಭಕ್ತಿ ಬಂದಿದೆ. ಕರ್ಮವು ಯಾವುದರಿಂದಲಾದರೂ ಅಭಿಹಿತವಾದರೆ ಆಗ ಕರ್ಮದ ಮೇಲೆ ಪ್ರಥಮಾವಿಭಕ್ತಿ ಬರುತ್ತದೆ. ಸಾಮಾನ್ಯವಾಗಿ ತಿಙ್, ಕೃತ್, ತದ್ಧಿತ, ಸಮಾ ಸಾದಿಗಳಿಂದ ಕರ್ಮಾದಿಕಾರಕಗಳು ಅಭಿಹಿತವಾಗುತ್ತವೆ. ಹರಿಂ ಭಜತಿ ಎಂಬಲ್ಲಿ ತಿ ಎಂಬ ತಿಙ್ ಕರ್ತೃವನ್ನು ಹೇಳುತ್ತದೆ. ಆಗ ಕರ್ತೃ ತಿಙಿನಿಂದ ಅಭಿಹಿತವಾದುದ ರಿಂದ ಕರ್ತೃವಿಗೆ ಪ್ರಥಮಾವಿಭಕ್ತಿ. ಹರಿಃ ಸೇವ್ಯತೇ ಚೈತ್ರೇಣ ॥ ಹರಿಯು ಚೈತ್ರ ನಿಂದ ಸೇವಿಸಲ್ಪಡುತ್ತಾನೆ. ಇದು ಕರ್ಮಣಿಪ್ರಯೋಗ. ಇಲ್ಲಿ ತೇ ಎಂಬ ತಿಙ್ ಕರ್ಮವನ್ನು ಹೇಳುವುದರಿಂದ ಕರ್ಮಕ್ಕೆ (ಹರಿ) ಪ್ರಥಮಾವಿಭಕ್ತಿ. ಕರ್ತೃ (ಚೈತ್ರ) ಹೇಳಲ್ಪಡದಿರುವುದರಿಂದ (ಕರ್ತೃವಿನ) ತೃತೀಯಾವಿಭಕ್ತಿ ಬಂದಿದೆ. ಲಕ್ಷ್ಮ್ಯಾ ಸೇವಿತಃ ॥ ಇಲ್ಲಿ ಸೇವಿತಃ ಎಂಬಲ್ಲಿರುವ ಕ್ತಪ್ರತ್ಯಯ(ಕೃತ್)ದಿಂದ ಕರ್ಮವು ಅಭಿಹಿತವಾದುದರಿಂದ ಹರಿರೂಪ ಕರ್ಮಕ್ಕೆ ದ್ವಿತೀಯಾ ಬರುವುದಿಲ್ಲ. ಲಕ್ಷ್ಮಿ ಕರ್ತೃ ಆದುದರಿಂದ ಅದು ಅಭಿಹಿತವಾಗದಿರುವುದರಿಂದ ತೃತೀಯಾ ಬಂದಿದೆ. ತದ್ಧಿತದಿಂದ ಅಭಿಹಿತವಾದಾಗಲೂ ಪ್ರಥಮಾ. ಶತೇನ ಕ್ರೀತಃ ಶತ್ಯಃ ॥ ನೂರರಿಂದ ಕೊಳ್ಳಲ್ಪಟ್ಟದ್ದು. ಸಮಾಸಕ್ಕೆ—ಪ್ರಾಪ್ತಃ ಆನಂದಃ ಯಂ ಸಃ ಪ್ರಾಪ್ತಾನಂದಃ ॥ ಆನಂದ ಹೊಂದಿದವ. ಕೆಲವು ಕಡೆ ನಿಪಾತದಿಂದಲೂ ಅಭಿಹಿತವಾಗುತ್ತದೆ. ಹೀಗೆ ಅಭಿಧಾನವನ್ನು ತಿಳಿದು ಎಲ್ಲಿ ಅಭಿಹಿತವಾಗಿಲ್ಲವೋ ಅಲ್ಲಿ ಮಾತ್ರ ಆಯಾಯ ಕಾರಕಗಳ ವಿಭಕ್ತಿ ಬರುತ್ತದೆಂದು ತಿಳಿಯಬೇಕು.

ಅಪಾದಾನಾದಿಗಳಿಗೆ ಅವಿವಕ್ಷೆಯಿರುವಾಗ ಕರ್ಮಸಂಜ್ಞೆ ಹೇಳುವ ಸೂತ್ರ.

**೮೯೫. ಅಕಥಿತಂ ಚ || ೧-೪-೫೧ ||**

**ಅಪಾದಾನಾದಿ ವಿಶೇಷೈರವಿವಕ್ಷಿತಂ ಕಾರಕಂ ಕರ್ಮಸಂಜ್ಞಂ ಸ್ಯಾತ್ ||**

**ದುಹ್ಯಾಚ್‌ಪಚ್‌ದಂಡ್‌ರುಧಿಪ್ರಚ್ಛಿಚಿಬ್ರೂಶಾಸುಜಿಮಥ್‌ಮುಷಾಮ್ |**
**ಕರ್ಮಯುಕ್ ಸ್ಯಾದಕಥಿತಂ ತಥಾ ಸ್ಯಾನ್ನೀಹೃಕೃಷ್ವಹಾಮ್ ||**

**ಗಾಂ ದೋಗ್ಧಿ ಪಯಃ | ಬಲಿಂ ಯಾಚತೇ ವಸುಧಾಮ್ | ತಂಡುಲಾನೋದನಂ ಪಚತಿ | ಗರ್ಗಾನ್ ಶತಂ ದಂಡಯತಿ | ವ್ರಜಮವರುಣದ್ಧಿ ಗಾಮ್ | ಮಾಣವಕಂ ಪಂಥಾನಂ ಪೃಚ್ಛತಿ | ವೃಕ್ಷಮವಚಿನೋತಿ ಫಲಾನಿ | ಮಾಣವಕಂ ಧರ್ಮಂ ಬ್ರೂತೇ ಶಾಸ್ತಿ ವಾ | ಶತಂ ಜಯತಿ ದೇವದತ್ತಮ್ | ಸುಧಾಂ ಕ್ಷೀರನಿಧಿಂ ಮಥ್ನಾತಿ | ದೇವದತ್ತಂ ಶತಂ ಮುಷ್ಣಾತಿ | ಗ್ರಾಮಮಜಾಂ ಹರತಿ, ಕರ್ಷತಿ, ವಹತಿ ವಾ | ಅರ್ಥನಿಬಂಧನೇಯಂ ಸಂಜ್ಞಾ | ಬಲಿಂ ಭಿಕ್ಷತೇ ವಸುಧಾಮ್ | ಮಾಣವಕಂ ಧರ್ಮಂ ಭಾಷತೇ ಅಭಿಧತ್ತೇ ವಕ್ತೀತ್ಯಾದಿ ||**

ದ್ವಿಪದ ಸೂತ್ರ. ಅಕಥಿತವೆಂದರೆ ಹೇಳಲ್ಪಡದಿರುವುದು ಎಂದರ್ಥವಾಗುತ್ತದೆ. ಹೇಳದಿರುವುದಕ್ಕೆ ಕರ್ಮಸಂಜ್ಞೆ ಹೇಳುವುದು ಅಸಂಭವ. ಆದುದರಿಂದ ಅವಿವಕ್ಷಿತ ಎಂದರ್ಥಮಾಡಬೇಕು. ಪೂರ್ವದಲ್ಲಿ ಅಪಾದಾನಾದಿಗಳು ಪ್ರಸಕ್ತವಾದುದರಿಂದ ಅವುಗಳಿಗೆ ಅವಿವಕ್ಷಾ. **ಸೂತ್ರಾರ್ಥ**—ಅಪಾದಾನ, ಸಂಪ್ರದಾನ, ಅಧಿಕರಣತ್ವ ರೂಪ ಕಾರಕಗಳನ್ನು ಅವಿವಕ್ಷಾಮಾಡಿ ಕರ್ಮಕಾರಕ ಎಂದು ವಿವಕ್ಷಾಮಾಡಿರುವ ಕಾರಕಕ್ಕೆ ಕರ್ಮಸಂಜ್ಞೆ ಬರುತ್ತದೆ. ಒಂದು ಕಡೆ ಅಪಾದಾನಕಾರಕವಾಗಿರುತ್ತದೆ. ಆಗ ಅದು ಅಪಾದಾನಕಾರಕವಲ್ಲವೆಂದು ನಾವು ವಿವಕ್ಷಾ ಮಾಡಿ ಅದು ಕರ್ಮಕಾರಕವೆಂದು ತಿಳಿಯುವುದು. ಗಾಂ ದೋಗ್ಧಿ ಪಯಃ || ಇದು ಉದಾಹರಣೆ. ಹಾಲು ಕರೆಯಲು ಅವಧಿಯಾದುದರಿಂದ ಹಸುವಿನ ದೆಸೆಯಿಂದ ಹಾಲನ್ನು ಕರೆಯುತ್ತಾನೆ ಎಂದು ವಾಸ್ತವಪ್ರಯೋಗ. ಇಲ್ಲಿ ಹಸುವು ಅಪಾದಾನ. ಹಸುವಿಗೆ ಅಪಾದಾನತ್ವ ವಿವಕ್ಷಾಮಾಡದೆ ಕರ್ಮತ್ವವಿವಕ್ಷಾ ಮಾಡಿದಾಗ ಗೋವು ಕರ್ಮವಾಗುತ್ತದೆ. ಆಗ ಪಂಚಮಿಗೆ ಬದಲಾಗಿ ದ್ವಿತೀಯಾವಿಭಕ್ತಿ ಬರುತ್ತದೆ. ಹೀಗೆ ಎಲ್ಲಾ ಕಡೆಯಲ್ಲಿಯೂ ಆಯಾಯ ಕಾರಕಗಳಿಗೆ ಕರ್ಮತ್ವವಿವಕ್ಷಾ ಮಾಡಿದಾಗ ದ್ವಿತೀಯಾ ಬರಬೇಕಾಗುತ್ತದೆ. ಆದರೆ ಕೆಲವು ನಿಯಮಿತ ಧಾತುಯೋಗವಿರುವಾಗ ಮಾತ್ರ ಹೀಗೆ ಕರ್ಮತ್ವ ವಿವಕ್ಷಾ ಮಾಡಬೇಕೆಂದು ಭಾಷ್ಯದಲ್ಲಿ ನಿಯಮಮಾಡಿರುತ್ತಾರೆ. ಅದನ್ನೇ ದುಹ್ ಯಾಚೆಂಬ ಕಾರಿಕೆಯಲ್ಲಿ ವಿವರಿಸಿದೆ. ದುಹ್, ಯಾಚ್, ಪಚ್, ದಂಡ್, ರುಧಿ, ಪ್ರಚ್ಛಿ, ಚಿ, ಬ್ರೂ, ಶಾಸು, ಜಿ, ಮಥ್, ಮುಷ್—ಈ ಹನ್ನೆರಡು ಧಾತುಗಳಲ್ಲಿಯೂ,

ಹಾಗೆಯೇ ನೀ, ಹೃ, ಕೃಷ್, ವಹ್— ಈ ನಾಲ್ಕು ಧಾತುಗಳ ಯೋಗವಿರುವಾಗಲೂ ಕರ್ಮಸಂಬಂಧಿಯಾದ ಅಪಾದಾನಾದಿಗಳಿಗೆ ಕರ್ಮವಿವಕ್ಷೆ. ಇತರ ಧಾತುಗಳ ಯೋಗವಿರುವಾಗ ಇಲ್ಲ. ಅದರಲ್ಲಿಯೂ ದುಹ್, ದಂಡ್, ಚಿಞ್, ಜಿ, ಮಥ್, ಮುಷ್— ಈ ಧಾತುಗಳಲ್ಲಿ ಅಪಾದಾನಕ್ಕೆ ಅವಿವಕ್ಷೆಯೂ, ಕರ್ಮತ್ವಕ್ಕೆ ವಿವಕ್ಷೆಯೂ ಮಾಡಿದಾಗ ದ್ವಿತೀಯಾ, ಅಪಾದಾನತ್ವವಿವಕ್ಷಾ ಇರುವಾಗ ಪಂಚಮಿಯೂ ಬರುತ್ತದೆ. ರುಧ್ ಧಾತುವಿನಲ್ಲಿ ಅಧಿಕರಣತ್ವಕ್ಕೆ ಅವಿವಕ್ಷೆಯೂ, ಕರ್ಮತ್ವಕ್ಕೆ ವಿವಕ್ಷೆಯೂ ಇರುವಾಗ ದ್ವಿತೀಯಾ. ಅಧಿಕರಣತ್ವವಿವಕ್ಷಾ ಇರುವಾಗ ಸಪ್ತಮೀ. ಬ್ರೂ, ಶಾಸ್ ಧಾತುಗಳಲ್ಲಿ ಸಂಪ್ರದಾನತ್ವಕ್ಕೆ ಅವಿವಕ್ಷೆಯೂ ಕರ್ಮತ್ವಕ್ಕೆ ವಿವಕ್ಷೆಯೂ ಇರುವಾಗ ದ್ವಿತೀಯಾ. ಸಂಪ್ರದಾನತ್ವವಿವಕ್ಷಾ ಇರುವಾಗ ಚತುರ್ಥೀ. ಇತರ ಧಾತುಗಳಲ್ಲಿ ಕರ್ಮತ್ವವಿವಕ್ಷಾ ಇರುವಾಗ ದ್ವಿತೀಯಾ. ಹೀಗೆ ಅಪಾದಾನತ್ವಾದಿಗಳಿಗೆ ಅವಿವಕ್ಷಾ ಮಾಡಿ ಕರ್ಮತ್ವಕ್ಕೆ ವಿವಕ್ಷಾ ಮಾಡಿ ಕರ್ಮಸಂಜ್ಞೆ ಬಂದರೆ ಅದಕ್ಕೆ ಗೌಣಕರ್ಮ ವೆನ್ನುತ್ತಾರೆ. ವಾಸ್ತವಕರ್ಮಕ್ಕೆ ಮುಖ್ಯ ಕರ್ಮವೆಂದು ಹೆಸರು. ಕ್ರಮವಾಗಿ ಉದಾಹರಣೆ: 'ಗಾಂ ದೋಗ್ಧಿ ಪಯಃ ॥' ಗೋವಿಗೆ ವಾಸ್ತವವಾಗಿರುವ ಅಪಾದಾನತ್ವವನ್ನು ಅವಿವಕ್ಷಾಮಾಡಿ ಕರ್ಮಕಾರಕ ಎಂದು ವಿವಕ್ಷಾಮಾಡಿದುದರಿಂದ ದ್ವಿತೀಯಾ ಬಂದಿದೆ. ಬಲಿಂ ಯಾಚತೇ ವಸುಧಾಮ್ ॥ ಬಲಿಯನ್ನು ಭೂಮಿಯನ್ನು ಬೇಡುತ್ತಾನೆ. ಬಲಿಯು ಗೌಣಕರ್ಮ. ತಂಡುಲಾನೋದನಂ ಪಚತಿ ॥ ಅಕ್ಕಿಯನ್ನು ಅನ್ನವನ್ನು ಬೇಯಿಸುತ್ತಾನೆ. ತಂಡುಲ ಗೌಣಕರ್ಮ. ಗರ್ಗಾನ್ ಶತಂ ದಂಡಯತಿ ॥ ಗರ್ಗದೇಶದವರನ್ನು ನೂರನ್ನು ಶಿಕ್ಷಿಸುತ್ತಾನೆ. ಗರ್ಗರು ಗೌಣಕರ್ಮ. ವ್ರಜಮವರುಣದ್ಧಿ ಗಾಮ್ ॥ ಕೊಟ್ಟಿಗೆಯನ್ನು ಹಸುವನ್ನು ತಡೆಯುತ್ತಾನೆ. ವ್ರಜ ಗೌಣಕರ್ಮ. ಅಧಿಕರಣಕ್ಕೆ ಕರ್ಮತ್ವವಿವಕ್ಷಾ. ಮಾಣವಕಂ ಪಂಥಾನಂ ಪೃಚ್ಛತಿ ॥ ಹುಡುಗನನ್ನು ದಾರಿಯನ್ನು ಕೇಳುತ್ತಾನೆ. ಮಾಣವಕ ಗೌಣಕರ್ಮ. ವೃಕ್ಷಮವಚಿನೋತಿ ಫಲಾನಿ ॥ ಮರವನ್ನು ಹಣ್ಣುಗಳನ್ನು ಆರಿಸುತ್ತಾನೆ. ವೃಕ್ಷ ಗೌಣಕರ್ಮ. ಮಾಣವಕಂ ಧರ್ಮಂ ಬ್ರೂತೇ ಶಾಸ್ತಿ ವಾ ॥ ಹುಡುಗನನ್ನು ಧರ್ಮವನ್ನು ಬೋಧಿಸುತ್ತಾನೆ. ಮಾಣವಕ ಗೌಣಕರ್ಮ. ಸಂಪ್ರದಾನಕ್ಕೆ ಕರ್ಮತ್ವವಿವಕ್ಷಾ ಬಂದಿದೆ. ಶತಂ ಜಯತಿ ದೇವದತ್ತಮ್ ॥ ದೇವದತ್ತನನ್ನು ನೂರನ್ನು ಜಯಿಸುತ್ತಾನೆ. ದೇವದತ್ತ ಗೌಣಕರ್ಮ. ಸುಧಾಂ ಕ್ಷೀರನಿಧಿಂ ಮಥ್ನಾತಿ ॥ ಸಮುದ್ರವನ್ನು ಅಮೃತವನ್ನು ಕಡೆಯುತ್ತಾನೆ. ಕ್ಷೀರನಿಧಿ ಗೌಣಕರ್ಮ. ಅದು ಅಪಾದಾನವಾಗಿದೆ. ದೇವದತ್ತಂ ಶತಂ ಮುಷ್ಣಾತಿ ॥ ದೇವದತ್ತನನ್ನು ನೂರನ್ನು ಅಪಹರಿಸುತ್ತಾನೆ. ದೇವದತ್ತ ಗೌಣಕರ್ಮ. ಗ್ರಾಮಂ ಅಜಾಂ ನಯತಿ, ಹರತಿ, ಕರ್ಷತಿ, ವಹತಿ ವಾ ॥ ಗ್ರಾಮವನ್ನು ಆಡನ್ನು ಒಯ್ಯುತ್ತಾನೆ, ಅಪಹರಿಸುತ್ತಾನೆ, ಎಳೆದುಕೊಂಡು ಹೋಗುತ್ತಾನೆ, ಹೊತ್ತುಕೊಂಡು ಹೋಗುತ್ತಾನೆ. ಗ್ರಾಮ ಗೌಣಕರ್ಮ. ಗ್ರಾಮದಲ್ಲಿ ಎಂದು ಅಧಿಕರಣವಾದುದರಿಂದ ಸಪ್ತಮೀ ಬರಬೇಕಿತ್ತು. ಕರ್ಮತ್ವವಿವಕ್ಷಾ ಮಾಡಿದೆ. ಅರ್ಥನಿಬಂಧನೇಯಂ

ಸಂಜ್ಞಾ ॥ ದುಹ್ ಮುಂತಾದವುಗಳ ಯೋಗವಿರುವಾಗ ಮಾತ್ರ ಈ ಅಕಥಿತ ಕರ್ಮ ಸಂಜ್ಞೆ ಬರುವುದೆಂದು ಹೇಳಿದರೂ ದುಹ್ ಮುಂತಾದ ಧಾತ್ವರ್ಥಗಳಿರುವ ಧಾತುಗಳ ಯೋಗವಿರುವಾಗಲೂ ಬರುತ್ತದೆಯೆಂದು ತಿಳಿಯಬೇಕು. ಬಲಿಂ ಭಿಕ್ಷತೇ ವಸುಧಾಮ್ ॥ ಬಲಿಯನ್ನು ಭೂಮಿಯನ್ನು ಬೇಡುತ್ತಾನೆ. ಯಾಚ್ ಧಾತು ಪರಿಗಣಿತವಾಗಿದೆ. ಯಾಚಿನ ಅರ್ಥ ಭಿಕ್ಷ ಧಾತುವಿಗೆ ಇರುವುದರಿಂದ ಅದರ ಯೋಗವಿರುವಾಗಲೂ ಬಲಿಗೆ ಕರ್ಮತ್ವವಿವಕ್ಷಾ ಬಂದಿದೆ. ಹಾಗೆಯೇ, ಮಾಣವಕಂ ಧರ್ಮಂ ಭಾಷತೇ, ಅಭಿಧತ್ತೇ, ವಕ್ತೀತ್ಯಾದಿ ॥ ಹುಡುಗನನ್ನು ಧರ್ಮವನ್ನು ಹೇಳುತ್ತಾನೆ. ಬ್ರೂಞ್ ಧಾತುವು ಹೇಳಿರುವುದರಿಂದ ಅದರ ಅರ್ಥವುಳ್ಳ ಭಾಷ, ಅಭಿಧಾಞ್, ವಚ ಮುಂತಾದ ಧಾತುಗಳ ಯೋಗವಿರುವಾಗಲೂ ಕರ್ಮತ್ವವಿವಕ್ಷಾ ಬರುತ್ತದೆ. ಇಲ್ಲಿ ಸಂಪ್ರದಾನಕ್ಕೆ ಕರ್ಮಸಂಜ್ಞೆ ಬಂದಿದೆ. ಹೀಗೆ ಗೌಣಕರ್ಮವನ್ನು ತಿಳಿಯಬೇಕು.

ಇತಿ ದ್ವಿತೀಯಾ ॥

ಕರ್ತೃಸಂಜ್ಞೆ ಹೇಳುವ ಸೂತ್ರ.

**೬೯೭. ಸ್ವತನ್ತ್ರಃ ಕರ್ತಾ ॥ ೧-೪-೫೪ ॥**

**ಕ್ರಿಯಾಯಾಂ ಸ್ವಾತನ್ತ್ರ್ಯೇಣ ವಿವಕ್ಷಿತೋಽರ್ಥಃ ಕರ್ತಾ ಸ್ಯಾತ್ ॥**

ದ್ವಿಪದ ಸೂತ್ರ. ಕಾರಕಪ್ರಕರಣವಾದುದರಿಂದ ಕ್ರಿಯೆಯಲ್ಲಿ ಸ್ವಾತಂತ್ರ್ಯವೆಂದು ತಿಳಿಯಬೇಕು. ಕಟ್ಟಿಗೆ ಮುಂತಾದವುಗಳಿಗೂ ಕರ್ತೃಸಂಜ್ಞೆ ಇಷ್ಟವಾದುದರಿಂದ ವಿವಕ್ಷಾ ಎಂದಿದೆ. **ಸೂತ್ರಾರ್ಥ**—ಧಾತ್ವರ್ಥದಿಂದ ತೋರುವ ಪಾಕಾದಿ ಕ್ರಿಯೆಯಲ್ಲಿ ಯಾವ ಪದಾರ್ಥವು ಪ್ರಧಾನವೆಂದು ವಿವಕ್ಷಿತವಾಗಿದೆಯೋ ಅದು ಕರ್ತೃಸಂಜ್ಞೆಯನ್ನು ಹೊಂದುತ್ತದೆ. 'ಈ ಕ್ರಿಯೆಯು ಇದರಿಂದಲೇ ಸಾಧಿಸಲ್ಪಡುತ್ತದೆ' ಎಂಬುದೇ ವಿವಕ್ಷಾಸ್ವರೂಪ. ಒಂದು ತಪ್ಪಲೆಯಲ್ಲಿ ಅಕ್ಕಿ ಹಾಕಿದೊಡನೇ ಬೆಂದರೆ ಆಗ ಪಾಕಸೌಲಭ್ಯ ತಿಳಿಸಲು ತಪ್ಪಲೆಯೇ ಕರ್ತೃವಾಗುತ್ತದೆ. ಸ್ಥಾಲೀ ಪಚತಿ ॥ ಬೆಂಕಿ ಚನ್ನಾಗಿ ಉರಿಯುವುದಾದರೆ, ಅಗ್ನಿಃ ಪಚತಿ ॥ ಎಂದು ಅಗ್ನಿಯು ಕರ್ತೃವಾಗುತ್ತದೆ. ಹೀಗೆ ಆಯಾಯ ಕಾರಕಗಳಿಗೆ ಅವುಗಳಲ್ಲಿರುವ ವ್ಯಾಪಾರವೇ ಪ್ರಧಾನವೆಂದು ವಿವಕ್ಷಾಮಾಡಿದಾಗ ಕರ್ತೃಸಂಜ್ಞೆ ಬರುತ್ತದೆ.

ಕರಣಸಂಜ್ಞಾವಿಧಾಯಕ ಸೂತ್ರ.

**೬೯೮. ಸಾಧಕತಮಂ ಕರಣಮ್ ॥ ೧-೪-೪೨ ॥**

**ಕ್ರಿಯಾಸಿದ್ಧೌ ಪ್ರಕೃಷ್ಟೋಪಕಾರಕಂ ಕರಣಸಂಜ್ಞಂ ಸ್ಯಾತ್ ॥**

ದ್ವಿಪದ ಸೂತ್ರ. ಸೂತ್ರಾರ್ಥ—ಕ್ರಿಯೆಯುಂಟಾಗಬೇಕಾದರೆ ಯಾವುದು ಅತಿಶಯ ಉಪಕಾರಕವೋ ಅದು ಕರಣಸಂಜ್ಞೆಯನ್ನು ಹೊಂದುತ್ತದೆ. ಯಾವ ಕಾರಕದ ವ್ಯಾಪಾರವಾದೊಡನೆಯೇ ಪ್ರಧಾನಫಲವುಂಟಾಗುವುದೋ ಅದೇ ಪ್ರಕೃಷ್ಟೋಪಕಾರಕ. ಎಲ್ಲವೂ ಕ್ರಿಯಾ ಉಪಕಾರಕಗಳೇ. ಆದರೂ ಅತಿಶಯ ಉಪಕಾರಕ ಒಂದೇ ಎಂದು ಪರಿಗಣಿತವಾಗುತ್ತದೆ. ಅದೇ ಕರಣ.

ಕರ್ತೃ, ಕರಣಗಳಿಗೆ ತೃತೀಯಾ ಹೇಳುವ ಸೂತ್ರ.

**೮೫೮. ಕರ್ತೃಕರಣಯೋಸ್ತೃತೀಯಾ ॥ ೨-೩-೧೮ ॥**

**ಅನಭಿಹಿತೇ ಕರ್ತರಿ ಕರಣೇ ಚ ತೃತೀಯಾ ಸ್ಯಾತ್ । ರಾಮೇಣ ಬಾಣೇನ ಹತೋ ವಾಲೀ ॥**

ಕರ್ತೃಕರಣಯೋಃ, ತೃತೀಯಾ ॥ ದ್ವಿಪದ ಸೂತ್ರ. 'ಅನಭಿಹಿತೇ' ಅಧಿಕಾರ. ಸೂತ್ರಾರ್ಥ—ಯಾವುದರಿಂದಲೂ ಅಭಿಹಿತವಾಗದೆ ಇರುವಾಗ ಕರ್ತೃವಿನ ಮೇಲೂ ಕರಣದ ಮೇಲೂ ತೃತೀಯಾವಿಭಕ್ತಿ ಬರುತ್ತದೆ. ಎರಡಕ್ಕೂ ಒಂದೇ ಉದಾಹರಣೆ ತೋರಿಸುತ್ತಾನೆ. 'ರಾಮೇಣ ಬಾಣೇನ ಹತೋ ವಾಲೀ ॥' ರಾಮನಿಂದ ಬಾಣದಿಂದ ವಾಲಿಯು ಕೊಲ್ಲಲ್ಪಟ್ಟನು. ಇಲ್ಲಿ ಕೊಲ್ಲುವುದು ಕ್ರಿಯಾ. ಇದರಲ್ಲಿ ಪ್ರಧಾನನು ರಾಮ. ಆದುದರಿಂದ ಅವನಿಗೆ ಕರ್ತೃಸಂಜ್ಞೆ ಬರುತ್ತದೆ. ವಾಲಿಯು ಕರ್ಮ, ಬಾಣ ಕರಣ. ರಾಮನು ಬಾಣಪ್ರಯೋಗಿಸುತ್ತಾನೆ. ಬಾಣದ ವ್ಯಾಪಾರವಾದೊಡನೆಯೇ ಪ್ರಾಣವಿಯೋಗರೂಪ ಹನನವಾಗುತ್ತದೆ. ಆದುದರಿಂದ ಅದು ಪ್ರಕೃಷ್ಟೋಪಕಾರಕ. ಹತಃ ಎಂಬಲ್ಲಿರುವ ಕ್ತಪ್ರತ್ಯಯದಿಂದ ಕರ್ಮವು ಹೇಳಲ್ಪಟ್ಟುದರಿಂದ ಅದಕ್ಕೆ ಪ್ರಥಮಾ ಬಂದಿದೆ. ಕರ್ತೃ, ಕರಣ ಅಭಿಹಿತವಾಗದಿರುವುದರಿಂದ ತೃತೀಯಾ ಬಂದಿದೆ.

ಇತಿ ತೃತೀಯಾ ॥

ಸಂಪ್ರದಾನಸಂಜ್ಞೆ ಹೇಳುವ ಸೂತ್ರ.

**೮೫೯. ಕರ್ಮಣಾ ಯಮಭಿಪ್ರೈತಿ ಸ ಸಮ್ಪ್ರದಾನಮ್ ॥ ೧-೪-೩೨ ॥**

**ದಾನಸ್ಯ ಕರ್ಮಣಾ ಯಮಭಿಪ್ರೈತಿ ಸ ಸಂಪ್ರದಾನಸಂಜ್ಞಃ ಸ್ಯಾತ್ ॥**

ಕರ್ಮಣಾ, ಯಂ, ಅಭಿಪ್ರೈತಿ, ಸಃ, ಸಂಪ್ರದಾನಮ್ ॥ ಐದು ಪದಗಳುಳ್ಳ ಸೂತ್ರ. ಸೂತ್ರಾರ್ಥ—ದಾನದ ಕರ್ಮದ ಸಂಬಂಧವನ್ನು ಯಾರಿಗೆ ಹೊಂದಿಸಲು ಬಯಸುತ್ತಾನೋ ಅದು ಸಂಪ್ರದಾನ ಸಂಜ್ಞೆಯನ್ನು ಹೊಂದುತ್ತದೆ. ದಾನದ ಕರ್ಮದ ಸಂಬಂಧ ಯಾರಿಗೆ ಆಗಲಿ ಎಂದು ಬಯಸುವನೋ ಅದು ಸಂಪ್ರದಾನ. ಇಲ್ಲಿ ದಾನ ಉಪಲಕ್ಷಣ. ಕ್ರಿಯಾ ಕರ್ಮದ ಸಂಬಂಧವನ್ನು ಯಾವುದಕ್ಕೆ ಹೊಂದಿ

ಸಲು ಬಯಸುವನೋ ಅದು ಸಂಪ್ರದಾನವೆಂದು ತಿಳಿಯಬೇಕು. ಕರ್ಮಸಂಬಂಧೋದ್ದೇಶ್ಯನಿಗೆ ಸಂಪ್ರದಾನಸಂಜ್ಞೆಯೆಂದು ಫಲಿತಾರ್ಥ.

ಸಂಪ್ರದಾನಕ್ಕೆ ಚತುರ್ಥೀ ಹೇಳುವ ಸೂತ್ರ.

**೯೦೦. ಚತುರ್ಥೀ ಸಂಪ್ರದಾನೇ || ೨-೩-೧೩ ||**

**ವಿಪ್ರಾಯ ಗಾಂ ದದಾತಿ ||**

ದ್ವಿಪದ ಸೂತ್ರ. 'ಅನಭಿಹಿತೇ' ಅಧಿಕಾರ. ಯಾವುದರಿಂದಲೂ ಸಂಪ್ರದಾನ ಅಭಿಹಿತವಾಗದಿರುವಾಗ ಅದಕ್ಕೆ ಚತುರ್ಥೀವಿಭಕ್ತಿ ಬರುತ್ತದೆ. ಉದಾ.—ವಿಪ್ರಾಯ ಗಾಂ ದದಾತಿ || ಇಲ್ಲಿ ದಾನದಲ್ಲಿ ಗೋವು ಕರ್ಮ. ಗೋವಿನ ಸಂಬಂಧವು ಬ್ರಾಹ್ಮಣನಿಗೆ ಆಗಲಿ ಎಂಬ ಇಚ್ಛೆಯಿರುವುದರಿಂದ ಕರ್ಮಸಂಬಂಧದಲ್ಲಿ ಉದ್ದೇಶ್ಯನು ಬ್ರಾಹ್ಮಣನಾದುದರಿಂದ ಅವನಿಗೆ ಸಂಪ್ರದಾನಸಂಜ್ಞೆ ಬಂದು ಚತುರ್ಥೀ ಬಂದಿದೆ. ಕ್ರಿಯೆಯಲ್ಲಿ ಯಾವುದು ಕರ್ಮವೋ ಅದರ ಸಂಬಂಧದಲ್ಲಿ ಉದ್ದೇಶ್ಯನು ಸಂಪ್ರದಾನನಾಗುತ್ತಾನೆ ಎಂದುದರಿಂದ, ಚೈತ್ರೋ ಮೈತ್ರಾಯ ವಾರ್ತಾಂ ಕಥಯತಿ || ಇತ್ಯಾದಿ ಸ್ಥಲದಲ್ಲಿ ಮೈತ್ರನಿಗೆ ಸಂಪ್ರದಾನಸಂಜ್ಞೆ ಬಂದು ಚತುರ್ಥೀ ಬರುತ್ತದೆ. ಕಥನಕ್ರಿಯೆಯಲ್ಲಿ ವಾರ್ತೆ ಕರ್ಮ. ಅದರ ಸಂಬಂಧ ಮೈತ್ರನಲ್ಲಿ ಆಗುತ್ತದೆ. ಆದುದರಿಂದ ಆತನಿಗೆ ಸಂಪ್ರದಾನಸಂಜ್ಞೆ.

ನಮಃ ಶಬ್ದಾದಿಯೋಗವಿರುವಾಗ ಚತುರ್ಥೀ ಹೇಳುವ ಸೂತ್ರ.

**೯೦೧. ನಮಸ್ಸ್ವಸ್ತಿಸ್ವಾಹಾಸ್ವಧಾಲಂವಷಡ್ಯೋಗಾಚ್ಚ || ೨-೩-೧೬ ||**

**ಏಭಿರ್ಯೋಗೇ ಚತುರ್ಥೀ || ಹರಯೇ ನಮಃ | ಪ್ರಜಾಭ್ಯಃ ಸ್ವಸ್ತಿ | ಅಗ್ನಯೇ ಸ್ವಾಹಾ | ಪಿತೃಭ್ಯಃ ಸ್ವಧಾ | ಅಲಮಿತಿ ಪರ್ಯಾಪ್ತ್ಯರ್ಥಗ್ರಹಣಮ್ | ತೇನ ದೈತ್ಯೇಭ್ಯೋ ಹರಿರಲಂ ಪ್ರಭುಃ ಸಮರ್ಥಃ ಶಕ್ತ ಇತ್ಯಾದಿ ||**

ನಮಃ........ಯೋಗಾತ್, ಚ || ದ್ವಿಪದ ಸೂತ್ರ. 'ಚತುರ್ಥೀ' ಪದವು ಅನುವೃತ್ತವಾಗುತ್ತದೆ. **ಸೂತ್ರಾರ್ಥ**—ನಮಃ, ಸ್ವಸ್ತಿ, ಸ್ವಾಹಾ, ಸ್ವಧಾ, ಅಲಂ, ವಷಟ್—ಈ ಶಬ್ದಗಳ ಯೋಗ ಇರುವಾಗ ಚತುರ್ಥೀವಿಭಕ್ತಿ ಬರುತ್ತದೆ. ಇದು ಪದವನ್ನು ನಿಮಿತ್ತೀಕರಿಸಿ ಬರುವುದರಿಂದ ಉಪಪದವಿಭಕ್ತಿ. ಇದಕ್ಕೆ ಕ್ರಿಯಾಸಂಬಂಧ ಬೇಕಾಗಿಲ್ಲ. ಉದಾ.—ಹರಯೇ ನಮಃ || ಹರಿಗೋಸ್ಕರ ನಮಸ್ಕಾರ. ಪ್ರಜಾಭ್ಯಃ ಸ್ವಸ್ತಿ || ಪ್ರಜೆಗಳಿಗೆ ಮಂಗಳ. ಅಗ್ನಯೇ ಸ್ವಾಹಾ || ಅಗ್ನಿಗೆ ಸಮರ್ಪಣೆ. ಪಿತೃಭ್ಯಃ ಸ್ವಧಾ || ಪಿತೃಗಳಿಗೆ ಸಮರ್ಪಣೆ. ದೇವತೆಗಳಿಗೆ ಅರ್ಪಿಸುವಾಗ ಸ್ವಾಹಾ ಪದವೂ, ಪಿತೃಗಳಿಗೆ ಅರ್ಪಿಸುವಾಗ ಸ್ವಧಾ ಪದವೂ ನಿಯತವಾಗಿದೆ. ಅಲಂ ಎಂದರೆ ಸಮರ್ಥ ಎಂದರ್ಥ. ಅಲಂ ಶಬ್ದ ವಿಷಯದಲ್ಲಿ ಮಾತ್ರ ಆನುಪೂರ್ವಿ ಮಾತ್ರವಲ್ಲ, ಅರ್ಥ

ತೆಗೆದುಕೊಳ್ಳಬೇಕು. ಪರ್ಯಾಪ್ತ್ಯರ್ಥವುಳ್ಳ ಪದಗಳ ಯೋಗವಿರುವಾಗ ಚತುರ್ಥಿ ಯೆಂದು ತಿಳಿಯಬೇಕು. ದೈತ್ಯೇಭ್ಯೋ ಹರಿರಲಂ, ಪ್ರಭುಃ, ಸಮರ್ಥಃ, ಶಕ್ತಃ ॥ ಅಲಮಾದಿ ಶಬ್ದಗಳು ಪರ್ಯಾಪ್ತ್ಯರ್ಥವನ್ನು ಕೊಡುವುದರಿಂದ ಅವುಗಳ ಯೋಗ ವಿರುವಾಗ ಚತುರ್ಥೀವಿಭಕ್ತಿ ಬಂದಿದೆ.

ಇತಿ ಚತುರ್ಥೀ ॥

ಅಪಾದಾನಸಂಜ್ಞೆಯನ್ನು ಹೇಳುವ ಸೂತ್ರ.

**೬೦೨. ಧ್ರುವಮಪಾಯೇಽಪಾದಾನಮ್ ॥ ೧-೪-೨೪ ॥**

**ಅಪಾಯೋ ವಿಶ್ಲೇಷಸ್ತಸ್ಮಿನ್ ಸಾಧ್ಯೇ ಯದ್ ಧ್ರುವಮವಧಿಭೂತಂ ಕಾರಕಂ ತದಪಾದಾನಂ ಸ್ಯಾತ್ ॥**

ಧ್ರುವಂ, ಅಪಾಯೇ, ಅಪಾದಾನಮ್ ॥ ತ್ರಿಪದ ಸೂತ್ರ. ಅಪಾಯವೆಂದರೆ ವಿಶ್ಲೇಷ, ಬೇರೆಯಾಗುವುದು. ವಿಭಾಗವಾಗುವುದಕ್ಕೆ ಅನುಕೂಲವಾದ ವ್ಯಾಪಾರ. **ಸೂತ್ರಾರ್ಥ**—ವಿಭಾಗಾನುಕೂಲವ್ಯಾಪಾರವುಂಟಾಗುವಾಗ ಯಾವುದು ಆ ವ್ಯಾಪಾ ರಕ್ಕೆ ಆಶ್ರಯವಾಗದೆ ಉದಾಸೀನವಾಗಿ ನಿಶ್ಚಲವಾಗಿರುವುದೋ ಅದು ಅಪಾದಾನ ಸಂಜ್ಞೆಯನ್ನು ಹೊಂದುತ್ತದೆ. ಪ್ರಕೃತ ಧಾತ್ವರ್ಥವಾದ ವ್ಯಾಪಾರಕ್ಕೆ ಆಶ್ರಯವಾಗದೆ ವ್ಯಾಪಾರದಿಂದ ಉಂಟಾದ ವಿಭಾಗಕ್ಕೆ ಆಶ್ರಯವಾದುದು ಅಪಾದಾನವೆಂದರ್ಥ.

ಅಪಾದಾನಕ್ಕೆ ಪಂಚಮೀ ಹೇಳುವ ಸೂತ್ರ.

**೬೦೩. ಅಪಾದಾನೇ ಪಂಚಮೀ ॥ ೨-೩-೨೮ ॥**

**ಗ್ರಾಮಾದಾಯಾತಿ । ಧಾವತೋಽಶ್ವಾತ್ಪತತೀತ್ಯಾದಿ ॥**

ದ್ವಿಪದ ಸೂತ್ರ. **ಸೂತ್ರಾರ್ಥ**—ಯಾವುದರಿಂದಲೂ ಅಭಿಹಿತವಾಗದಿರುವ ಅಪಾದಾನಕ್ಕೆ ಪಂಚಮೀವಿಭಕ್ತಿ ಬರುತ್ತದೆ. ಉದಾ.—ಗ್ರಾಮಾದಾಯಾತಿ ॥ ಗ್ರಾಮದ ದೆಸೆಯಿಂದ ಬರುತ್ತಾನೆ. ಆಯಾತಿ ಧಾತುವಿಗೆ ವಿಭಾಗಾನುಕೂಲವ್ಯಾಪಾರ ಅರ್ಥ. ಗ್ರಾಮದಿಂದ ದೇವದತ್ತನಿಗೆ ವಿಶ್ಲೇಷವುಂಟಾಗುತ್ತದೆ. ವಿಭಾಗಜನಕವಾದ ವ್ಯಾಪಾರ ದೇವದತ್ತನಲ್ಲಿದೆ. ವ್ಯಾಪಾರದಿಂದ ಉಂಟಾದ ವಿಭಾಗಕ್ಕೆ ಗ್ರಾಮವು ಆಶ್ರಯವಾದುದರಿಂದ ಅದು ಅಪಾದಾನಸಂಜ್ಞೆಯನ್ನು ಹೊಂದುತ್ತದೆ. ನಿಶ್ಚಲ ವಾಗಿದೆ. ಆದುದರಿಂದ ಅದರ ಮೇಲೆ ಪಂಚಮೀ ಬಂದಿದೆ. 'ಧಾವತಃ ಅಶ್ವಾತ್ ಪತತಿ ॥' ಓಡುವ ಕುದುರೆಯಿಂದ ಬೀಳುತ್ತಾನೆ. ಅಪಾದಾನವೆಲ್ಲವೂ ನಿಶ್ಚಲವಾಗಿರ ಬೇಕೆಂದು ನಿಯಮವಿಲ್ಲ. ಪ್ರಕೃತ ಧಾತ್ವರ್ಥವ್ಯಾಪಾರಕ್ಕೆ ಆಶ್ರಯವಾಗದಿದ್ದರೆ ಸಂಜ್ಞೆ ಬರುತ್ತದೆ. ಇದನ್ನು ಸೂಚಿಸಲು ಎರಡನೇ ಉದಾಹರಣೆ ತೋರಿಸಿರುತ್ತಾನೆ. ಅಲ್ಲಿ ಪ್ರಕೃತ ಧಾತ್ವರ್ಥ ಪತನಕ್ರಿಯಾ. ಇದು ಚೈತ್ರನಲ್ಲಿ ಇದೆ. ಪತನಕ್ರಿಯೆಯಿಂದ

ಉಂಟಾದ ವಿಭಾಗವು ಕುದುರೆಯಲ್ಲಿದೆ. ಕುದುರೆಯಲ್ಲಿ ಭಾವನಕ್ರಿಯೆಯಿದ್ದರೂ ಅಪಾದಾನಸಂಜ್ಞೆ ಬಂದು ಪಂಚಮೀ ಬಂದಿದೆ.

ಇತಿ ಪಂಚಮೀ ||

ಶೇಷಾರ್ಥದಲ್ಲಿ ಷಷ್ಠೀ ಹೇಳುವ ಸೂತ್ರ.

೯೦೪. ಷಷ್ಠೀ ಶೇಷೇ || ೨-೩-೫೦ ||

**ಕಾರಕಪ್ರಾತಿಪದಿಕಾರ್ಥವ್ಯತಿರಿಕ್ತಃ ಸ್ವಸ್ವಾಮಿಭಾವಾದಿಃ ಸಂಬಂಧಃ ಶೇಷಸ್ತತ್ರ ಷಷ್ಠೀ। ರಾಜ್ಞಃ ಪುರುಷಃ। ಕರ್ಮಾದೀನಾಮಪಿ ಸಂಬಂಧ ಮಾತ್ರವಿವಕ್ಷಾಯಾಂ ಷಷ್ಠ್ಯೇವ। ಸತಾಂ ಗತಮ್। ಸರ್ಪಿಷೋ ಜಾನೀತೇ। ಮಾತುಃ ಸ್ಮರತಿ। ಏಧೋ ದಕಸ್ಯೋಪಸ್ಕುರುತೇ। ಭಜೇ ಶಂಭೋ ಶ್ಚರಣಯೋಃ ||**

ದ್ವಿಪದ ಸೂತ್ರ. ಹಿಂದೆ ಹೇಳಿ ಉಳಿದಿರುವುದು ಶೇಷ. ಈ ಹಿಂದೆ ಕರ್ಮ, ಕರ್ತೃ, ಕರಣ, ಸಂಪ್ರದಾನ, ಅಪಾದಾನ, ಅಧಿಕರಣ ಸಂಜ್ಞೆಯುಳ್ಳ ಕಾರಕಗಳು ಉಕ್ತವಾಗಿವೆ. ಪ್ರಾತಿಪದಿಕಾರ್ಥದಲ್ಲಿ ಪ್ರಥಮಾವಿಭಕ್ತಿಯೂ ಹೇಳಿದೆ. **ಸೂತ್ರಾರ್ಥ**—ಕಾರಕಪ್ರಾತಿಪದಿಕಾರ್ಥಭಿನ್ನವಾದ ಸ್ವಸ್ವಾಮಿಭಾವಾದಿ ಸಂಬಂಧ ತೋರುವಾಗ ಷಷ್ಠೀವಿಭಕ್ತಿ ಬರುತ್ತದೆ. ಸಂಬಂಧಸಾಮಾನ್ಯವೇ ಶೇಷ. ರಾಜ್ಞಃ ಪುರುಷಃ || ರಾಜಸಂಬಂಧಿ ಪುರುಷನೆಂದರ್ಥ. ಸ್ವತ್ವ, ಸ್ವಾಮಿತ್ವಸಂಬಂಧ ಷಷ್ಠಿಯಿಂದ ತೋರುತ್ತದೆ. ಕರ್ಮಾದಿಕಾರಕಗಳಿಗೂ ಸಂಬಂಧ ಮಾತ್ರ ವಿವಕ್ಷಾಮಾಡಿದಾಗ ಷಷ್ಠೀ ಬರುತ್ತದೆ. ಉದಾ.—ಸತಾಂ ಗತಮ್ || ಸಜ್ಜನರ ಗಮನ. ಇಲ್ಲಿ ಗಮನದಲ್ಲಿ ಕರ್ತೃ ಸಜ್ಜನ. ಕರ್ತೃವಿಗೆ ತೃತೀಯಾ ಬರಬೇಕಿತ್ತು. ಆದರೆ ಕರ್ತೃವಿವಕ್ಷಾಮಾಡದೆ ಸಂಬಂಧ ಮಾತ್ರ ವಿವಕ್ಷಾಮಾಡಿದೆ. ಆದುದರಿಂದ ಷಷ್ಠೀ. ಸರ್ಪಿಷೋ ಜಾನೀತೇ || ಜ್ಞಾನದಲ್ಲಿ ತುಪ್ಪವು ಕರ್ಮ. ಕರ್ಮವಿವಕ್ಷಾ ಮಾಡದೆ ಸಂಬಂಧ ಮಾತ್ರ ವಿವಕ್ಷಾ ಮಾಡಿರುವುದರಿಂದ ಷಷ್ಠೀ. ಮಾತುಃ ಸ್ಮರತಿ || ತಾಯಿಯನ್ನು ಸ್ಮರಿಸುತ್ತಾನೆ. ಸ್ಮರಣೆಯಲ್ಲಿ ತಾಯಿ ಕರ್ಮ. ಕರ್ಮಕ್ಕೆ ಸಂಬಂಧಸಾಮಾನ್ಯ ವಿವಕ್ಷೆ ಮಾಡಿದುದರಿಂದ ಮಾತುಃ ಎಂದು ಷಷ್ಠೀ ಬಂದಿದೆ. ಏಧಃ ದಕಸ್ಯ ಉಪಸ್ಕುರುತೇ || ಕಟ್ಟಿಗೆಯು ನೀರಿಗೆ ಗುಣ(ಬಿಸಿ)ವನ್ನುಂಟುಮಾಡುತ್ತದೆ. ನೀರು ಅಧಿಕರಣ. ಇದಕ್ಕೆ ಸಂಬಂಧ ಸಾಮಾನ್ಯ ವಿವಕ್ಷೆಮಾಡಿದುದರಿಂದ ಷಷ್ಠೀ ಬಂದಿದೆ. 'ಭಜೇ ಶಂಭೋಶ್ಚರಣಯೋಃ' ಈಶ್ವರನ ಕಾಲುಗಳನ್ನು ಭಜಿಸುತ್ತೇನೆ. ಭಜನದಲ್ಲಿ ಚರಣ ಕರ್ಮ. ಅದಕ್ಕೆ ಸಂಬಂಧ ಸಾಮಾನ್ಯದಲ್ಲಿ ಷಷ್ಠೀ ಬಂದಿದೆ.

ಇತಿ ಷಷ್ಠೀ ||

ಅಧಿಕರಣಸಂಜ್ಞಾವಿಧಾಯಕ ಸೂತ್ರ.

೯೦೫. ಆಧಾರೋಽಧಿಕರಣಮ್ ॥ ೧-೪-೪೫ ॥

**ಕರ್ತೃಕರ್ಮದ್ವಾರಾ ತನ್ನಿಷ್ಠಕ್ರಿಯಾಯಾ ಆಧಾರಃ ಕಾರಕಮಧಿಕರಣಂ ಸ್ಯಾತ್ ॥**

ದ್ವಿಪದ ಸೂತ್ರ. **ಸೂತ್ರಾರ್ಥ**—ಕರ್ತೃ, ಕರ್ಮಗಳ ಮೂಲಕ ಅವುಗಳಲ್ಲಿರುವ ವ್ಯಾಪಾರಕ್ಕೆ ಆಧಾರವಾದ (ಆಶ್ರಯವಾದ) ಕಾರಕಕ್ಕೆ ಅಧಿಕರಣಸಂಜ್ಞೆ ಬರುತ್ತದೆ. ಕರ್ತೃವಿನಲ್ಲಿರುವ ವ್ಯಾಪಾರಕ್ಕೆ ಸಾಕ್ಷಾತ್ತಾದ ಆಶ್ರಯ ಕರ್ತೃವೇ ಆಗುತ್ತಾನೆ. ಹಾಗೇ ಕರ್ಮದಲ್ಲಿರುವ ಕ್ರಿಯೆಗೆ ಆಶ್ರಯ ಕರ್ಮವೇ. ಆದುದರಿಂದ ಪರಂಪರಯಾ ಆಶ್ರಯನಾದವನು ಎಂದರ್ಥಮಾಡಬೇಕು. ಕರ್ತೃ, ಕರ್ಮಗಳ ಮೂಲಕ ಕ್ರಿಯೆಗೆ ಆಶ್ರಯನಾದವನು ಅಧಿಕರಣ ಎಂದರ್ಥ.

ಅಧಿಕರಣಕ್ಕೆ ಸಪ್ತಮೀ ಹೇಳುವ ಸೂತ್ರ.

೯೦೬. ಸಪ್ತಮ್ಯಧಿಕರಣೇ ಚ ॥ ೨-೩-೩೬ ॥

**ಅಧಿಕರಣೇ ಸಪ್ತಮೀ ಸ್ಯಾತ್, ಚಕಾರಾದ್ದೂರಾಂತಿಕಾರ್ಥೇಭ್ಯಃ । ಔಪಶ್ಲೇಷಿಕೋ ವೈಷಯಿಕೋಽಭಿವ್ಯಾಪಕಶ್ಚೇತ್ಯಾಧಾರಸ್ತ್ರಿಧಾ । ಕಟೇ ಆಸ್ತೇ । ಸ್ಥಾಲ್ಯಾಂ ಪಚತಿ । ಮೋಕ್ಷೇ ಇಚ್ಛಾಸ್ತಿ । ಸರ್ವಸ್ಮಿನ್ನಾತ್ಮಾಸ್ತಿ । ವನಸ್ಯ ದೂರೇ ಅಂತಿಕೇ ವಾ ॥** ಇತಿ ಸಪ್ತಮೀ ॥

ಸಪ್ತಮೀ, ಅಧಿಕರಣೇ, ಚ ॥ ತ್ರಿಪದ ಸೂತ್ರ. 'ದೂರಾಂತಿಕಾರ್ಥೇಭ್ಯೋ ದ್ವಿತೀಯಾ ಚ' ಹಿಂದಿನ ಸೂತ್ರ. ಚಕಾರದಿಂದ 'ದೂರಾಂತಿಕಾರ್ಥೇಭ್ಯಃ' ಪದವು ಅನುವೃತ್ತವಾಗುತ್ತದೆ. **ಸೂತ್ರಾರ್ಥ**—ಅಧಿಕರಣವಾಚಕ ಪದದ ಮೇಲೂ, ದೂರ ಅಂತಿಕ ಅರ್ಥಕೊಡುವ ಶಬ್ದದ ಮೇಲೂ ಸಪ್ತಮೀ ಬರುತ್ತದೆ. ಅಧಿಕರಣ ಮೂರು ವಿಧವಾಗಿದೆ: ಔಪಶ್ಲೇಷಿಕ ಆಧಾರ, ವೈಷಯಿಕಾಧಾರ, ಅಭಿವ್ಯಾಪಕಾಧಾರ— ಹೀಗೆ ಮೂರು ರೀತಿಯಾದವುಗಳಿಗೆ ಉದಾಹರಣೆ ತೋರಿಸುತ್ತಾನೆ. ಉಪಶ್ಲೇಷ ಎಂದರೆ ಸಂಯೋಗಾದಿಸಂಬಂಧ. ಈ ಸಂಬಂಧದ ಮೂಲಕ ಬಂದಿರುವ ಆಧಾರವೇ ಔಪಶ್ಲೇಷಿಕ. 'ಕಟೇ ಆಸ್ತೇ ॥' ಇಲ್ಲಿ ಕಟ ಔಪಶ್ಲೇಷಿಕಾಧಾರ. ಚಾಪೆಯ ಒಂದು ಕಡೆಯಲ್ಲಿ ಕುಳಿತಿರುತ್ತಾನೆ. ಕರ್ತೃ ಚೈತ್ರ. ಅವನಲ್ಲಿರುವ ಕ್ರಿಯೆ ಆಸನ (ಇರುವಿಕೆ). ಚೈತ್ರನ ಮೂಲಕ ಈ ಇರುವಿಕೆರೂಪವ್ಯಾಪಾರಕ್ಕೆ ಚಾಪೆಯು ಆಶ್ರಯವಾದುದರಿಂದ ಅಧಿಕರಣಸಂಜ್ಞೆ ಬಂದು ಸಪ್ತಮೀವಿಭಕ್ತಿ ಹೊಂದುತ್ತದೆ. ವಿಷಯತಾ ಸಂಬಂಧ ಮೂಲಕವಾಗಿ ಆಧಾರವಾದುದಕ್ಕೆ ವೈಷಯಿಕಾಧಾರವೆಂದು ಹೆಸರು. **ಮೋಕ್ಷೇ ಇಚ್ಛಾ ಅಸ್ತಿ ॥** ಅಸ್ತಿ ಕ್ರಿಯಾದಲ್ಲಿ (ಇರುವುದು) ಕರ್ತೃ ಇಚ್ಛಾ. ಇಚ್ಛಾ ಮೂಲಕವಾಗಿ ಅಸ್ತಿ ಕ್ರಿಯೆಗೆ ಆಧಾರವಾದುದು ಮೋಕ್ಷ. ಮೋಕ್ಷವಿಷಯಕ ಇಚ್ಛೆ

ಇದೆಯೆಂದರ್ಥ. ಸರ್ವಾವಯವಸಂಬಂಧನಿಮಿತ್ತವಾಗಿ ಬಂದಿರುವ ಆಧಾರಕ್ಕೆ ಅಭಿವ್ಯಾಪಕವೆಂದು ಹೆಸರು. ಸರ್ವಸ್ಮಿನ್ ಆತ್ಮಾ ಅಸ್ತಿ ॥ ಎಲ್ಲೆಡೆಯಲ್ಲಿಯೂ ಆತ್ಮನಿರುತ್ತಾನೆ. ಇಲ್ಲಿಯೂ ಅಸ್ತಿಕ್ರಿಯೆಗೆ (ಇರುವಿಕೆ) ಕರ್ತೃ ಆತ್ಮಾ. ಆತ್ಮನ ಮೂಲಕ ಅಸ್ತಿಕ್ರಿಯೆಗೆ ಸರ್ವವು ಆಶ್ರಯವಾಗಿ ಅಧಿಕರಣಸಂಜ್ಞೆ ಹೊಂದಿದೆ. ಆದುದರಿಂದ ಸಪ್ತಮೀ ಬಂದಿದೆ. ಔಪಶ್ಲೇಷಿಕಾಧಿಕರಣವೇ ಹೆಚ್ಚಾಗಿ ಪ್ರಯೋಗದಲ್ಲಿರುತ್ತದೆ. ಸ್ಥಾಲ್ಯಾಂ ಪಚತಿ ॥ ತಪ್ಪಲೆಯಲ್ಲಿ ಬೇಯಿಸುತ್ತಾನೆ. ಇಲ್ಲಿ ಸ್ಥಾಲೀ ಔಪಶ್ಲೇಷಿಕಾಧಿಕರಣ. ಕರ್ಮ ತಂಡುಲ (ಅಕ್ಕಿ). ಅಕ್ಕಿಯು ಇಡೀ ತಪ್ಪಲೆಯಲ್ಲಿರುವುದಿಲ್ಲ. ಪಾಕಕ್ರಿಯೆಯಲ್ಲಿ ಕರ್ಮ ತಂಡುಲ. ತಂಡುಲ ಮೂಲಕ ಪಾಕಕ್ರಿಯೆಗೆ ಆಧಾರವಾದುದು ಸ್ಥಾಲೀ (ತಪ್ಪಲೆ). ಇದಕ್ಕೆ ಅಧಿಕರಣಸಂಜ್ಞೆ ಬಂದು ಸಪ್ತಮೀ ಬಂದಿದೆ. ಹೀಗೆ ಕರ್ತೃ, ಕರ್ಮಗಳಲ್ಲಿರುವ ಕ್ರಿಯೆಗೆ ಅವುಗಳ ಮೂಲಕ ಆಶ್ರಯವಾದುದು ಅಧಿಕರಣ ಎಂದು ತಿಳಿಯಬೇಕು. ದೂರ, ಹತ್ತಿರ ಅರ್ಥ ಕೊಡುವ ಶಬ್ದಗಳ ಮೇಲೆ ಸಪ್ತಮೀ ಬಂದುದಕ್ಕೆ ಉದಾಹರಣೆ. ವನಸ್ಯ ದೂರೇ, ಅಂತಿಕೇ ವಾ ॥ ಕಾಡಿನ ದೂರದಲ್ಲಿ ಅಥವಾ ಹತ್ತಿರದಲ್ಲಿ. ದೂರ, ಅಂತಿಕ ಶಬ್ದಗಳ ಮೇಲೆ ಸಪ್ತಮೀ ಬಂದಿದೆ. ಸಪ್ತಮಿಯೊಡನೆ ತೃತೀಯಾ ಪಂಚಮೀ ದ್ವಿತೀಯಾವಿಭಕ್ತಿಗಳೂ ಬರುತ್ತವೆ. ವನಸ್ಯ ದೂರೇಣ, ದೂರಾತ್, ದೂರಂ, ದೂರೇ ವಾ ಎಂದಾಗುತ್ತದೆ. ಹೀಗೆ ಸಪ್ತಮೀ ವಿಭಕ್ತ್ಯರ್ಥ ವಿವೃತವಾಗಿದೆ. ಎಲ್ಲಾ ವಿಭಕ್ತಿಗಳೂ ಒಂದೇ ಕಡೆ ಬಂದುದಕ್ಕೆ ಈ ಶ್ಲೋಕವನ್ನು ಉದಾಹರಿಸುತ್ತಾರೆ:

> **ರಾಮೋ** ರಾಜಮಣಿಃ ಸದಾ ವಿಜಯತೇ **ರಾಮಂ** ರಮೇಶಂ ಭಜೇ ।
> **ರಾಮೇಣಾ**ಭಿಹತಾ ನಿಶಾಚರಚಮೂ **ರಾಮಾಯ** ತಸ್ಮೈ ನಮಃ ॥
> **ರಾಮಾನ್ನಾ**ಸ್ತಿ ಪರಾಯಣಂ ಪರತರಂ **ರಾಮಸ್ಯ** ದಾಸೋಽಸ್ಮ್ಯಹಂ ।
> **ರಾಮೇ** ಚಿತ್ತಲಯಃ ಸದಾ ಭವತು ಮೇ **ಭೋ ರಾಮ** ಮಾಮುದ್ಧರ ॥

ಪ್ರಾತಿಪದಿಕಾರ್ಥದಲ್ಲಿ **ಪ್ರಥಮಾ**. ರಾಮಃ ವಿಜಯತೇ ॥ ರಾಮಂ ಭಜೇ ॥ ಭಜನಕ್ರಿಯೆಯಲ್ಲಿ ರಾಮ **ಕರ್ಮ**. ರಾಮೇಣ ನಿಶಾಚರಚಮೂ ಅಭಿಹತಾ ॥ ಹನನದಲ್ಲಿ ರಾಮ **ಕರ್ತೃ**. ರಾಮಾಯ ತಸ್ಮೈ ನಮಃ ॥ ನಮಃ ಶಬ್ದಯೋಗವಿರುವಾಗ **ಚತುರ್ಥೀ**. ರಾಮಾತ್ ಪರಾಯಣಂ ಪರತರಂ ನಾಸ್ತಿ ॥ ಇಲ್ಲಿ ರಾಮ **ಅಪಾದಾನ**. ರಾಮಸ್ಯ ದಾಸಃ ಅಸ್ಮಿ ॥ ಸಂಬಂಧದಲ್ಲಿ **ಷಷ್ಠೀ**. **ರಾಮೇ** ಚಿತ್ತಲಯಃ ಭವತು ॥ ರಾಮ **ಅಧಿಕರಣ**. **ಭೋ ರಾಮ** ಮಾಂ ಉದ್ಧರ. ಸಂಬೋಧನಾಧಿಕ್ಯದಲ್ಲಿ **ಪ್ರಥಮಾ** ಬಂದಿದೆ. ಹೀಗೆ ಏಳು ವಿಭಕ್ತ್ಯರ್ಥಗಳು ವಿವೃತವಾಗಿವೆ.

**ಇತಿ ವಿಭಕ್ತ್ಯರ್ಥಾಃ** ॥

# ೧೭. ಅಥ ಸಮಾಸಾಃ

ತತ್ರಾದೌ ಕೇವಲಸಮಾಸಃ॥ ಸಮಾಸಃ ಪಂಚಧಾ। ತತ್ರ ಸಮಸನಂ ಸಮಾಸಃ। ಸ ಚ ವಿಶೇಷಸಂಜ್ಞಾವಿನಿರ್ಮುಕ್ತಃ ಕೇವಲಸಮಾಸಃ ಪ್ರಥಮಃ ॥ ೧ ॥ ಪ್ರಾಯೇಣ ಪೂರ್ವಪದಾರ್ಥಪ್ರಧಾನೋಽವ್ಯಯೀಭಾವೋ ದ್ವಿತೀಯಃ ॥ ೨ ॥ ಪ್ರಾಯೇಣೋತ್ತರಪದಾರ್ಥಪ್ರಧಾನಸ್ತತ್ಪುರುಷಸ್ತೃತೀಯಃ। ತತ್ಪುರುಷಭೇದಃ ಕರ್ಮಧಾರಯಃ। ಕರ್ಮಧಾರಯಭೇದೋ ದ್ವಿಗುಃ ॥ ೩ ॥ ಪ್ರಾಯೇಣಾನ್ಯಪದಾರ್ಥಪ್ರಧಾನೋ ಬಹುವ್ರೀಹಿಶ್ಚತುರ್ಥಃ ॥ ೪ ॥ ಪ್ರಾಯೇಣೋಭಯಪದಾರ್ಥಪ್ರಧಾನೋ ದ್ವಂದ್ವಃ ಪಂಚಮಃ ॥ ೫ ॥

ಮೊದಲು ಕೇವಲಸಮಾಸವನ್ನು ವಿವರಿಸುತ್ತಾನೆ. ಸಮಾಸವು ಐದು ವಿಧವಾಗಿದೆ. ಅನೇಕ ಪದಗಳು ಸೇರಿ ಒಂದೇ ಪದವಾಗಿ ಒಂದರ್ಥವನ್ನು ತಿಳಿಸಿಕೊಡುವುದೇ ಸಮಾಸ. ರಾಜ್ಞಃ ಪುರುಷಃ—ಇಲ್ಲಿ ಎರಡು ಪದಗಳಿವೆ. ಇವೆರಡೂ ಸೇರಿ ಒಂದು ಪದವಾದರೆ ರಾಜಪುರುಷಃ ಎಂದಾಗುತ್ತದೆ. ಇದು ಸಮಾಸ. ಮೊದಲು ಎರಡು ಪದಗಳು ಬೇರೆ ಬೇರೆ ಸ್ವತಂತ್ರ ಅರ್ಥವನ್ನು ಕೊಡುತ್ತಿದ್ದು ಸಮಾಸವಾದಾಗ ಅಖಂಡ ಏಕಾರ್ಥವನ್ನು ಕೊಡುತ್ತವೆ. ಇದಕ್ಕೆ ಏಕಾರ್ಥೀಭಾವಸಾಮರ್ಥ್ಯವೆನ್ನುತ್ತಾರೆ. ಏಕಾರ್ಥೀಭಾವಸಾಮರ್ಥ್ಯದಿಂದ ಕೂಡಿರುವುದು ಸಮಾಸ. ಈ ಸಮಾಸದಲ್ಲಿ ಅವ್ಯಯೀಭಾವಾದಿ ಸಂಜ್ಞೆಯಿಲ್ಲದೆ ಸಾಮಾನ್ಯವಾಗಿ ವಿಹಿತವಾದವುಗಳಿಗೆ **ಕೇವಲ** ಸಮಾಸವೆಂದು ಹೆಸರು. ಇದು ಮೊದಲನೆಯ ಸಮಾಸ. ಸಾಮಾನ್ಯವಾಗಿ ಪೂರ್ವಪದಕ್ಕೆ ಎಲ್ಲಿ ಪ್ರಾಧಾನ್ಯವಿರುತ್ತದೆಯೋ ಅದಕ್ಕೆ **ಅವ್ಯಯೀಭಾವ** ಸಮಾಸವೆಂದು ಹೆಸರು. ಮೂರನೆಯದು **ತತ್ಪುರುಷ** ಸಮಾಸ. ಸಾಮಾನ್ಯವಾಗಿ ಇಲ್ಲಿ ಉತ್ತರಪದಕ್ಕೆ ಪ್ರಾಧಾನ್ಯವಿರುತ್ತದೆ. ಸಾಮಾನ್ಯವಾಗಿ ಎಂದುದರಿಂದ ಕೆಲವು ಕಡೆ ಹಾಗೆ ಪ್ರಾಧಾನ್ಯವಿಲ್ಲವಾದರೂ ದೋಷವಿಲ್ಲ. ತತ್ಪುರುಷ ಸಮಾಸದ ಅವಾಂತರಭೇದವೇ **ಕರ್ಮಧಾರಯ** ಸಮಾಸ. ಕರ್ಮಧಾರಯದಲ್ಲಿ ಎರಡು ಪದಗಳೂ ಒಂದೇ ವಿಭಕ್ತ್ಯಂತವಾಗಿರುತ್ತವೆ. ಕರ್ಮಧಾರಯದ ಅವಾಂತರಭೇದವೇ **ದ್ವಿಗು** ಸಮಾಸ. ಇಲ್ಲಿ ಸಂಖ್ಯಾವಾಚಕಪದಗಳು ಪೂರ್ವಪದವಾಗಿರುತ್ತವೆ. ನಾಲ್ಕನೆಯದು **ಬಹುವ್ರೀಹಿ** ಸಮಾಸ. ಇದರಲ್ಲಿ ಸಾಮಾನ್ಯವಾಗಿ ಅನ್ಯಪದಾರ್ಥಕ್ಕೆ ಪ್ರಾಧಾನ್ಯವಿರುತ್ತದೆ. ಸಮಾಸದಲ್ಲಿರುವ ಪದಾರ್ಥಗಳಿಗೆ ಪ್ರಾಧಾನ್ಯವಿರುವುದಿಲ್ಲ. ಐದನೆಯದು **ದ್ವಂದ್ವ** ಸಮಾಸ. ಇಲ್ಲಿ ಸಾಮಾನ್ಯವಾಗಿ ಉಭಯ (ಎರಡು) ಪದಾರ್ಥಗಳಿಗೂ ಪ್ರಾಧಾನ್ಯವಿರುತ್ತದೆ. ಭೂತಪೂರ್ವಃ॥ ಇದು ಕೇವಲಸಮಾಸ. ಇದು ಅವ್ಯಯೀಭಾವಾದಿ ಸಂಜ್ಞೆಗೆ ಒಳಪಡುವುದಿಲ್ಲ. ಅಧಿಹರಿ॥ (ಹರಿಯಲ್ಲಿ) ಇದು ಅವ್ಯಯೀಭಾವ. ಇಲ್ಲಿ ಸಪ್ತಮ್ಯರ್ಥ

ವನ್ನು ಕೊಡುವ ಅಧಿ ಎಂಬ ಪೂರ್ವಪದಕ್ಕೆ ಪ್ರಾಧಾನ್ಯವಿರುತ್ತದೆ. ರಾಜಪುರುಷಃ || ಇದು ತತ್ಪುರುಷ ಸಮಾಸ. ಪುರುಷನಿಗೇ ಇಲ್ಲಿ ಪ್ರಾಧಾನ್ಯವಿದೆ. ನೀಲಘಟಃ || ಇದು ಕರ್ಮಧಾರಯ. ಇಲ್ಲಿಯೂ ಉತ್ತರಪದಾರ್ಥವಾದ ಘಟಕ್ಕೇ ಪ್ರಾಧಾನ್ಯವಿದೆ. ಪಂಚಗವಮ್ || ಇದು ದ್ವಿಗು ಸಮಾಸ. ಸಂಖ್ಯಾವಾಚಕಪದ ಪೂರ್ವಪದವಾಗಿದೆ. ನೀಲಾಂಬರಃ || ಇದು ಬಹುವ್ರೀಹಿ ಸಮಾಸ. ನೀಲವಾದ ಬಟ್ಟೆಯುಳ್ಳವನು, ಹರಿ. ನೀಲ, ಅಂಬರ ಪದಾರ್ಥ ಬಿಟ್ಟು ಇತರ ಹರಿ ಪದಾರ್ಥಕ್ಕೆ ಪ್ರಾಧಾನ್ಯ ತೋರುತ್ತದೆ. ರಾಮಕೃಷ್ಣೌ || ದ್ವಂದ್ವ ಸಮಾಸ. ಇಲ್ಲಿ ಎರಡು ಪದಾರ್ಥಗಳಿಗೂ ಪ್ರಾಧಾನ್ಯವಿದೆ.

ಸಮಾಸಾದಿಗಳಿಗೆ ಸಾಮರ್ಥ್ಯ ಹೇಳುವ ಸೂತ್ರ.

**೯೦೭. ಸಮರ್ಥಃ ಪದವಿಧಿಃ || ೨-೧-೧ ||**

**ಪದಸಂಬಂಧೀ ಯೋ ವಿಧಿಃ ಸ ಸಮರ್ಥಾಶ್ರಿತೋ ಬೋಧ್ಯಃ ||**

ವಿಧೀಯತೇ ಇತಿ ವಿಧಿಃ || ಕಾರ್ಯವೆಂದರ್ಥ. **ಸೂತ್ರಾರ್ಥ**— ಪದಸಂಬಂಧಿಯಾದ ಯಾವ ಕಾರ್ಯವಿದೆಯೋ ಅದು ಪರಸ್ಪರ ಅನ್ವಿತವಾದ ಅರ್ಥವನ್ನು ಆಶ್ರಯಿಸಿರುತ್ತದೆ. ಪದವನ್ನು ಉದ್ದೇಶಿಸಿ ಹೇಳಿರುವ ಸಮಾಸಸಂಜ್ಞಾದಿ ಪದಕಾರ್ಯವು ಸಾಮರ್ಥ್ಯವಿಶಿಷ್ಟವಾಗಿರುತ್ತದೆ. ಸಮರ್ಥ ಪದಕ್ಕೆ ಸಮರ್ಥಾಶ್ರಿತವೆಂದರ್ಥ. ಸಮರ್ಥಾಶ್ರಯವಾದುದಕ್ಕೆ ಪದಕಾರ್ಯ ಬರುತ್ತದೆ. ಸಂಗತಾರ್ಥಃ, ಸಂಸೃಷ್ಟಾರ್ಥಃ, ಸಮರ್ಥಃ— ಇವು ಏಕಾರ್ಥಗಳು. ಹಿಂದೆ ಹೇಳಿದಂತೆ ಏಕಾರ್ಥೀಭಾವಸಾಮರ್ಥ್ಯ ಸಮಾಸದಲ್ಲಿರಬೇಕು ಎಂದು ತಾತ್ಪರ್ಯ.

ಸಮಾಸಾಧಿಕಾರ ಹೇಳುವ ಸೂತ್ರ.

**೯೦೮. ಪ್ರಾಕ್ಕಡಾರಾತ್ಸಮಾಸಃ || ೨-೧-೩ ||**

**'ಕಡಾರಾಃ ಕರ್ಮಧಾರಯೇ' ಇತ್ಯತಃ ಪ್ರಾಕ್ ಸಮಾಸ ಇತ್ಯಧಿಕ್ರಿಯತೇ ||**

ಪ್ರಾಕ್, ಕಡಾರಾತ್, ಸಮಾಸಃ || ತ್ರಿಪದ ಸೂತ್ರ. 'ಕಡಾರಾಃ ಕರ್ಮಧಾರಯೇ' ಸೂತ್ರದವರೆಗೆ, (ಆದರಿಂದ ಹಿಂದಿನ ಸೂತ್ರದವರೆಗೆ) ಸಮಾಸ ಎಂಬುದು ಅಧಿಕೃತವಾಗುತ್ತದೆ. ಪ್ರತಿಯೊಂದು ಸೂತ್ರದಲ್ಲಿಯೂ ಸಮಾಸವೆಂಬುದು ಅನುವೃತ್ತವಾಗುತ್ತದೆ. ಅನೇಕ ಪದಗಳು ಒಂದಾಗಿ ಸೇರುವುದೇ ಸಮಾಸ.

ಸುಪ್‌ಸುಪ್ ಸಮಾಸವಿಧಾಯಕ ಸೂತ್ರ.

**೯೦೯. ಸಹ ಸುಪಾ || ೨-೧-೪ ||**

**ಸುಪ್ ಸುಪಾ ಸಹ ವಾ ಸಮಸ್ಯತೇ || ಸಮಾಸತ್ವಾತ್ಪ್ರಾತಿಪದಿಕತ್ವೇನ ಸುಪೋ ಲುಕ್ | ಪರಾರ್ಥಾಭಿಧಾನಂ ವೃತ್ತಿಃ | ಕೃತ್ತದ್ಧಿತಸಮಾಸೈಕಶೇಷ-**

**ಸನಾದ್ಯಂತಧಾತುರೂಪಾಃ ಪಂಚ ವೃತ್ತಯಃ । ವೃತ್ತ್ಯರ್ಥಾವಬೋಧಕಂ ವಾಕ್ಯಂ ವಿಗ್ರಹಃ । ಸ ಚ ಲೌಕಿಕೋಽಲೌಕಿಕಶ್ಚೇತಿ ದ್ವಿಧಾ । ತತ್ರ ಪೂರ್ವಂ ಭೂತ ಇತಿ ಲೌಕಿಕಃ । ಪೂರ್ವ ಅಮ್ ಭೂತ ಸು ಇತ್ಯಲೌಕಿಕಃ । ಭೂತ ಪೂರ್ವಃ । ಭೂತಪೂರ್ವೇ ಚರಡಿತಿ ನಿರ್ದೇಶಾತ್ ಪೂರ್ವನಿಪಾತಃ ।**

**ವಾ ॥ (ಇವೇನ ಸಮಾಸೋ ವಿಭಕ್ತ್ಯಲೋಪಶ್ಚ) ವಾಗರ್ಥೌ ಇವ ವಾಗಾರ್ಥಾವಿವ ॥**

ಇತಿ ಕೇವಲಸಮಾಸಃ ॥ ೧ ॥

ದ್ವಿಪದ ಸೂತ್ರ. 'ಸುಬಾಮಂತ್ರಿತೇ—' ಸೂತ್ರದಿಂದ 'ಸುಪ್' ಅನುವೃತ್ತಿ. ಸುಪ್ ಪ್ರತ್ಯಯವಾದುದರಿಂದ ತದಂತಗ್ರಹಣ. **ಸೂತ್ರಾರ್ಥ**—ಸುಬಂತವು ಸುಬಂತ ದೊಡನೆ ಕೂಡಿಕೊಂಡು ವಿಕಲ್ಪವಾಗಿ ಸಮಾಸಹೊಂದುತ್ತದೆ. ಸುಬಂತವು ಸುಬಂತ ದೊಡನೆ ಉಚ್ಚರಿಸಲ್ಪಟ್ಟು ಏಕಾರ್ಥೀಭಾವಸಾಮರ್ಥ್ಯ ಹೊಂದಿ ಸಮಾಸಸಂಜ್ಞೆ ಯನ್ನು ಹೊಂದುತ್ತದೆ. ಸಮಾಸಸಂಜ್ಞೆ ಬಂದಾಗ 'ಕೃತ್ತದ್ಧಿತಸಮಾಸಾಶ್ಚ' ಸೂತ್ರ ದಿಂದ ಅದಕ್ಕೆ ಪ್ರಾತಿಪದಿಕಸಂಜ್ಞೆ ಬಂದು ಅದರ ಅವಯವವಾದ ಸುಪ್ ಪ್ರತ್ಯಯಕ್ಕೆ 'ಸುಪೋ ಧಾತುಪ್ರಾತಿಪದಿಕಯೋಃ' ಸೂತ್ರದಿಂದ ಲುಕ್ ಬರುತ್ತದೆ. ಇದಕ್ಕೆ ಉದಾಹರಣೆ ಮುಂದೆ ತೋರಿಸುತ್ತಾನೆ. ಈಗ ವೃತ್ತಿ, ವಿಗ್ರಹಪದಾರ್ಥಗಳನ್ನು ವಿವರಿಸುತ್ತಾನೆ. 'ಪರಾರ್ಥಾಭಿಧಾನಂ ವೃತ್ತಿಃ ॥' ಸಮಾಸವನ್ನು ಹೊಂದುವ ಪದಾರ್ಥಗಳಿಗಿಂತಲೂ ಭಿನ್ನಾರ್ಥವನ್ನು ಹೇಳುವುದು ವೃತ್ತಿ. **ಕೃದ್ವೃತ್ತಿ, ತದ್ಧಿತ ವೃತ್ತಿ, ಸಮಾಸವೃತ್ತಿ, ಏಕಶೇಷವೃತ್ತಿ, ಸನಾದ್ಯಂತಧಾತುವೃತ್ತಿ**—ಹೀಗೆ ವೃತ್ತಿಯು ಐದು ವಿಧವಾಗಿದೆ. 'ಕುಂಭಂ ಕರೋತಿ ಇತಿ ಕುಂಭಕಾರಃ'—ಇದು ಕೃದ್ವೃತ್ತಿ. ವೃತ್ತ್ಯರ್ಥವನ್ನು ತಿಳಿಸುವ ವಾಕ್ಯಕ್ಕೆ ವಿಗ್ರಹವೆಂದು ಹೆಸರು. ವಿಗ್ರಹ ವಾಕ್ಯದಲ್ಲಿ ಕೊಡವನ್ನು ಮಾಡುವವನು ಎಂದು ಭಿನ್ನಭಿನ್ನಾರ್ಥವಿದೆ. ಕೃದ್ವೃತ್ತಿ ಯಲ್ಲಿ ಕುಂಬಾರ ಎಂದು ವಿಶಿಷ್ಟಾರ್ಥ ತೋರುತ್ತದೆ. 'ದಶರಥಸ್ಯ ಅಪತ್ಯಂ ಪುಮಾನ್ ದಾಶರಥಿಃ ॥' ಇದು **ತದ್ಧಿತವೃತ್ತಿ**. ದಶರಥನ ಗಂಡು ಮಗು. ಇದು ವಿಗ್ರಹ ವಾಕ್ಯಾರ್ಥ. ತದ್ಧಿತವೃತ್ತಿಯಲ್ಲಿ ರಾಮನೆಂದು ವಿಶಿಷ್ಟವಾದ ಅರ್ಥ. ರಾಜ್ಞಃ ಪುರುಷಃ = ರಾಜಪುರುಷಃ ॥ ಇದು **ಸಮಾಸವೃತ್ತಿ**. ರಾಜಸಂಬಂಧಿ ಪುರುಷ ಎಂದರ್ಥ. ರಾಮಶ್ಚ ರಾಮಶ್ಚ ರಾಮಶ್ಚ ರಾಮಾಃ ॥ ಇದು **ಏಕಶೇಷವೃತ್ತಿ**. ರಾಮಾಃ ಎಂಬ ಪದವು ಹಲವು ರಾಮರನ್ನು ತಿಳಿಸುತ್ತದೆ. ಕರ್ತುಂ ಇಚ್ಛತಿ **ಚಿಕೀರ್ಷತಿ** ॥ ಮಾಡಲು ಬಯಸುತ್ತಾನೆ. ಇದು **ಸನಾದ್ಯಂತಧಾತುವೃತ್ತಿ**. **ಚಿಕೀರ್ಷತಿ** ಎಂಬ ಸನಂತವು ಮಾಡಲು ಇಚ್ಛಿಸುತ್ತಾನೆಂಬ ವಿಶಿಷ್ಟಾರ್ಥವನ್ನು ಕೊಡುತ್ತದೆ. ಹೀಗೆ ಐದು ವೃತ್ತಿಗಳನ್ನು ವಿವರಿಸಲೂ ವಿಗ್ರಹವಾಕ್ಯವಿರುತ್ತದೆ. ವಿಗ್ರಹವಾಕ್ಯವು ಲೌಕಿಕ, ಅಲೌಕಿಕವೆಂದು ಎರಡು ರೀತಿಯಾಗಿರುತ್ತದೆ. ನಾವು

ಲೋಕದಲ್ಲಿ ಪ್ರಯೋಗಮಾಡಲು ಯೋಗ್ಯವಾಗಿರುವ ವಾಕ್ಯಕ್ಕೆ ಲೌಕಿಕವಿಗ್ರಹ ವಾಕ್ಯವೆಂದೂ, ಲೋಕದಲ್ಲಿ ಪ್ರಯೋಗಮಾಡಲಾರದ ಶಾಸ್ತ್ರಪ್ರಕ್ರಿಯೆ ಮಾತ್ರ ತಿಳಿಸುವ ವಾಕ್ಯಕ್ಕೆ ಅಲೌಕಿಕವಿಗ್ರಹವಾಕ್ಯವೆಂದೂ ಹೆಸರು. ಭೂತಪೂರ್ವಃ— ಇದು ಸುಪ್ ಸಮಾಸ. ಇದಕ್ಕೇ ಕೇವಲಸಮಾಸವೆಂದು ಹೆಸರು. ಪೂರ್ವಂ ಭೂತಃ ಎಂಬುದು ಲೋಕದಲ್ಲಿ ಪ್ರಯೋಗಾರ್ಹವಾದುದರಿಂದ ಇದಕ್ಕೆ ಲೌಕಿಕವಿಗ್ರಹವೆಂದು ಹೆಸರು. ಇದರ ಸ್ವರೂಪ ತಿಳಿಸುವ ಪೂರ್ವ + ಅಮ್, ಭೂತ + ಸು ಎಂಬುದು ಲೋಕದಲ್ಲಿ ಪ್ರಯೋಗಿಸಲು ಅನರ್ಹವಾದುದರಿಂದ ಅಲೌಕಿಕವಿಗ್ರಹವಾಕ್ಯ. ಹೀಗೆ ಸಮಾಸಕ್ಕೆ ಎರಡು ರೀತಿಯಾದ ವಿಗ್ರಹವಾಕ್ಯಗಳಿರುತ್ತವೆ. ಪೂರ್ವಂ ಭೂತಃ ಎಂದು ವಿಗ್ರಹವಾಕ್ಯಮಾಡಿದಾಗ ಪೂರ್ವಭೂತಃ ಎಂದು ಸಮಾಸವಾಗಬೇಕಷ್ಟೆ? ಭೂತಪೂರ್ವಃ ಎಂದು ಹೇಗಾಯಿತು? ಅಂದರೆ ಪಾಣಿನಿಯು 'ಭೂತಪೂರ್ವೇ ಚರಟ್' ಎಂದು ಉಚ್ಚರಿಸಿ ತೋರಿಸಿಕೊಟ್ಟುದರಿಂದ ಹಾಗೆ ವ್ಯತ್ಯಾಸವಾಗಿಯೇ ಹೇಳಬೇಕು. ಪೂರ್ವ + ಅಮ್ + ಭೂತ + ಸು. ಇದು ಅಲೌಕಿಕವಿಗ್ರಹವಾಕ್ಯ. ಇದಕ್ಕೆ ಸಮಾಸಸಂಜ್ಞಾ ಬಂದಾಗ ಪ್ರಾತಿಪದಿಕಸಂಜ್ಞೆ ಬರುವುದರಿಂದ 'ಸುಪೋ ಧಾತುಪ್ರಾತಿಪದಿಕಯೋಃ' ಸೂತ್ರದಿಂದ ಸುಪಿಗೆ ಲುಕ್ ಬಂದು ಪಾಣಿನಿಯು ವ್ಯತ್ಯಾಸನಿರ್ದೇಶಮಾಡಿರುವುದರಿಂದ ಭೂತ ಶಬ್ದಕ್ಕೆ ಪೂರ್ವನಿಪಾತ ಬಂದು ಭೂತ ಪೂರ್ವ ಎಂದಾಗಿ ಪ್ರಾತಿಪದಿಕಸಂಜ್ಞೆ ಇರುವುದರಿಂದ ಪುನಃ ಸು ಮುಂತಾದವನ್ನು ಹೊಂದಿ ಭೂತಪೂರ್ವಃ ಎಂದಾಗುತ್ತದೆ.

**ವಾರ್ತಿಕಾರ್ಥ**— ಇವ ಶಬ್ದದೊಡನೆ ಸುಬಂತವು ಸಮಾಸ ಹೊಂದುತ್ತದೆ. ಆಗ ಸಮಾಸಾವಯವವಾದ ವಿಭಕ್ತಿಗೆ ಲೋಪ ಬರುವುದಿಲ್ಲ. ವಾಗರ್ಥೌ + ಇವ = ವಾಗರ್ಥಾವಿವ. ವಿಭಕ್ತಿ ಲೋಪವಾಗಿ ವಾಗರ್ಥೇವ ಎಂದಾಗಬೇಕಾಗಿತ್ತು. (ಮಾತು, ಅರ್ಥಗಳಂತೆ ಎಂದರ್ಥ) ವಾಕ್ಯದಂತೇ ಸಮಾಸವಿದ್ದರೂ ಸ್ವರದಲ್ಲಿ ವ್ಯತ್ಯಾಸ ಹೊಂದುತ್ತದೆ. ಸಮಾಸವಾದಾಗ ಅಂತೋದಾತ್ತಸ್ವರವೂ ವಾಕ್ಯದಲ್ಲಿ ಆಯಾಯ ಪದಗಳ ಸ್ವರವೂ ಬರುತ್ತದೆ. ಹೀಗೆ ಅವ್ಯಯೀಭಾವಾದಿಸಂಜ್ಞೆಗೆ ಒಳಪಡದ ಸಮಾಸಗಳಿಗೆ ಕೇವಲಸಮಾಸವೆಂದು ಹೆಸರು.

ಇತಿ ಕೇವಲಸಮಾಸಃ ||

# ೧೮. ಅಥಾವ್ಯಯೀಭಾವಃ

ಅವ್ಯಯೀಭಾವಾಧಿಕಾರ ಹೇಳುವ ಸೂತ್ರ.

**೯೧೦. ಅವ್ಯಯೀಭಾವಃ ॥ ೨-೧-೫ ॥**

**ಅಧಿಕಾರೋಽಯಂ ಪ್ರಾಕ್ ತತ್ಪುರುಷಾತ್ ॥**

ಏಕಪದ ಸೂತ್ರ. 'ತತ್ಪುರುಷಃ' ಎಂಬ ಸೂತ್ರದವರೆಗೆ 'ಅವ್ಯಯೀಭಾವಃ' ಎಂಬುದಕ್ಕೆ ಅಧಿಕಾರ. ಮುಂದಿನ ಸೂತ್ರಗಳಲ್ಲಿ ಈ ಸೂತ್ರ ವ್ಯಾಪಿಸಿ ಈ ಸಮಾಸವು ಅವ್ಯಯೀಭಾವ ಎಂಬ ಸಂಜ್ಞೆ ಹೊಂದುತ್ತದೆ ಎಂದು ತಿಳಿಸುತ್ತದೆ.

ಅವ್ಯಯೀಭಾವ ಸಮಾಸ ಹೇಳುವ ಸೂತ್ರ.

**೯೧೧. ಅವ್ಯಯಂ ವಿಭಕ್ತಿಸಮೀಪಸಮೃದ್ಧಿವ್ಯೃದ್ಧ್ಯರ್ಥಾಭಾವಾತ್ಯಯಾಸಂಪ್ರತಿಶಬ್ದಪ್ರಾದುರ್ಭಾವಪಶ್ಚಾದ್ಯಥಾನುಪೂರ್ವ್ಯಯೌಗಪದ್ಯ - ಸಾದೃಶ್ಯಸಂಪತ್ತಿಸಾಕಲ್ಯಾಂತವಚನೇಷು ॥ ೨-೧-೬ ॥**

**ವಿಭಕ್ತ್ಯರ್ಥಾದಿಷು ವರ್ತಮಾನಮವ್ಯಯಂ ಸುಬಂತೇನ ಸಹ ನಿತ್ಯಂ ಸಮಸ್ಯತೇ ಸೋಽವ್ಯಯೀಭಾವಃ। ಪ್ರಾಯೇಣಾವಿಗ್ರಹೋ ನಿತ್ಯಸಮಾಸಃ, ಪ್ರಾಯೇಣಾಸ್ವಪದವಿಗ್ರಹೋ ವಾ। ವಿಭಕ್ತೌ, ಹರಿ + ಙಿ + ಅಧಿ ಇತಿ ಸ್ಥಿತೇ ॥**

ದ್ವಿಪದ ಸೂತ್ರ. 'ಸಹ ಸುಪಾ' ಸೂತ್ರದಿಂದ 'ಸುಪಾ' ಅನುವೃತ್ತಿ. 'ಅವ್ಯಯೀಭಾವಃ', 'ಸಮಾಸಃ' ಅಧಿಕಾರ. **ಸೂತ್ರಾರ್ಥ**—ವಿಭಕ್ತಿ[೧], ಸಮೀಪ[೨], ಸಮೃದ್ಧಿ[೩], ವ್ಯೃದ್ಧಿ[೪], ಅರ್ಥಾಭಾವ[೫], ಅತ್ಯಯ[೬], ಅಸಂಪ್ರತಿ[೭], ಶಬ್ದಪ್ರಾದುರ್ಭಾವ[೮], ಪಶ್ಚಾತ್[೯], ಯಥಾ[೧೦], ಆನುಪೂರ್ವ್ಯ[೧೧], ಯೌಗಪದ್ಯ[೧೨], ಸಾದೃಶ್ಯ[೧೩], ಸಂಪತ್ತಿ[೧೪], ಸಾಕಲ್ಯ[೧೫], ಅಂತ[೧೬]—ಈ ಅರ್ಥವನ್ನು ಕೊಡುವ ಅವ್ಯಯವು ಸುಬಂತದೊಡನೆ ನಿತ್ಯವಾಗಿ ಸಮಾಸ ಹೊಂದುತ್ತದೆ; ಈ ಸಮಾಸವು ಅವ್ಯಯೀಭಾವಸಂಜ್ಞೆಯನ್ನು ಹೊಂದುತ್ತದೆ. 'ಪ್ರಾಯೇಣೇತಿ—' ಸಾಮಾನ್ಯವಾಗಿ ವಿಗ್ರಹವಾಕ್ಯ ಇಲ್ಲದಿರುವ ಸಮಾಸಕ್ಕೆ ನಿತ್ಯ ಸಮಾಸವೆಂದು ಹೆಸರು. ಸಮಾಸವೆಂದರೆ ವೃತ್ತಿ. ವೃತ್ತ್ಯರ್ಥವನ್ನು ತಿಳಿಸಲು ವಿಗ್ರಹ ವಾಕ್ಯವಿರಲೇಬೇಕು. ಹೀಗಿರುವಾಗ ವಿಗ್ರಹವಾಕ್ಯವಿಲ್ಲದ ಸಮಾಸವೆಂದರೆ ಅಸಂಗತ ವಾಗುತ್ತದೆ. ಅದಕ್ಕೋಸ್ಕರ ಇನ್ನೊಂದು ಲಕ್ಷಣವನ್ನು ಹೇಳುತ್ತಾನೆ. 'ಪ್ರಾಯೇಣೇತಿ—' ಸಾಮಾನ್ಯವಾಗಿ ಸ್ವಪದವಿಗ್ರಹವಿಲ್ಲದ ಅಂದರೆ ಸಮಾಸದ ಪದವನ್ನು ಬಿಟ್ಟು ಇತರ ಪದಗಳಿಂದ ವಿವರಿಸುವ ವಿಗ್ರಹವಾಕ್ಯವುಳ್ಳ ಸಮಾಸಕ್ಕೆ ನಿತ್ಯಸಮಾಸವೆಂದು

ಹೆಸರು. ಇದು ಮುಂದಿನ ಉದಾಹರಣೆಗಳಿಂದ ಸ್ಪಷ್ಟವಾಗುತ್ತದೆ. ವಿಭಕ್ತ್ಯರ್ಥದಲ್ಲಿ ಉದಾಹರಣೆ. ಯಾವ ಅವ್ಯಯವು ಯಾವ ವಿಭಕ್ತ್ಯರ್ಥವನ್ನು ಬೋಧಿಸುತ್ತದೆಯೋ ಆ ವಿಭಕ್ತ್ಯಂತವಾದ ಸುಬಂತಕ್ಕೆ ಆ ಅವ್ಯಯದೊಡನೆ ಸಮಾಸ ಬರುತ್ತದೆಂದು ತಿಳಿಯಬೇಕು. ಹರೌ ಇತಿ ಅಧಿಹರಿ ॥ ಇದು ಲೌಕಿಕವಿಗ್ರಹವಾಕ್ಯ. ನಿತ್ಯಸಮಾಸವಾದುದರಿಂದ ಸ್ವಪದವಿಗ್ರಹ ಇಲ್ಲವೆಂದಿದೆ. ಹರಿ+ಙಿ+ಅಧಿ ಇದು ಅಲೌಕಿಕವಿಗ್ರಹವಾಕ್ಯ. ಇಲ್ಲಿ ಅಧಿ ಎಂಬ ಅವ್ಯಯವು ಸಪ್ತಮ್ಯರ್ಥವನ್ನು ತಿಳಿಸುತ್ತದೆ. ಸುಪಿಗೆ ಲುಕ್ ಬಂದಾಗ ಹರಿಅಧಿ ಎಂದೂ, ಅಧಿಹರಿ ಎಂದೂ ಆಗಬಹುದು. ಅದಕ್ಕೋಸ್ಕರ ಪೂರ್ವೋತ್ತರಪದವ್ಯವಸ್ಥಾಪಕ ಸೂತ್ರಗಳನ್ನು ಹೇಳುತ್ತಾನೆ.

ಉಪಸರ್ಜನಸಂಜ್ಞೆಯನ್ನು ಹೇಳುವ ಸೂತ್ರ.

೯೧೨. **ಪ್ರಥಮಾನಿರ್ದಿಷ್ಟಂ ಸಮಾಸ ಉಪಸರ್ಜನಮ್** ॥ ೧-೨-೪೩ ॥

**ಸಮಾಸಶಾಸ್ತ್ರೇ ಪ್ರಥಮಾನಿರ್ದಿಷ್ಟಮುಪಸರ್ಜನಸಂಜ್ಞಂ ಸ್ಯಾತ್** ॥

ಪ್ರಥಮಾನಿರ್ದಿಷ್ಟಂ, ಸಮಾಸೇ, ಉಪಸರ್ಜನಮ್ ॥ ತ್ರಿಪದ ಸೂತ್ರ. **ಸೂತ್ರಾರ್ಥ**—ಸಮಾಸಸಂಜ್ಞಾವಿಧಾಯಕಶಾಸ್ತ್ರದಲ್ಲಿ ಮೊದಲು ಪ್ರಥಮಾವಿಭಕ್ತ್ಯಂತವಾಗಿ ಉಚ್ಚರಿಸಲ್ಪಟ್ಟ (ಪ್ರಥಮಾಂತಪದಜನ್ಯಶಾಬ್ದಬೋಧವಿಷಯವಾದ ಅರ್ಥವು) ಪದವು ಉಪಸರ್ಜನಸಂಜ್ಞೆಯನ್ನು ಹೊಂದುತ್ತದೆ. 'ಅವ್ಯಯಂ ವಿಭಕ್ತಿ—' ಸೂತ್ರ ಅವ್ಯಯೀಭಾವಸಮಾಸವಿಧಾಯಕಶಾಸ್ತ್ರ. ಇದರಲ್ಲಿ ಪ್ರಥಮಾವಿಭಕ್ತ್ಯಂತ ಪದವು 'ಅವ್ಯಯಮ್'. ಇದಕ್ಕೆ ಉಪಸರ್ಜನಸಂಜ್ಞೆ ಬರುತ್ತದೆ. ಈ ಉಪಸರ್ಜನಸಂಜ್ಞೆಗೆ ಪ್ರಯೋಜನ ತೋರಿಸುತ್ತಾನೆ.

ಉಪಸರ್ಜನಕ್ಕೆ ಪೂರ್ವಪ್ರಯೋಗ ಹೇಳುವ ಸೂತ್ರ.

೯೧೩. **ಉಪಸರ್ಜನಮ್ ಪೂರ್ವಮ್** ॥ ೨-೨-೩೦ ॥

**ಸಮಾಸೇ ಉಪಸರ್ಜನಂ ಪ್ರಾಕ್‌ಪ್ರಯೋಜ್ಯಮ್ । ಇತ್ಯಧೇಃ ಪ್ರಾಕ್ ಪ್ರಯೋಗಃ । ಸುಪೋ ಲುಕ್ । ಏಕದೇಶವಿಕೃತಸ್ಯಾನನ್ಯತ್ವಾತ್ಪ್ರಾತಿಪದಿಕ-ಸಂಜ್ಞಾಯಾಂ ಸ್ವಾದ್ಯುತ್ಪತ್ತಿಃ । ಅವ್ಯಯೀಭಾವಶ್ಚೇತ್ಯವ್ಯಯತ್ವಾತ್ಸುಪೋ ಲುಕ್ । ಅಧಿಹರಿ ॥**

ದ್ವಿಪದ ಸೂತ್ರ. ಅಧಿಕಾರದಿಂದ 'ಸಮಾಸಃ' ಪದವು ಸಪ್ತಮ್ಯಂತವಾಗಿ ವಿಪರಿಣತವಾಗುತ್ತದೆ. ಪೂರ್ವಂ ಎಂಬುದಕ್ಕೆ ಪೂರ್ವದಲ್ಲಿ ಪ್ರಯೋಗಿಸಲ್ಪಡಬೇಕು ಎಂದರ್ಥ. **ಸೂತ್ರಾರ್ಥ**—ಉಪಸರ್ಜನಸಂಜ್ಞೆ ಇರುವ ಪದವು ಸಮಾಸದಲ್ಲಿ ಮೊದಲು ಪ್ರಯೋಗಿಸಲ್ಪಡಬೇಕು. ಪ್ರಕೃತ, ಹರಿ+ಙಿ+ಅಧಿ ಎಂಬ ಅಲೌಕಿಕ ವಿಗ್ರಹವಾಕ್ಯ ಇರುವಾಗ 'ಅವ್ಯಯಂ ವಿಭಕ್ತಿ—' ಸೂತ್ರದಿಂದ ಅವ್ಯಯೀಭಾವ

ಸಮಾಸ ಬಂದು 'ಪ್ರಥಮಾನಿರ್ದಿಷ್ಟಂ ಸಮಾಸ ಉಪಸರ್ಜನಮ್' ಸೂತ್ರದಿಂದ ಅಧಿ ಎಂಬ ಅವ್ಯಯಕ್ಕೆ ಉಪಸರ್ಜನಸಂಜ್ಞಾ ಬಂದಾಗ, 'ಉಪಸರ್ಜನಂ ಪೂರ್ವಮ್' ಎಂಬ ಈ ಸೂತ್ರದಿಂದ ಅದಕ್ಕೆ ಪೂರ್ವಪ್ರಯೋಗ ಬಂದರೆ ಅಧಿ+ ಹರಿ+ಙಿ ಎಂದಾಗಿ 'ಕೃತ್ತದ್ಧಿತಸಮಾಸಾಶ್ಚ' ಸೂತ್ರದಿಂದ ಪ್ರಾತಿಪದಿಕಸಂಜ್ಞೆ ಬಂದು 'ಸುಪೋ ಧಾತುಪ್ರಾತಿಪದಿಕಯೋಃ' ಸೂತ್ರದಿಂದ ಆದರ ಅವಯವವಾದ ಸುಪಿಗೆ ಲುಕ್ ಬಂದರೆ ಅಧಿಹರಿ ಎಂದಾಗುತ್ತದೆ. ವ್ಯತ್ಯಾಸವಾದರೂ 'ಏಕದೇಶವಿಕೃತ ಮನನ್ಯವತ್' (ಒಂದು ಕಡೆ ವಿಕಾರ ಬಂದರೂ ಅದು ಬೇರೆಯಲ್ಲ) ನ್ಯಾಯದಿಂದ ಅದಕ್ಕೆ ಪ್ರಾತಿಪದಿಕಸಂಜ್ಞೆ ಇರುವುದರಿಂದ ಅದರ ಮೇಲೆ ಸು ಮುಂತಾದ ವಿಭಕ್ತಿ ಪ್ರತ್ಯಯಗಳು ಪ್ರಾಪ್ತವಾದರೆ ಅಧಿಹರಿ+ಸು ಎಂದಿರುವಾಗ 'ಅವ್ಯಯೀಭಾವಶ್ಚ' ಸೂತ್ರದಿಂದ ಇದಕ್ಕೆ ಅವ್ಯಯಸಂಜ್ಞಾ ಬರುವುದರಿಂದ 'ಅವ್ಯಯಾದಾಪ್ ಸುಪಃ' ಸೂತ್ರದಿಂದ ಸುಪಿಗೆ ಲುಕ್ ಬಂದು ಇಪ್ಪತ್ತೊಂದು ವಿಭಕ್ತಿಗಳಲ್ಲಿಯೂ ಅಧಿಹರಿ ಎಂದು ರೂಪವಾಗುತ್ತದೆ. ಅಕಾರಾಂತ ಪದದೊಡನೆ ಅವ್ಯಯೀಭಾವ ಸಮಾಸ ವಾದಾಗ ವಿಶೇಷಕಾರ್ಯ ಹೇಳುತ್ತಾನೆ.

ಅವ್ಯಯೀಭಾವಕ್ಕೆ ನಪುಂಸಕತ್ವ ಹೇಳುವ ಸೂತ್ರ.

**೯೧೪. ಅವ್ಯಯೀಭಾವಶ್ಚ ॥ ೨–೪–೧೮ ॥**

**ಅಯಂ ನಪುಂಸಕಂ ಸ್ಯಾತ್ ॥**

ಅವ್ಯಯೀಭಾವಃ, ಚ ॥ ದ್ವಿಪದ ಸೂತ್ರ. 'ಸ ನಪುಂಸಕಮ್' ಸೂತ್ರದಿಂದ 'ನಪುಂಸಕಮ್' ಅನುವೃತ್ತಿ. **ಸೂತ್ರಾರ್ಥ**— ಅವ್ಯಯೀಭಾವ ಸಮಾಸವು ನಪುಂಸಕಲಿಂಗವನ್ನು ಹೊಂದುತ್ತದೆ. ಅಧಿಹರಿ ಎಂಬುದು ನಪುಂಸಕವಾಗುತ್ತದೆ. ಇದಕ್ಕೆ ಪ್ರಯೋಜನವನ್ನು ಮುಂದಿನ ಸೂತ್ರದಲ್ಲಿ ತೋರಿಸುತ್ತಾನೆ.

ಅದಂತಾವ್ಯಯೀಭಾವಕ್ಕೆ ಅಮ್ ವಿಧಾಯಕ ಸೂತ್ರ.

**೯೧೫. ನಾವ್ಯಯೀಭಾವಾದತೋಽಮ್ತ್ವಪಂಚಮ್ಯಾಃ ॥ ೨–೪–೮೩ ॥**

**ಅದಂತಾದವ್ಯಯೀಭಾವಾತ್ಸುಪೋ ನ ಲುಕ್, ತಸ್ಯ ಪಂಚಮೀಂ ವಿನಾ ಅಮಾದೇಶಶ್ಚ ಸ್ಯಾತ್ ॥ ಗಾಃ ಪಾತೀತಿ ಗೋಪಾಸ್ತಸ್ಮಿನ್ನಿತ್ಯಧಿ- ಗೋಪಮ್ ॥**

ನ, ಅವ್ಯಯೀಭಾವಾತ್, ಅತಃ, ಅಮ್, ತು, ಅಪಂಚಮ್ಯಾಃ ॥ ಆರು ಪದ ಗಳುಳ್ಳ ಸೂತ್ರ. 'ಣ್ಯಕ್ಷತ್ರಿಯಾರ್ಷ—' ಸೂತ್ರದಿಂದ 'ಲುಕ್', 'ಅವ್ಯಯಾದಾಪ್ ಸುಪಃ' ಸೂತ್ರದಿಂದ 'ಸುಪಃ' ಪದಗಳು ಅನುವೃತ್ತವಾಗುತ್ತವೆ. 'ಅತಃ' ಅವ್ಯಯೀಭಾವಾತ್ ಎಂಬುದಕ್ಕೆ ವಿಶೇಷಣ. ತದಂತಲಾಭ. **ಸೂತ್ರಾರ್ಥ**—

ಅಕಾರಾಂತವಾದ ಅವ್ಯಯೀಭಾವಸಮಾಸದ ಮೇಲಿರುವ ಸುಪಿಗೆ ಲುಕ್ ಬರುವುದಿಲ್ಲ; ಪಂಚಮೀವಿಭಕ್ತಿಯನ್ನು ಬಿಟ್ಟು ಉಳಿದ ಆರು ವಿಭಕ್ತಿಪ್ರತ್ಯಯಗಳಿಗೆ ಅಮ್ ಆದೇಶ ಬರುತ್ತದೆ. ಉದಾ.— ಗಾಃ ಪಾತೀತಿ ಗೋಪಾಃ ‖ ಗೋಪೇ ಅಧಿಗೋಪಮ್. ಗೋಪಾ + ಙಿ + ಅಧಿ. ಅಲೌಕಿಕವಿಗ್ರಹವಾಕ್ಯ. ಹಿಂದಿನಂತೆ ಅಧಿ ಎಂಬುದಕ್ಕೆ ಪೂರ್ವನಿಪಾತ. ಸುಪಿಗೆ ಲುಕ್. ಅಧಿಗೋಪಾ ಎಂದಿರುವಾಗ ' ಹ್ರಸ್ವೋ ನಪುಂಸಕೇ ಪ್ರಾತಿಪದಿಕಸ್ಯ ' ಸೂತ್ರದಿಂದ ಹ್ರಸ್ವ. ಅಧಿಗೋಪ ಎಂಬುದರಮೇಲೆ ಸುಪ್ ಬಂದಾಗ ಈ ಸೂತ್ರದಿಂದ ಲುಕ್ ಬರುವುದಿಲ್ಲ. ಅದಕ್ಕೆ ಅಮ್ ಆದೇಶ. ಅಧಿಗೋಪ + ಅಮ್ ಎಂದಿರುವಾಗ ' ಅಮಿಪೂರ್ವಃ ' ಪೂರ್ವರೂಪ. ಅಧಿಗೋಪಮ್ ಎಂದಾಗುತ್ತದೆ. ಹೀಗೆ ಪಂಚಮೀವಿಭಕ್ತಿ ಬಿಟ್ಟು ಎಲ್ಲಾ ವಿಭಕ್ತಿಗಳಲ್ಲಿಯೂ ಅಧಿಗೋಪಮ್ ಎಂದೇ ಆಗುತ್ತದೆ. ಪಂಚಮಿಯಲ್ಲಿ ಅಧಿಗೋಪಾತ್ ಎಂದಾಗುತ್ತದೆ.

ತೃತೀಯಾ, ಸಪ್ತಮಿಯಲ್ಲಿ ಅಮ್ ವಿಕಲ್ಪ ಹೇಳುವ ಸೂತ್ರ.

**೯೧೬. ತೃತೀಯಾಸಪ್ತಮ್ಯೋರ್ಬಹುಲಮ್ ‖ ೨-೪-೮೪ ‖**

**ಅದಂತಾದವ್ಯಯೀಭಾವಾತ್ ತೃತೀಯಾಸಪ್ತಮ್ಯೋರ್ಬಹುಲಮಮ್ಭಾವಃ ಸ್ಯಾತ್ । ಅಧಿಗೋಪಮ್, ಅಧಿಗೋಪೇನ, ಅಧಿಗೋಪೇ ವಾ ‖**

ದ್ವಿಪದ ಸೂತ್ರ. ' ನಾವ್ಯಯೀಭಾವಾದತಃ ' ಅನುವೃತ್ತಿ. **ಸೂತ್ರಾರ್ಥ**— ಅಕಾರಾಂತ ಅವ್ಯಯೀಭಾವ ಸಮಾಸದ ಪರದಲ್ಲಿರುವ ತೃತೀಯಾ ಸಪ್ತಮಿಗಳಿಗೆ ವಿಕಲ್ಪವಾಗಿ ಅಮ್ ಆದೇಶ ಬರುತ್ತದೆ. ಬಾರದಿದ್ದರೆ ಲುಕ್ ಇಲ್ಲವೆಂದುದರಿಂದ ತೃತೀಯಾ ಸಪ್ತಮಿಗಳೇ ಇರುತ್ತವೆ. ಅಮ್ ಭಾವ ಬಂದರೆ ಅಧಿಗೋಪಮ್ ಎಂದು ಎರಡು ವಿಭಕ್ತಿಗಳಲ್ಲಿಯೂ ಒಂದೇ ರೂಪ. ಬಾರದಿದ್ದರೆ ಆಯಾಯ ವಿಭಕ್ತಿ ಬಂದು ಅಧಿಗೋಪೇನ, ಅಧಿಗೋಪೇ ಎಂದಾಗುತ್ತದೆ. ಅಕಾರಾಂತದಲ್ಲಿ ಮಾತ್ರ ಈ ನಿಯಮ. ಇತರ ಕಡೆಯಲ್ಲಿ ಲುಕ್ ಹಿಂದಿನಂತೆ ಬಂದು ನಪುಂಸಕವಾಗುತ್ತದೆ. ವಿಭಕ್ತ್ಯರ್ಥದಲ್ಲಿ ಅವ್ಯಯೀಭಾವಸಮಾಸವನ್ನು ಹೇಳಿ ಸಮೀಪಾದ್ಯರ್ಥದಲ್ಲಿ ಅದನ್ನು ವಿವರಿಸುತ್ತಾನೆ.

**ಕೃಷ್ಣಸ್ಯ ಸಮೀಪಮ್ ಉಪಕೃಷ್ಣಮ್ । ಮದ್ರಾಣಾಂ ಸಮೃದ್ಧಿಃ ಸುಮದ್ರಮ್ । ಯವನಾನಾಂ ವ್ಯೃದ್ಧಿರ್ದುರ್ಯವನಮ್ । ಮಕ್ಷಿಕಾಣಾಮಭಾವೋ ನಿರ್ಮಕ್ಷಿಕಮ್ । ಹಿಮಸ್ಯಾತ್ಯಯೋಽತಿಹಿಮಮ್ । ನಿದ್ರಾ ಸಂಪ್ರತಿ ನ ಯುಜ್ಯತೇ ಇತ್ಯತಿನಿದ್ರಮ್ । ಹರಿಶಬ್ದಸ್ಯ ಪ್ರಕಾಶ ಇತಿಹರಿ । ವಿಷ್ಣೋಃ ಪಶ್ಚಾದನುವಿಷ್ಣು । ಯೋಗ್ಯತಾ, ವೀಪ್ಸಾ, ಪದಾರ್ಥಾನತಿವೃತ್ತಿ ಸಾದೃಶ್ಯಾನಿ ಯಥಾರ್ಥಾಃ । ರೂಪಸ್ಯ ಯೋಗ್ಯಮನುರೂಪಮ್ । ಅರ್ಥಮರ್ಥಂ ಪ್ರತಿ ಪ್ರತ್ಯರ್ಥಮ್ । ಶಕ್ತಿಮನತಿಕ್ರಮ್ಯ ಯಥಾಶಕ್ತಿ ‖**

ಸಮೀಪಾರ್ಥದಲ್ಲಿ ಅವ್ಯಯೀಭಾವ. ಕೃಷ್ಣಸ್ಯ ಸಮೀಪಮ್ ॥ ಇದು ಲೌಕಿಕ
ವಿಗ್ರಹವಾಕ್ಯ. ಕೃಷ್ಣ+ಙಸ್+ಉಪ. ಇದು ಅಲೌಕಿಕವಿಗ್ರಹವಾಕ್ಯ. ಅವ್ಯಯಕ್ಕೆ
ಪೂರ್ವನಿಪಾತ. ಙಸಿಗೆ ಲುಕ್. ಉಪಕೃಷ್ಣ. ಇದರ ಮೇಲೆ ಸುಪ್ ಬಂದಾಗ ಅದಕ್ಕೆ
ಅಮ್ ಆದೇಶ. ಉಪಕೃಷ್ಣಮ್ (ಕೃಷ್ಣನ ಸಮೀಪ). ಸಮೃದ್ಧ್ಯರ್ಥದಲ್ಲಿ—
ಮದ್ರಾಣಾಂ ಸಮೃದ್ಧಿಃ ॥ ಲೌಕಿಕವಿಗ್ರಹವಾಕ್ಯ. ಮದ್ರ+ಆಮ್+ಸು (ಅ. ವಿ.
ವಾಕ್ಯ). ಹಿಂದಿನಂತೆ ಕಾರ್ಯ. ಸುಮದ್ರಮ್. ವ್ಯೃದ್ಧ್ಯರ್ಥದಲ್ಲಿ—ಯವನಾನಾಂ
ವ್ಯೃದ್ಧಿಃ ॥ ಯವನ+ಆಮ್+ದುರ್. ದುರ್ಯವನಮ್ (ಯವನರ ನಾಶ).
ಅರ್ಥಾಭಾವದಲ್ಲಿ—ಮಕ್ಷಿಕಾಣಾಮಭಾವಃ। ಮಕ್ಷಿಕಾ+ಆಮ್+ನಿರ್. ನಿರ್ಮಕ್ಷಿ
ಕಮ್ (ನೊಣಗಳ ಅಭಾವ). ಅತ್ಯಯದಲ್ಲಿ—ಹಿಮಸ್ಯ ಅತ್ಯಯಃ ॥ ಹಿಮ+
ಙಸ್+ಅತಿ. ಅತಿಹಿಮಮ್ (ಹಿಮದ ನಾಶ). ಅಸಂಪ್ರತಿಯಲ್ಲಿ—ನಿದ್ರಾ
ಸಂಪ್ರತಿ ನ ಯುಜ್ಯತೇ ಇತ್ಯತಿನಿದ್ರಮ್ ॥ ನಿದ್ರಾ+ಸು+ಅತಿ. ಅತಿನಿದ್ರಮ್.
ನಿದ್ರೆ ಈಗ ಯುಕ್ತವಾಗದಿರುವುದು. ಶಬ್ದಪ್ರಾದುರ್ಭಾವದಲ್ಲಿ—ಹರಿಶಬ್ದಸ್ಯ
ಪ್ರಕಾಶಃ ಇತಿಹರಿ ॥ ಹರಿ+ಙಸ್+ಇತಿ (ಹರಿ ಶಬ್ದದ ಪ್ರಕಾಶ). ಪಶ್ಚಾದರ್ಥ
ದಲ್ಲಿ—ವಿಷ್ಣೋಃ ಪಶ್ಚಾತ್ ಅನುವಿಷ್ಣು ॥ ವಿಷ್ಣು+ಙಸ್+ಅನು (ವಿಷ್ಣುವಿನ
ನಂತರ). ಯಥಾರ್ಥದಲ್ಲಿ ಅವ್ಯಯೀಭಾವಸಮಾಸ ಹೇಳುವ ಮೊದಲು ಯಥಾ
ಶಬ್ದದ ಅರ್ಥವನ್ನು ವಿವರಿಸುತ್ತಾನೆ. ಯೋಗ್ಯತಾ, ವೀಪ್ಸಾ, ಪದಾರ್ಥಾನತಿವೃತ್ತಿ,
ಸಾದೃಶ್ಯ ಈ ನಾಲ್ಕು ಯಥಾರ್ಥಗಳು. ಯೋಗ್ಯತಾದಲ್ಲಿ—ರೂಪಸ್ಯ ಯೋಗ್ಯಂ
ಅನುರೂಪಮ್ ॥ ರೂಪ+ಙಸ್+ಅನು (ರೂಪಕ್ಕನುಗುಣವಾದುದು). ವೀಪ್ಸಾ
ದಲ್ಲಿ—ಅರ್ಥಮರ್ಥಂ ಪ್ರತಿ ಪ್ರತ್ಯರ್ಥಮ್ ॥ ಅರ್ಥ+ಅಮ್+ಪ್ರತಿ (ಪ್ರತಿ
ಅರ್ಥವನ್ನೂ). ಪದಾರ್ಥಾನತಿವೃತ್ತಿಯಲ್ಲಿ—ಶಕ್ತಿಮನತಿಕ್ರಮ್ಯ ಯಥಾಶಕ್ತಿ ॥
ಶಕ್ತಿ+ಙಸ್+ಯಥಾ (ತನ್ನ ಶಕ್ತಿಗೆ ಮೀರದೆ). ಸಾದೃಶ್ಯದಲ್ಲಿ—ಹರೇಃ
ಸಾದೃಶ್ಯಮ್ ॥ ಹರಿ+ಟಾ+ಸಹ. ಇಲ್ಲಿ ಸಹಶಬ್ದವು ಸಾದೃಶ್ಯಾರ್ಥವನ್ನು ತೋರಿಸು
ತ್ತದೆ. ಸಹ ಎಂಬುದಕ್ಕೆ ಸ ಆದೇಶವನ್ನು ಮುಂದಿನ ಸೂತ್ರದಿಂದ ಹೇಳುತ್ತಾನೆ.

ಸಹ ಶಬ್ದಕ್ಕೆ ಸಭಾವ ಹೇಳುವ ಸೂತ್ರ.

### ೯೧೭. ಅವ್ಯಯೀಭಾವೇ ಚಾಕಾಲೇ ॥ ೬-೩-೮೧ ॥

ಸಹಸ್ಯ ಸಃ ಸ್ಯಾದವ್ಯಯೀಭಾವೇ ನ ತು ಕಾಲೇ। ಹರೇಃ ಸಾದೃಶ್ಯಂ
ಸಹರಿ। ಜ್ಯೇಷ್ಠಸ್ಯಾನುಪೂರ್ವೇಣ ಇತಿ ಅನುಜ್ಯೇಷ್ಠಮ್। ಚಕ್ರೇಣ
ಯುಗಪತ್ ಸಚಕ್ರಮ್। ಸದೃಶಃ ಸಖ್ಯಾ ಸಸಖಿ। ಕ್ಷತ್ರಾಣಾಂ ಸಂಪತ್ತಿಃ
ಸಕ್ಷತ್ರಮ್। ತೃಣಮಪ್ಯಪರಿತ್ಯಜ್ಯ ಸತೃಣಮತ್ತಿ। ಅಗ್ನಿಗ್ರಂಥಪರ್ಯಂತ-
ಮಧೀತೇ ಸಾಗ್ನಿ ॥

ಅವ್ಯಯೀಭಾವೇ, ಚ, ಅಕಾಲೇ ॥ ತ್ರಿಪದ ಸೂತ್ರ. 'ಸಹಸ್ಯ ಸಃ ಸಂಜ್ಞಾ ಯಾವ್' ಸೂತ್ರದಿಂದ 'ಸಹಸ್ಯ, ಸಃ' ಅನುವೃತ್ತಿ. **ಸೂತ್ರಾರ್ಥ**—ಅವ್ಯಯೀ ಭಾವಸಮಾಸದಲ್ಲಿ ಸಹ ಶಬ್ದಕ್ಕೆ ಸ ಆದೇಶ ಬರುತ್ತದೆ; ಕಾಲವಾಚಕಪದ ಪರ ದಲ್ಲಿರುವಾಗ ಸಾದೇಶ ಬರುವುದಿಲ್ಲ. ಪ್ರಕೃತ ಸಾದೇಶ ಬಂದರೆ ಹಿಂದಿನಂತೆ ಕಾರ್ಯ ಗಳು ಬಂದು ಸಹರಿ ಎಂದಾಗುತ್ತದೆ. ಆನುಪೂರ್ವ್ಯದಲ್ಲಿ—ಜ್ಯೇಷ್ಠಸ್ಯ ಆನುಪೂರ್ವ್ಯೇಣ ಅನುಜ್ಯೇಷ್ಠಮ್ ॥ ಜ್ಯೇಷ್ಠ + ಙಸ್ + ಅನು. ಜ್ಯೇಷ್ಠನಿಂದ ಕ್ರಮವಾಗಿ ಆರಂಭಿಸಿ (ಕಾರ್ಯ ಮಾಡಲ್ಪಟ್ಟಿದೆ). ಯೌಗಪದ್ಯದಲ್ಲಿ—ಚಕ್ರೇಣ ಯುಗಪತ್ ಸಚಕ್ರಮ್ ॥ ಚಕ್ರ + ಟಾ + ಸಹ. ಸಹ ಶಬ್ದಕ್ಕೆ ಸಭಾವ ಬಂದಿದೆ. ಚಕ್ರದೊಡನೆ ಏಕಕಾಲದಲ್ಲಿ ಪ್ರಯೋಗಿಸಲ್ಪಡ್ಡು. ಸಾದೃಶ್ಯದಲ್ಲಿ—ಸದೃಶಃ ಸಖ್ಯಾ ಸಸಖಿ ॥ ಸಖಿ + ಟಾ + ಸಹ. ಸಹಶಬ್ದಕ್ಕೆ ಸಭಾವ. ಸ್ನೇಹಿತನಿಗೆ ಸಮಾನ. ಸಂಪತ್ತಿಯಲ್ಲಿ—ಕ್ಷತ್ರಾಣಾಂ ಸಂಪತ್ತಿಃ ಸಕ್ಷತ್ರಮ್ ॥ ಕ್ಷತ್ರ + ಆಮ್ + (ಭಿಸ್) + ಸಹ. ಸಭಾವ. ಕ್ಷತ್ರಿಯರಿಗನುರೂಪ ವಾದುದು. ಸಾಕಲ್ಯದಲ್ಲಿ—ತೃಣಮಪ್ಯಪರಿತ್ಯಜ್ಯ ಸತೃಣಮತ್ತಿ ॥ ತೃಣ + ಟಾ + ಸಹ. ಸಭಾವ. ಹುಲ್ಲನ್ನೂ ಸೇರಿಸಿ ಎಲ್ಲವನ್ನೂ (ತಿನ್ನುತ್ತಾನೆ). ಹುಲ್ಲನ್ನು ತಿನ್ನುವುದ ರಲ್ಲಿ ತಾತ್ಪರ್ಯವಿಲ್ಲ. ಎಲ್ಲವನ್ನೂ ಎಂದು ಹೇಳುವಾಗ ಹೀಗೆ ಪ್ರಯೋಗಿಸುತ್ತಾರೆ. ಅಂತವಚನದಲ್ಲಿ—ಅಗ್ನಿಗ್ರಂಥಪರ್ಯಂತಮಧೀತೇ ಸಾಗ್ನಿ ॥ ಅಗ್ನಿ + ಟಾ + ಸಹ. ಸಭಾವ. ಅಗ್ನಿಗ್ರಂಥದ ಕೊನೆಯವರೆಗೆ ಓದುತ್ತಾನೆ.

ನದೀವಾಚಕ ಶಬ್ದದೊಡನೆ ಅವ್ಯಯೀಭಾವಸಮಾಸ ಹೇಳುವ ಸೂತ್ರ.

### ೯೧೮. ನದೀಭಿಶ್ಚ ॥ ೨-೧-೨೦ ॥

**ನದೀಭಿಃ ಸಹ ಸಂಖ್ಯಾ ಸಮಸ್ಯತೇ ॥ ವಾ ॥ (ಸಮಾಹಾರೇ ಚಾಯ-ಮಿಷ್ಯತೇ) ಪಂಚಗಂಗಮ್ । ದ್ವಿಯಮುನಮ್ ॥**

ನದೀಭಿಃ, ಚ ॥ ದ್ವಿಪದ ಸೂತ್ರ. 'ಸಂಖ್ಯಾವಂಶ್ಯೇನ' ಸೂತ್ರದಿಂದ 'ಸಂಖ್ಯಾ' ಪದವು ಅನುವೃತ್ತವಾಗುತ್ತದೆ. **ಸೂತ್ರಾರ್ಥ**—ಸಂಖ್ಯಾವಾಚಕಪದವು ನದೀವಾಚಕ ಸುಬಂತದೊಡನೆ ಸಮಾಸಹೊಂದುತ್ತದೆ. ಸಾಮಾನ್ಯವಾಗಿ ಸಮಾಸ ಪ್ರಾಪ್ತವಾದರೆ ವಾರ್ತಿಕದಿಂದ ನಿಯಮಮಾಡುತ್ತಾನೆ. ಈ ಸಮಾಸವು ಸಮಾಹಾರ ದಲ್ಲಿ ಮಾತ್ರ ಬರುತ್ತದೆ. ಪಂಚಾನಾಂ ಗಂಗಾನಾಂ ಸಮಾಹಾರಃ ॥ ಲೌಕಿಕವಿಗ್ರಹ ವಾಕ್ಯ. ಪಂಚನ್ + ಜಸ್ + ಗಂಗಾ + ಜಸ್. ಇದು ಅಲೌಕಿಕವಿಗ್ರಹವಾಕ್ಯ. ಇಲ್ಲಿ ದ್ವಿಗುಸಮಾಸವನ್ನು ಭಾಧಿಸಿ ಅವ್ಯಯೀಭಾವಸಮಾಸ ಬಂದರೆ ಪಂಚಗಂಗಮ್ ಎಂದಾಗುತ್ತದೆ. ದ್ವಯೋಃ ಯಮುನಯೋಃ ಸಮಾಹಾರಃ ದ್ವಿಯಮುನಮ್ ॥

ತದ್ಧಿತಾಧಿಕಾರವನ್ನು ಹೇಳುವ ಸೂತ್ರ.

**೯೧೯. ತದ್ಧಿತಾಃ || ೪-೧-೭೬ ||**

**ಆಪಂಚಮಸಮಾಪ್ತೇರಧಿಕಾರೋಽಯಮ್ ||**

ಏಕಪದ ಸೂತ್ರ. ಐದನೇ ಅಧ್ಯಾಯ ಮುಗಿಯುವವರೆಗೆ 'ತದ್ಧಿತಾಃ' ಎಂಬುದಕ್ಕೆ ವ್ಯಾಪ್ತಿ ಇದೆ. ಇಲ್ಲಿಂದ ಮುಂದೆ ಐದನೇ ಅಧ್ಯಾಯ ಮುಗಿಯುವವರೆಗೆ ಪ್ರತಿಯೊಂದು ಸೂತ್ರದಲ್ಲಿಯೂ ಈ ಸೂತ್ರ ಹೋಗಿ ಅಲ್ಲಿ ಹೇಳುವ ಪ್ರತ್ಯಯಕ್ಕೆ ತದ್ಧಿತವೆಂಬ ಹೆಸರು ಬರುತ್ತದೆಂದು ತಿಳಿಸುತ್ತದೆ. ಅಧಿಕಾರಸೂತ್ರವಾದುದರಿಂದ ಇಲ್ಲಿ ವಾಕ್ಯಾರ್ಥವಿಲ್ಲ.

ಸಮಾಸಾಂತವಾಗಿ ಟಚ್ ಪ್ರತ್ಯಯ ಹೇಳುವ ಸೂತ್ರ.

**೯೨೦. ಅವ್ಯಯೀಭಾವೇ ಶರತ್ಪ್ರಭೃತಿಭ್ಯಃ || ೫-೪-೧೦೭ ||**

**ಶರದಾದಿಭ್ಯಷ್ಟಚ್ ಸ್ಯಾತ್ಸಮಾಸಾಂತೋಽವ್ಯಯೀಭಾವೇ | ಶರದಃ ಸಮೀಪಮುಪಶರದಮ್ | ಪ್ರತಿವಿಪಾಶಮ್ |**

**ಗ || ಜರಾಯಾ ಜರಸ್ ಚ || ಉಪಜರಸಮಿತ್ಯಾದಿ |**

ದ್ವಿಪದ ಸೂತ್ರ. 'ರಾಜಾಹಃ ಸಖಿಭ್ಯಷ್ಟಚ್' ಸೂತ್ರದಿಂದ 'ಟಚ್' ಅನುವೃತ್ತಿ. 'ಸಮಾಸಾಂತಾಃ' ಅಧಿಕಾರ. **ಸೂತ್ರಾರ್ಥ**—ಅವ್ಯಯೀಭಾವ ಸಮಾಸದಲ್ಲಿ ಉತ್ತರಪದಗಳಾದ ಶರತ್ ಮುಂತಾದ ಪದಗಳಿಗೆ ಸಮಾಸಾಂತವಾಗಿ ಟಚ್ ಪ್ರತ್ಯಯ ಬರುತ್ತದೆ. ಶರದಾದ್ಯಂತವಾದ ಅವ್ಯಯೀಭಾವಕ್ಕೆ ಸಮಾಸದ ಕೊನೆಯ ಅವಯವವಾಗಿ ಟಚ್ ಬರುತ್ತದೆ ಎಂದು ತಾತ್ಪರ್ಯ. ಸಾಮೀಪ್ಯದಲ್ಲಿ ಅವ್ಯಯೀಭಾವ. ಶರದಃ ಸಮೀಪಮ್. ಶರತ್ + ಙಸ್ + ಉಪ. ಉಪಶರದ್ ಎಂದಿರುವಾಗ ಶರದಂತವಾದ ಅವ್ಯಯೀಭಾವವಾದುದರಿಂದ ಟಚ್. ಟಚಿನಲ್ಲಿ 'ಚುಟೂ' ಸೂತ್ರದಿಂದ ಟಕಾರವೂ 'ಹಲಂತ್ಯಮ್' ಸೂತ್ರದಿಂದ ಚಕಾರವೂ ಇತ್ತಾಗಿ ಲೋಪಹೊಂದಿ ಅಕಾರ ಉಳಿಯುತ್ತದೆ. ಉಪಶರದ್ + ಅ = ಉಪಶರದಮ್ | ಸು ಮುಂತಾದವುಗಳಿಗೆ ಅಮ್ ಆದೇಶ ಬಂದಿದೆ. ವಿಪಾಶಂ ವಿಪಾಶಂ ಪ್ರತಿ || ವಿಪಾಶ್ + ಅಮ್ + ಪ್ರತಿ ಯಥಾರ್ಥವಾದ ವೀಪ್ಸಾದಲ್ಲಿ ಅವ್ಯಯೀಭಾವ ಸಮಾಸ. ಶರದಾದಿಯಲ್ಲಿ ವಿಪಾಟ್ ಶಬ್ದ ಸೇರಿರುವುದರಿಂದ ಟಚ್ ಬಂದು ಅದಂತವಾಗುತ್ತದೆ. ಪ್ರತಿವಿಪಾಶಮ್. 'ಜರಾಯಾ ಜರಸ್ ಚ'—ಇದು ಗಣಸೂತ್ರ. ಶರದಾದಿಯಲ್ಲಿ ಜರಾ ಶಬ್ದವೂ ಸೇರಿದೆ. ಜರಾಯಾಃ ಸಮೀಪಮ್ || ಸಾಮೀಪ್ಯದಲ್ಲಿ ಅವ್ಯಯೀಭಾವ. ಟಚ್ ಬರುವಾಗ ಜರಾ ಶಬ್ದಕ್ಕೆ ಜರಸ್ ಆದೇಶವೂ ಬರುತ್ತದೆ. ಉಪಜರಸಮ್. ಹೀಗೆ ಶರದಾದಿಗಣವನ್ನು ಗಣಪಾಠದಿಂದ ತಿಳಿಯಬೇಕು.

ಅನ್ನಂತಕ್ಕೆ ಟಚ್ ಹೇಳುವ ಸೂತ್ರ.

**೯೨೧. ಅನಶ್ಚ ॥ ೫-೪-೧೦೮ ॥**

**ಅನ್ನಂತಾದವ್ಯಯೀಭಾವಾಟ್ಟಚ್ ಸ್ಯಾತ್ ॥**

ಅನಃ, ಚ ॥ ದ್ವಿಪದ ಸೂತ್ರ. ಹಿಂದಿನ ಸೂತ್ರದಿಂದ ಅನುವೃತ್ತವಾದ 'ಅವ್ಯಯೀಭಾವೇ' ಪದವು ಪಂಚಮ್ಯಂತವಾಗಿ ವಿಪರಿಣತವಾಗುತ್ತದೆ. 'ಅನಃ' ಅದಕ್ಕೆ ವಿಶೇಷಣ. **ಸೂತ್ರಾರ್ಥ**—ಅನ್ನಂತವಾದ ಅವ್ಯಯೀಭಾವ ಸಮಾಸದ ಮೇಲೆ ಟಚ್ ಸಮಾಸಾಂತವಾಗಿ ಬರುತ್ತದೆ. ರಾಜ್ಞಃ ಸಮೀಪಮ್ ॥ ಸಾಮೀಪ್ಯ ದಲ್ಲಿ ಅವ್ಯಯೀಭಾವ. ಉಪರಾಜನ್ ಎಂದಿರುವಾಗ ಅನ್ನಂತವಾದುದರಿಂದ ಟಚ್ ಬರುತ್ತದೆ. ಉಪರಾಜನ್+ಅ ಎಂದಿರುವಾಗ ಅನಿಗೆ ಲೋಪ ಹೇಳುತ್ತಾನೆ.

ನಾಂತದ ಟಿಗೆ ಲೋಪ ಹೇಳುವ ಸೂತ್ರ.

**೯೨೨. ನಸ್ತದ್ಧಿತೇ ॥ ೬-೪-೧೪೪ ॥**

**ನಾಂತಸ್ಯ ಭಸ್ಯ ಟೇರ್ಲೋಪಸ್ತದ್ಧಿತೇ । ಉಪರಾಜಮ್ । ಅಧ್ಯಾತ್ಮಮ್ ।**

ನಃ, ತದ್ಧಿತೇ ॥ ದ್ವಿಪದ ಸೂತ್ರ. 'ಭಸ್ಯ' ಅಧಿಕಾರ. 'ನಃ' ಅದಕ್ಕೆ ವಿಶೇಷಣವಾದುದರಿಂದ ತದಂತಲಾಭ. 'ಟೇಃ' ಸೂತ್ರವೂ 'ಅಲ್ಲೋಪೋಽನಃ' ಸೂತ್ರದಿಂದ 'ಲೋಪಃ' ಪದವೂ ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ತದ್ಧಿತ ಪ್ರತ್ಯಯ ಪರದಲ್ಲಿರುವಾಗ ಭಸಂಜ್ಞೆಯುಳ್ಳ ನಕಾರಾಂತವಾದ ಅಂಗದ ಟಿಗೆ ಲೋಪ ಬರುತ್ತದೆ. ಸಮಾಸಾಂತಪ್ರತ್ಯಯಗಳು ಐದನೇ ಅಧ್ಯಾಯದಲ್ಲಿ ಹೇಳಲ್ಪಟ್ಟಿರುವುದ ರಿಂದ ಅವುಗಳಿಗೆ ತದ್ಧಿತಸಂಜ್ಞೆ ಬರುತ್ತದೆ. ಹಿಂದೆ ಹೇಳಿದ ತದ್ಧಿತಾಧಿಕಾರಕ್ಕೆ ಇದೇ ಪ್ರಯೋಜನ. ತದ್ಧಿತವಾದ ಟಚ್ ಪರದಲ್ಲಿರುವುದರಿಂದ ನಾಂತವಾದ ಭಸಂಜ್ಞೆ ಯಿರುವ ಅಂಗವೆಂದರೆ ಉಪರಾಜನ್ ; ಇದರ ಟಿ ಅನ್ ಅದಕ್ಕೆ ಲೋಪ ಬಂದರೆ ಉಪರಾಜ್ + ಅ = ಉಪರಾಜಮ್ ಎಂದಾಗುತ್ತದೆ. ಹೀಗೆಯೇ ಆತ್ಮನಿ, ಅಧ್ಯಾತ್ಮಮ್. ವಿಭಕ್ತ್ಯರ್ಥದಲ್ಲಿ ಅವ್ಯಯೀಭಾವ. ಆತ್ಮನ್+ಙಿ+ಅಧಿ. ಅಲೌಕಿಕ ವಿಗ್ರಹವಾಕ್ಯ. ಅಧಿ+ಆತ್ಮನ್. ಅನ್ನಂತವಾದುದರಿಂದ ಟಚ್. ಅಧಿ+ಆತ್ಮನ್ +ಅ. ಅಜಾದಿಪ್ರತ್ಯಯ ಪರವಾದುದರಿಂದ ಹಿಂದಿನಂತೆ ಭಸಂಜ್ಞಾ ಬಂದು ಟಿಲೋಪ ವಾದರೆ ಅಧ್ಯಾತ್ಮ್+ಅ=ಅಧ್ಯಾತ್ಮಮ್ ಎಂದಾಗುತ್ತದೆ.

ನಪುಂಸಕದಲ್ಲಿ ಅನ್ನಂತಕ್ಕೆ ವಿಕಲ್ಪ ಟಚ್ ಹೇಳುವ ಸೂತ್ರ.

**೯೨೩. ನಪುಂಸಕಾದನ್ಯತರಸ್ಯಾಮ್ ॥ ೫-೪-೧೦೯ ॥**

**ಅನ್ನಂತಂ ಯತ್ ಕ್ಲೀಬಂ ತದಂತಾದವ್ಯಯೀಭಾವಾಟ್ಟಜ್ವಾ ಸ್ಯಾತ್ । ಉಪಚರ್ಮಮ್ । ಉಪಚರ್ಮ ॥**

ನಪುಂಸಕಾತ್, ಅನ್ಯತರಸ್ಯಾಮ್ ॥ ಹಿಂದಿನ ಸೂತ್ರಗಳು ಅನುವೃತ್ತವಾಗುತ್ತವೆ. ಅನ್ಯತರಸ್ಯಾಮ್, ವಿಕಲ್ಪಾರ್ಥಕ ಅವ್ಯಯ. **ಸೂತ್ರಾರ್ಥ**—ಅನ್ನಂತವಾದ ನಪುಂಸಕ ಶಬ್ದವೇ ಅಂತವಾದ ಅವ್ಯಯೀಭಾವ ಸಮಾಸದ ಮೇಲೆ ಟಚ್ ವಿಕಲ್ಪವಾಗಿ ಬರುತ್ತದೆ. ಚರ್ಮಣಃ ಸಮೀಪಮ್ ॥ ಸಾಮೀಪ್ಯದಲ್ಲಿ ಅವ್ಯಯೀಭಾವ. ಉಪ+ಚರ್ಮನ್+ಙಸ್. ಅಲೌಕಿಕ ವಿಗ್ರಹವಾಕ್ಯ. ಚರ್ಮನ್ ಎಂಬುದು ನಾಂತವಾದ ನಪುಂಸಕ ಶಬ್ದ. ಆದುದರಿಂದ ಟಚ್ ಬಂದರೆ ಟಿಲೋಪ ಬಂದು ಉಪಚರ್ಮಮ್ ಎಂದಾಗುತ್ತದೆ. ಬಾರದಿದ್ದರೆ ಉಪಚರ್ಮನ್ ಎಂದೇ ಇರುತ್ತದೆ. ಆದರಮೇಲೆ ಸುಪ್ ಬಂದು ಲುಕ್ ಆಗಿ, ಪದಾಂತವಾದುದರಿಂದ ನಲೋಪ ಹೊಂದಿ ಉಪಚರ್ಮ ಎಂದಾಗುತ್ತದೆ.

ಝಯಂತಕ್ಕೆ ಟಚ್ ಹೇಳುವ ಸೂತ್ರ.

**೯೨೪. ಝಯಃ ॥ ೫-೪-೧೧೧ ॥**

**ಝಯಂತಾದವ್ಯಯೀಭಾವಾಟ್ಟಜ್ವಾ ಸ್ಯಾತ್ । ಉಪಸಮಿಧಮ್ ಉಪಸಮಿತ್**

ಇತ್ಯವ್ಯಯೀಭಾವಃ ॥ ೨ ॥

ಏಕಪದ ಸೂತ್ರ. 'ಅವ್ಯಯೀಭಾವೇ' ಪದವು ಅನುವೃತ್ತವಾಗಿ ಪಂಚಮ್ಯಂತವಾಗಿ ವಿಪರಿಣತವಾಗುತ್ತದೆ. ಹಿಂದಿನ ಸೂತ್ರದಿಂದ 'ಅನ್ಯತರಸ್ಯಾಮ್' ಅನುವೃತ್ತಿ. **ಸೂತ್ರಾರ್ಥ**—ಝಯಂತವಾದ ಅವ್ಯಯೀಭಾವಸಮಾಸದಮೇಲೆ ಟಚ್ ವಿಕಲ್ಪವಾಗಿ ಬರುತ್ತದೆ. ಸಮಿಧಃ ಸಮೀಪಮ್ ಉಪಸಮಿಧಮ್ ॥ ಸಾಮೀಪ್ಯದಲ್ಲಿ ಅವ್ಯಯೀಭಾವ. ಉಪ+ಸಮಿಧ್+ಙಸ್=ಉಪಸಮಿಧ್. ಇಲ್ಲಿ ಧಕಾರ ಝಯ್. ಝಯಂತವಾದ ಅವ್ಯಯೀಭಾವವಾದುದರಿಂದ ಟಚ್ ಬಂದರೆ ಉಪಸಮಿಧಮ್ ಎಂದೂ ಬಾರದಿದ್ದರೆ ಉಪಸಮಿಧ್ ಎಂದೂ ಆಗುತ್ತದೆ.

ಅವ್ಯಯೀಭಾವಸಮಾಸ ಮುಗಿದಿದೆ.

## ೧೯. ಅಥ ತತ್ಪುರುಷಃ

ತತ್ಪುರುಷಾಧಿಕಾರಸೂತ್ರ.

**೯೨೫. ತತ್ಪುರುಷಃ ॥ ೨-೧-೨೨ ॥**

**ಅಧಿಕಾರೋಽಯಂ ಪ್ರಾಗ್ಬಹುವ್ರೀಹೇಃ ॥**

ಏಕಪದ ಸೂತ್ರ. ಅಧಿಕಾರಸೂತ್ರವಾದುದರಿಂದ ಇಲ್ಲಿ ವಾಕ್ಯಾರ್ಥವಿಲ್ಲ. 'ಶೇಷೋ ಬಹುವ್ರೀಹಿಃ' ಸೂತ್ರದವರೆಗೆ 'ತತ್ಪುರುಷಃ' ಎಂಬುದು ಅಧಿಕೃತ

ವಾಗುತ್ತದೆ. ಮುಂದಿನ ಸೂತ್ರಗಳಲ್ಲಿ ಈ ಸೂತ್ರ ಹೋಗಿ 'ಇಲ್ಲಿ ವಿಧಾನ ಮಾಡಿರುವುದು ತತ್ಪುರುಷಸಮಾಸ'ವೆಂದು ತಿಳಿಸುತ್ತದೆ.

ದ್ವಿಗುವಿಗೆ ತತ್ಪುರುಷ ಸಂಜ್ಞೆ ಹೇಳುವ ಸೂತ್ರ.

**೯೨೬. ದ್ವಿಗುಶ್ಚ || ೨-೧-೨೩ ||**

**ದ್ವಿಗುರಪಿ ತತ್ಪುರುಷಸಂಜ್ಞಕಃ ಸ್ಯಾತ್ ||**

ದ್ವಿಗುಃ, ಚ || ದ್ವಿಪದ ಸೂತ್ರ. ದ್ವಿಗುವೂ ತತ್ಪುರುಷ ಸಂಜ್ಞೆಯನ್ನು ಹೊಂದುತ್ತದೆ. 'ತದ್ಧಿತಾರ್ಥೋತ್ತರಪದಸಮಾಹಾರೇಚ' ಸೂತ್ರದಿಂದ ಸಮಾಸ ಹೇಳುವಾಗ 'ಸಂಖ್ಯಾಪೂರ್ವೋ ದ್ವಿಗುಃ' ಎಂಬ ಸೂತ್ರದಿಂದ ದ್ವಿಗುಸಮಾಸ ಹೇಳುತ್ತಾನೆ. ಈ ಸೂತ್ರದಿಂದ ತತ್ಪುರುಷಸಮಾಸ ಸಂಜ್ಞೆ ಹೇಳದೆ ಹೋದರೆ ಒಂದು ಸಂಜ್ಞೆಯಿಂದ ಇನ್ನೊಂದು ಸಂಜ್ಞೆಗೆ ಬಾಧಕ ಬಂದು ತತ್ಪುರುಷ ಸಂಜ್ಞೆ ಬಾರದೇ ಹೋಗಬೇಕಾಗುತ್ತದೆ. ಆಗ ದ್ವಿಗುವಿನ ಮೇಲೆ ತತ್ಪುರುಷಸಮಾಸಾಂತಪ್ರತ್ಯಯಗಳು ಬಾರದೆ ಇಷ್ಟರೂಪವಾಗದೇ ಹೋಗಿ ಅನಿಷ್ಟರೂಪವಾಗುವುದು. ಅದಕ್ಕೋಸ್ಕರ ಎರಡು ಸಂಜ್ಞೆಗಳನ್ನು ಹೇಳಲು ಈ ಸೂತ್ರ ಆರಬ್ಧವಾಗಿದೆ.

ದ್ವಿತೀಯಾತತ್ಪುರುಷವಿಧಾಯಕ ಸೂತ್ರ.

**೯೨೭. ದ್ವಿತೀಯಾ ಶ್ರಿತಾತೀತಪತಿತಗತಾತ್ಯಸ್ತಪ್ರಾಪ್ತಾಪನ್ನೈಃ || ೨-೧-೨೪ ||**

**ದ್ವಿತೀಯಾಂತಂ ಶ್ರಿತಾದಿಪ್ರಕೃತಿಕೈಃ ಸುಬಂತೈಃ ಸಹ ವಾ ಸಮಸ್ಯತೇ ಸ ಚ ತತ್ಪುರುಷಃ | ಕೃಷ್ಣಂ ಶ್ರಿತಃ ಕೃಷ್ಣಶ್ರಿತ ಇತ್ಯಾದಿ ||**

ದ್ವಿಪದ ಸೂತ್ರ. 'ಪ್ರತ್ಯಯಗ್ರಹಣೇ ತದಂತಗ್ರಹಣಮ್' ಪರಿಭಾಷೆಯಿಂದ ದ್ವಿತೀಯಾ ಪ್ರತ್ಯಯವಾದುದರಿಂದ ದ್ವಿತೀಯಾಂತವೆಂದಾಗುತ್ತದೆ. 'ಸುಪಾ' ಅನುವೃತ್ತಿ. 'ತತ್ಪುರುಷಃ' ಅಧಿಕಾರ. ಶ್ರಿತಾದಿಗಳು ಕೇವಲ ಕ್ತಪ್ರತ್ಯಯಾಂತಗಳಾದುದರಿಂದ ಶ್ರಿತಾದಿಗಳೇ ಪ್ರಕೃತಿಯಾಗಿರುವ ಸುಬಂತಗಳೆಂದು ಅರ್ಥಮಾಡಬೇಕು. **ಸೂತ್ರಾರ್ಥ**—ದ್ವಿತೀಯಾಂತ ಸುಬಂತ ಶಬ್ದವು ಶ್ರಿತ, ಅತೀತ, ಪತಿತ, ಗತ, ಅತ್ಯಸ್ತ, ಪ್ರಾಪ್ತ, ಆಪನ್ನ ಶಬ್ದಗಳೇ ಪ್ರಕೃತಿಯಾಗಿರುವ ಸುಬಂತಗಳೊಡನೆ ಸಮಾಸಹೊಂದುತ್ತದೆ; ಅದು ತತ್ಪುರುಷಸಂಜ್ಞೆಯನ್ನು ಹೊಂದುತ್ತದೆ. ಉದಾ.—ಕೃಷ್ಣಂ ಶ್ರಿತಃ ಕೃಷ್ಣಶ್ರಿತಃ || ಕೃಷ್ಣ+ಅಮ್+ಶ್ರಿತ+ಸು. ಅಲೌಕಿಕ ವಿಗ್ರಹ ವಾಕ್ಯ. ದ್ವಿತೀಯಾಂತವು ಪ್ರಥಮಾನಿರ್ದಿಷ್ಟವಾದುದರಿಂದ ಉಪಸರ್ಜನಸಂಜ್ಞೆಯನ್ನು ಹೊಂದಿ ಪೂರ್ವನಿಪಾತವನ್ನು ಹೊಂದುತ್ತದೆ. 'ಸುಪೋ ಧಾತುಪ್ರಾತಿಪದಿಕಯೋಃ' ಸೂತ್ರದಿಂದ ಸುಪಿಗೆ ಲುಕ್ ಬಂದರೆ ಕೃಷ್ಣಶ್ರಿತಃ ಎಂದಾಗುತ್ತದೆ. ದುಃಖಂ ಅತೀತಃ

ದುಃಖಾತೀತಃ ॥ ಕೂಪಂ ಪತಿತಃ ಕೂಪಪತಿತಃ ॥ ಗ್ರಾಮಂ ಗತಃ ಗ್ರಾಮಗತಃ ॥ ತುಹಿನಂ ಅತ್ಯಸ್ತಃ ತುಹಿನಾತ್ಯಸ್ತಃ ॥ ಸುಖಂ ಪ್ರಾಪ್ತಃ ಸುಖಪ್ರಾಪ್ತಃ ॥ ದುಃಖಂ ಆಪನ್ನಃ ದುಃಖಾಪನ್ನಃ ॥ (ಕ್ರಮವಾಗಿ ಕೃಷ್ಣನನ್ನು ಆಶ್ರಯಿಸಿದವನು, ದುಃಖವನ್ನು ಕಳೆದವನು, ಬಾವಿಯಲ್ಲಿ ಬಿದ್ದವನು, ಗ್ರಾಮಕ್ಕೆ ಹೋದವನು, ಮಂಜನ್ನು ದಾಟಿದವನು, ಸುಖವನ್ನು ಹೊಂದಿದವನು, ದುಃಖವನ್ನು ಹೊಂದಿದವನು, ಎಂದರ್ಥ.)

ತೃತೀಯಾತತ್ಪುರುಷವಿಧಾಯಕ ಸೂತ್ರ.

**೯೨೮. ತೃತೀಯಾ ತತ್ಕೃತಾರ್ಥೇನ ಗುಣವಚನೇನ ॥ ೨-೧-೩೦ ॥**

**ತೃತೀಯಾಂತಂ ತೃತೀಯಾಂತಾರ್ಥಕೃತಗುಣವಚನೇನ ಅರ್ಥೇನ ಚ ಸಹ ವಾ ಪ್ರಾಗ್ವತ್ । ಶಂಕುಲಯಾ ಖಂಡಃ ಶಂಕುಲಾಖಂಡಃ । ಧಾನ್ಯೇನ ಅರ್ಥೋ ಧಾನ್ಯಾರ್ಥಃ । ತತ್ಕೃತ-ಇತಿ ಕಿಮ್ ? ಅಕ್ಷ್ಣಾ ಕಾಣಃ ॥**

ತೃತೀಯಾ, ತತ್ಕೃತ, ಅರ್ಥೇನ, ಗುಣವಚನೇನ ॥ ನಾಲ್ಕು ಪದಗಳುಳ್ಳ ಸೂತ್ರ. ತೃತೀಯಾ ಪದದಿಂದ ಹಿಂದಿನಂತೆ ತೃತೀಯಾಂತ ಸುಬಂತ ಎಂದರ್ಥವಾಗುತ್ತದೆ. ತತ್ಕೃತ ಎಂಬಲ್ಲಿ ತೃತೀಯಾ ಲುಪ್ತವಾಗಿದೆ. ತತ್ಕೃತೇನ ಎಂದಿರಬೇಕಿತ್ತು. ತತ್ ಪದದಿಂದ ತೃತೀಯಾಂತ ಗೃಹೀತವಾಗುತ್ತದೆ. ಅದರಿಂದ ಅರ್ಥವು ಲಕ್ಷಣೆಯಿಂದ ವಿವಕ್ಷಿತವಾಗಿದೆ. ತೃತೀಯಾಂತಾರ್ಥೇನ ಕೃತಂ, ತೇನ. ತತ್ಕೃತೇನ. ಗುಣವಚನೇನ ಎಂಬಲ್ಲಿ ಅದಕ್ಕೆ ಅನ್ವಯ. ತೃತೀಯಾಂತಾರ್ಥದಿಂದ ಮಾಡಲ್ಪಟ್ಟ ಗುಣವಾಚಕದಿಂದ ಎಂದರ್ಥ. **ಸೂತ್ರಾರ್ಥ**—ತೃತೀಯಾಂತ ಸುಬಂತವು ತೃತೀಯಾಂತಾರ್ಥದಿಂದ ಮಾಡಲ್ಪಟ್ಟ ಗುಣವಾಚಕ ಶಬ್ದವೇ ಪ್ರಕೃತಿಯಾಗಿರುವ ಸುಬಂತದೊಡನೆಯೂ, ಅರ್ಥಶಬ್ದಪ್ರಕೃತಿಕಸುಬಂತದೊಡನೆಯೂ ಸಮಾಸವಾಗಿ ತತ್ಪುರುಷಸಂಜ್ಞೆಯನ್ನು ಹೊಂದುತ್ತದೆ. ಉದಾ.—ಶಂಕುಲಯಾ ಖಂಡಃ ಶಂಕುಲಾಖಂಡಃ ॥ (ಶಂಕುಲಾ+ಟಾ+ಖಂಡ+ಸು) ಇಲ್ಲಿ ತೃತೀಯಾಂತಪದ, ಶಂಕುಲಯಾ, ಅದರ ಅರ್ಥ ಶಂಕುಲಾರೂಪ ಕರಣ (ಸಾಧನವಾದ ಮೊಳೆ ಅಥವಾ ಗೂಟ) ಅದರಿಂದ ಮಾಡಲ್ಪಟ್ಟ ಗುಣವೆಂದರೆ ಖಂಡನರೂಪಕ್ರಿಯಾ (ಗಾಯ). ಅದನ್ನು ಹೇಳುವ ಪದ ಖಂಡ, ಅದೇ ಪ್ರಕೃತಿಯಾದ ಸುಬಂತ ಖಂಡಃ, ಇದರೊಡನೆ ಸಮಾಸ ಹೊಂದಿದೆ. ಮೊಳೆಯಿಂದ (ಅಥವಾ ಕಲ್ಲುಚೂರಿಂದ) ಮಾಡಲ್ಪಟ್ಟ ಗಾಯವುಳ್ಳವ (ದೇವದತ್ತ) ಎಂದರ್ಥ. ಧಾನ್ಯೇನ ಅರ್ಥಃ ಧಾನ್ಯಾರ್ಥಃ ॥ (ಧಾನ್ಯ+ಟಾ+ಅರ್ಥ+ಸು) ಅರ್ಥ್ಯತೇ ಇತಿ ಅರ್ಥಃ ॥ ಹಣ ಮುಂತಾದವುಗಳು (ಪ್ರಯೋಜನ). ಧಾನ್ಯೇನ ಎಂಬಲ್ಲಿ ಹೇತ್ವರ್ಥದಲ್ಲಿ ತೃತೀಯಾ. ಧಾನ್ಯನಿಮಿತ್ತಕವಾದ ಹಣವೆಂದರ್ಥ. ಈಗ ಸೂತ್ರದಲ್ಲಿರುವ ಪದಗಳ ಸಾರ್ಥಕ್ಯವನ್ನು ತೋರಿಸುತ್ತಾನೆ. ತತ್ಕೃತವೆಂದು ಏಕೆ ಹೇಳಬೇಕು ? ಅಕ್ಷ್ಣಾ+ಕಾಣಃ ಎಂಬಲ್ಲಿ ಸಮಾಸ ಬರುವುದಿಲ್ಲ. ಶಂಕಾ

ಸಮಾಧಾನಗಳ ತಾತ್ಪರ್ಯ. ಸೂತ್ರದಲ್ಲಿ ತತ್‌ಕೃತವೆಂದು ಹೇಳಬೇಕಾಗಿಲ್ಲ. 'ಕರ್ತೃಕರಣೇ ಕೃತಾ ಬಹುಲಮ್' ಸೂತ್ರದಿಂದ ಮುಂದೆ ಕರಣವಾಚಕ ತೃತೀಯಾಂತ ಪದವು ಸುಬಂತದೊಡನೆ ಸಮಾಸಹೊಂದುತ್ತದೆ ಎಂದು ಹೇಳುವುದರಿಂದ ಶಂಕುಲಾ ಕರಣವಾಚಕವಾದುದರಿಂದ ಆ ಸೂತ್ರದಿಂದಲೇ ಸಮಾಸವಾಗುತ್ತದೆ. ಪುನಃ ಏಕೆ ಹೇಳಬೇಕು ? ಅಂದರೆ ನಿಯಮಕ್ಕೋಸ್ಕರ ಪುನಃ ಇಲ್ಲಿ ಹೇಳಿರುತ್ತಾನೆ. ಗುಣವಾಚಕ ಸುಬಂತದೊಡನೆ ತೃತೀಯಾಂತವು ಸಮಾಸಹೊಂದುವುದಾದರೆ ಅದು ತತ್‌ಕೃತದಿಂದಲೇ, ಇತರ ಪದಗಳೊಡನೆ ಸಮಾಸಹೊಂದುವುದಿಲ್ಲ ಎಂಬ ನಿಯಮವು ಲಬ್ಧವಾಗುವುದರಿಂದ ಅಕ್ಷ್ಣಾ + ಕಾಣಃ ಎಂಬಲ್ಲಿ ಸಮಾಸ ಬರುವುದಿಲ್ಲ. ಕಣ್ಣಿನಿಂದ 'ಕಾಣ'ನಾದುದಲ್ಲ. ರೋಗದಿಂದ ಒಂದು ಕಣ್ಣು ಹೋಗಿದೆ. ತತ್‌ಕೃತವಾಗಲಿಲ್ಲ.

ಕರ್ತೃಕರಣ ತೃತೀಯಾತತ್ಪುರುಷ ಹೇಳುವ ಸೂತ್ರ.

**೯೨. ಕರ್ತೃಕರಣೇ ಕೃತಾ ಬಹುಲಮ್ ॥ ೨-೧-೩೨ ॥**

**ಕರ್ತರಿ ಕರಣೇ ಚ ತೃತೀಯಾ ಕೃದಂತೇನ ಬಹುಲಂ ಪ್ರಾಗ್ವತ್ । ಹರಿಣಾ ತ್ರಾತೋ ಹರಿತ್ರಾತಃ । ನಖೈರ್ಭಿನ್ನೋ ನಖಭಿನ್ನಃ । (ಪರಿಭಾಷಾ) ಕೃದ್‌ಗ್ರಹಣೇ ಗತಿಕಾರಕಪೂರ್ವಸ್ಯಾಪಿ ಗ್ರಹಣಮ್ । ನಖನಿರ್ಭಿನ್ನಃ ॥**

ತ್ರಿಪದ ಸೂತ್ರ. ಕರ್ತಾ ಚ ಕರಣಂ ಚ ತಯೋಃ ಸಮಾಹಾರಃ ಕರ್ತೃಕರಣಂ, ತಸ್ಮಿನ್. ಕೃತ್‌ಪ್ರತ್ಯಯವಾದುದರಿಂದ ತದಂತಗ್ರಹಣ. **ಸೂತ್ರಾರ್ಥ**—ಕರ್ತ್ರರ್ಥದಲ್ಲಿಯೂ ಕರಣಾರ್ಥದಲ್ಲಿಯೂ ಯಾವ ತೃತೀಯಾ ಇದೆಯೋ ಆ ತೃತೀಯಾಂತವಾದ ಸುಬಂತವು ಕೃದಂತಪ್ರಕೃತಿಕಸುಬಂತದೊಡನೆ ವಿಕಲ್ಪಸಮಾಸವಾಗಿ ತತ್ಪುರುಷ ಸಂಜ್ಞೆಯನ್ನು ಹೊಂದುತ್ತದೆ. ಉದಾ.—ಹರಿಣಾ + ತ್ರಾತಃ ಹರಿತ್ರಾತಃ (ಹರಿ + ಟಾ + ತ್ರಾತ + ಸು) **ತ್ರೈಙ್** = ಪಾಲನೇ. ಧಾತು. ಕ್ತ ಪ್ರತ್ಯಯ ಬಂದಿದೆ. ಕರ್ತ್ರರ್ಥದಲ್ಲಿ ತೃತೀಯಾ. ನಖೈಃ ಭಿನ್ನಃ ನಖಭಿನ್ನಃ (ನಖ + ಭಿಸ್ + ಭಿನ್ನ + ಸು) ಕರಣಾರ್ಥದಲ್ಲಿ ತೃತೀಯಾ. **ಭಿದಿರ್** = ವಿದಾರಣೇ. ಧಾತು. ಕ್ತ ಪ್ರತ್ಯಯ. 'ರದಾಭ್ಯಾಂ ನಿಷ್ಠಾತಃ—' (ಸೂ. ೮೯೯) ಸೂತ್ರದಿಂದ ನತ್ವ. ಸೂತ್ರದಲ್ಲಿ ಕೇವಲ ಕೃದಂತದೊಡನೆ ಸಮಾಸ ಹೇಳಿದೆ. ಸಮಾಸದಲ್ಲಿ ತದಂತವಿಧಿಗೆ ನಿಷೇಧವಿರುವುದರಿಂದ ಕೃದಂತಾಂತ ಶಬ್ದದೊಡನೆ ಸಮಾಸವೆಂದು ಅರ್ಥಮಾಡಲು ಕಾರಣವಿಲ್ಲ. ಅದಕ್ಕೋಸ್ಕರ ಪರಿಭಾಷೆ ಹೇಳಿರುತ್ತಾನೆ. **ಪರಿಭಾಷಾರ್ಥ**—ಕೃದಂತ ಶಬ್ದಗಳಿಗೆ ಎಲ್ಲಿಯಾದರೂ ಗ್ರಹಣವಿದ್ದರೆ (ಕೃದಂತ ಶಬ್ದಗಳನ್ನು ತೆಗೆದುಕೊಳ್ಳುವುದಾದರೆ) ಆಗ ಗತಿಪೂರ್ವಕವಾದ ಕೃದಂತಕ್ಕೂ ಕಾರಕಪೂರ್ವಕವಾದ ಕೃದಂತಕ್ಕೂ ಗ್ರಹಣವಿದೆಯೆಂದು ತಿಳಿಯಬೇಕು. ಈ ಸೂತ್ರದಲ್ಲಿ ಕೃದಂತದೊಡನೆ ಕಾರ್ಯ ಹೇಳಿರುವುದರಿಂದ ಗತಿಕಾರಕಪೂರ್ವಕ ಕೃದಂತದೊಡನೆಯೂ ಸಮಾಸ ಬರುತ್ತದೆ ಎಂದು

ಪರಿಭಾಷೆಯಿಂದ ಅರ್ಥವಾಗುತ್ತದೆ. ಆಗ ನಖೈಃ+ನಿರ್ಭಿನ್ನಃ ನಖನಿರ್ಭಿನ್ನಃ ಎಂದು ಗತಿಪೂರ್ವಕ ಕೃದಂತದೊಡನೆ ಸಮಾಸವಾಗುತ್ತದೆ. ನಿರಿಗೆ ಕ್ರಿಯಾಯೋಗವಿರುವುದ ರಿಂದ 'ಗತಿಶ್ಚ' ಸೂತ್ರದಿಂದ ಗತಿಸಂಜ್ಞೆ. ಕರಣಾರ್ಥದಲ್ಲಿ ತೃತೀಯಾ. ಉಗುರಿ ನಿಂದ ಸೀಳಲ್ಪಟ್ಟವನು.

ಚತುರ್ಥೀತತ್ಪುರುಷವಿಧಾಯಕ ಸೂತ್ರ.

**೯೩೦. ಚತುರ್ಥೀ ತದರ್ಥಾರ್ಥಬಲಿಹಿತಸುಖರಕ್ಷಿತೈಃ ॥ ೨-೧-೩೬ ॥**

**ಚತುರ್ಥ್ಯಂತಾರ್ಥಾಯ ಯತ್ ತದ್ವಾಚಿನಾ ಅರ್ಥಾದಿಭಿಶ್ಚ ಚತುರ್ಥ್ಯಂತಂ ವಾ ಪ್ರಾಗ್ವತ್ । ಯೂಪಾಯ ದಾರು ಯೂಪದಾರು ।**

**ವಾ ॥ (ತದರ್ಥೇನ ಪ್ರಕೃತಿವಿಕೃತಿಭಾವ ಏವೇಷ್ಟಃ ॥)**

**ತೇನೇಹ ನ—ರಂಧನಾಯ ಸ್ಥಾಲೀ ।**

**ವಾ ॥ (ಅರ್ಥೇನ ನಿತ್ಯಸಮಾಸೋ ವಿಶೇಷ್ಯಲಿಂಗತಾ ಚೇತಿ ವಕ್ತವ್ಯಮ್)**

**ದ್ವಿಜಾರ್ಥಃ ಸೂಪಃ । ದ್ವಿಜಾರ್ಥಾ ಯವಾಗೂಃ । ದ್ವಿಜಾರ್ಥಂ ಪಯಃ । ಭೂತಬಲಿಃ । ಗೋಹಿತಮ್ । ಗೋಸುಖಮ್ । ಗೋರಕ್ಷಿತಮ್ ॥**

ದ್ವಿಪದ ಸೂತ್ರ. ಚತುರ್ಥೀ ಪದದಿಂದ ಚತುರ್ಥ್ಯಂತಗ್ರಹಣ. ತದರ್ಥಂ ಚ, ಅರ್ಥಶ್ಚ, ಬಲಿಶ್ಚ, ಹಿತಂ ಚ, ಸುಖಂ ಚ, ರಕ್ಷಿತಂ ಚ ತದರ್ಥಾರ್ಥಬಲಿಹಿತಸುಖ ರಕ್ಷಿತಾನಿ. ತೈಃ । ತತ್ ಪದದಿಂದ ಚತುರ್ಥ್ಯಂತಾರ್ಥ ವಿವಕ್ಷಿತವಾಗಿದೆ. ತಸ್ಮೈ ಚತುರ್ಥ್ಯಂತಾರ್ಥಾಯ ಇದಂ ತದರ್ಥಮ್. ಚತುರ್ಥ್ಯಂತಾರ್ಥಕ್ಕೋಸ್ಕರ ಯಾವುದು ಇದೆಯೋ ಅದು. **ಸೂತ್ರಾರ್ಥ**—ಚತುರ್ಥ್ಯಂತ ಸುಬಂತವು ತದರ್ಥ, ಅರ್ಥ, ಬಲಿ, ಹಿತ, ಸುಖ, ರಕ್ಷಿತ ಪ್ರಕೃತಿಕಸುಬಂತದೊಡನೆ ವಿಕಲ್ಪವಾಗಿ ಸಮಾಸವಾಗಿ ತತ್ಪುರುಷಸಂಜ್ಞೆಯನ್ನು ಹೊಂದುತ್ತದೆ. ತದರ್ಥದಲ್ಲಿ—ಯೂಪಾಯ+ದಾರು= ಯೂಪದಾರು. ಇಲ್ಲಿ ಚತುರ್ಥ್ಯಂತವಾಚ್ಯವಾದುದು ಯೂಪ, ಇದಕ್ಕೋಸ್ಕರ ಇರುವುದು ದಾರು (ಮರ). ಯೂಪಸ್ತಂಭಕ್ಕೋಸ್ಕರ ಇರುವ ಮರ. (ಯೂಪ+ ಙೇ+ದಾರು+ಸು) ದಾರು ಶಬ್ದ ನಪುಂಸಕವಾಗಿದೆ. ಚತುರ್ಥ್ಯಂತಾರ್ಥಕ್ಕೋಸ್ಕರ ಇರುವುದು ಎಂದರೆ ಯಾವ ಸಂಬಂಧದಲ್ಲಿಯೂ ಬರಬಹುದು; ಆದರೆ ಇಲ್ಲಿ ನಿಯಮ ಮಾಡುತ್ತಾನೆ. **ತದರ್ಥೇನೇತಿ**—ತದರ್ಥದಿಂದ ಪ್ರಕೃತಿವಿಕೃತಿಭಾವ ಮಾತ್ರ ಇಲ್ಲಿ ಇಷ್ಟವಾಗಿದೆ. ಸಮವಾಯಿಕಾರ್ಯಕಾರಣಭಾವ ಇರುವಾಗ ಮಾತ್ರ ಈ ಸಮಾಸ. ಘಟಾಯ+ಮೃತ್ತಿಕಾ=ಘಟಮೃತ್ತಿಕಾ. ಗಡಿಗೆಗೋಸ್ಕರ ಮಣ್ಣು. ಇಲ್ಲಿ ಮಣ್ಣು ಸಮವಾಯಿಕಾರಣ. ಕೊಡ ಕಾರ್ಯ. ಆದುದರಿಂದ ಸಮಾಸ ಬಂದಿದೆ. ಹೀಗೆಯೇ, ಪಟಾಯ+ತಂತವಃ=ಪಟತಂತವಃ; ಶಂಕವೇ+ದಾರು=ಶಂಕುದಾರು ಇತ್ಯಾದಿ

ಸಮಾಸಗಳಾಗುತ್ತವೆ. ರಂಧನಾಯ+ಸ್ಥಾಲೀ ಇಲ್ಲಿ ಸಮಾಸ ಬರುವುದಿಲ್ಲ. ಹಿಟ್ಟಿಗೋಸ್ಕರ ಪಾತ್ರೆ (ಥಾಲಿ). ತದರ್ಥವಾದರೂ ಸ್ಥಾಲೀ ರಂಧನದ ಪ್ರಕೃತಿಯಲ್ಲ. ಕಾರ್ಯಕಾರಣಭಾವ ತೋರುವುದಿಲ್ಲ. ಅರ್ಥ ಶಬ್ದದೊಡನೆ ಸಮಾಸವಾಗುವಾಗ ನಿಯಮ ಹೇಳುತ್ತಾನೆ. **ಅರ್ಥೇನನೇತಿ**—ಅರ್ಥ ಶಬ್ದದೊಡನೆ ನಿತ್ಯಸಮಾಸ ಹೇಳಬೇಕು (ವಿಕಲ್ಪವಿಲ್ಲ). ವಿಶೇಷ್ಯಕ್ಕೆ ಯಾವ ಲಿಂಗವಿದೆಯೋ ಆ ಲಿಂಗವೇ ಸಮಾಸಕ್ಕೆ ಬರುತ್ತದೆ ಎಂದರ್ಥ. ದ್ವಂದ್ವ, ತತ್ಪುರುಷ ಸಮಾಸಗಳಲ್ಲಿ ಪರಪದದ ಲಿಂಗಕ್ಕೇ ಪ್ರಾಧಾನ್ಯವೆಂದೂ ಅದು ಸಮಾಸಕ್ಕೆ ಬರುತ್ತದೆಂದೂ ಮುಂದೆ ಹೇಳುತ್ತಾನೆ. ಅದಕ್ಕೆ ಅಪವಾದವಾಗಿ ಇಲ್ಲಿ ವಿಶೇಷ್ಯಲಿಂಗ ಹೇಳಿರುತ್ತಾನೆ. ನಿತ್ಯಸಮಾಸವಾದುದರಿಂದ ಸ್ವಪದವಿಗ್ರಹವಿಲ್ಲ. ದ್ವಿಜಾಯ, ದ್ವಿಜಾರ್ಥಃ ಸೂಪಃ (ಬ್ರಾಹ್ಮಣನಿಗೋಸ್ಕರ ತೊವ್ವೆ). ಸೂಪ ಪುಲ್ಲಿಂಗವಾದುದರಿಂದ ದ್ವಿಜಾರ್ಥಃ ಎಂದು ಪುಲ್ಲಿಂಗ ಬಂದಿದೆ. ದ್ವಿಜಾರ್ಥಾ ಯವಾಗೂಃ=ಬ್ರಾಹ್ಮಣನಿಗೋಸ್ಕರ ಗಂಜಿ. ಯವಾಗೂ ಸ್ತ್ರೀಲಿಂಗವಾದುದರಿಂದ ಸ್ತ್ರೀಲಿಂಗ ಬಂದಿದೆ. ದ್ವಿಜಾರ್ಥಂ ಪಯಃ=ಬ್ರಾಹ್ಮಣನಿಗೋಸ್ಕರ ಹಾಲು. ಪಯಃ ನಪುಂಸಕವಾದುದರಿಂದ ನಪುಂಸಕಲಿಂಗ ಬಂದಿದೆ. ಭೂತೇಭ್ಯೋ+ಬಲಿಃ=ಭೂತಬಲಿಃ। (ಭೂತ+ಭ್ಯಸ್+ಬಲಿ+ಸು). ಗವೇ+ಹಿತಮ್=ಗೋಹಿತಮ್. (ಗೋ+ಙೇ+ಹಿತ+ಸು). ಗೋವಿಗೆ ಹಿತವಾದುದು. ಗವೇ+ಸುಖಮ್=ಗೋಸುಖಮ್. ಗವೇ+ರಕ್ಷಿತಮ್=ಗೋರಕ್ಷಿತಮ್. ಗೋವಿಗೋಸ್ಕರ ರಕ್ಷಿಸಲ್ಪಟ್ಟದ್ದು.

ಪಂಚಮೀತತ್ಪುರುಷವಿಧಾಯಕ ಸೂತ್ರ.

**೯೩೧. ಪಂಚಮೀ ಭಯೇನ ॥ ೨-೧-೩೭ ॥**

**ಚೋರಾದ್ಭಯಂ ಚೋರಭಯಮ್**

ದ್ವಿಪದ ಸೂತ್ರ. ಪಂಚಮ್ಯಂತ ಶಬ್ದವು ಭಯ ಶಬ್ದ ಪ್ರಕೃತಿಕ ಸುಬಂತದೊಡನೆ ಸಮಾಸ ಹೊಂದುತ್ತದೆ. ಚೋರಾತ್+ಭಯಂ=ಚೋರಭಯಮ್. (ಚೋರ+ಙಸಿ+ಭಯ+ಸು). ಕಳ್ಳನಿಂದ ಹೆದರಿಕೆ.

ಸ್ತೋಕಾದಿಗಳಿಗೆ ಕ್ತಾಂತದೊಡನೆ ಸಮಾಸ ಹೇಳುವ ಸೂತ್ರ.

**೯೩೨. ಸ್ತೋಕಾನ್ತಿಕದೂರಾರ್ಥಕೃಚ್ಛ್ರಾಣಿ ಕ್ತೇನ ॥ ೨-೧-೩೯ ॥**

ಪಂಚಮಿಗೆ ಅಲುಕ್ ಹೇಳುವ ಸೂತ್ರ.

**೯೩೩. ಪಂಚಮ್ಯಾಃ ಸ್ತೋಕಾದಿಭ್ಯಃ ॥ ೬-೩-೨ ॥**

**ಅಲುಗುತ್ತರಪದೇ । ಸ್ತೋಕಾನ್ಮುಕ್ತಃ । ಅಂತಿಕಾದಾಗತಃ । ಅಭ್ಯಾಶಾದಾಗತಃ । ದೂರಾದಾಗತಃ । ಕೃಚ್ಛ್ರಾದಾಗತಃ ॥**

ದ್ವಿಪದ ಸೂತ್ರ. ಸ್ತೋಕಾರ್ಥಕ, ಅಂತಿಕಾರ್ಥಕ, ದೂರಾರ್ಥಕ, ಕೃಚ್ಛ್ರ— ಈ ಪಂಚಮ್ಯಂತ ಶಬ್ದಗಳು ಕ್ತಪ್ರತ್ಯಯಾಂತ ಸುಬಂತಗಳೊಡನೆ ಸಮಾಸವಾಗಿ ತತ್ಪುರುಷಸಂಜ್ಞೆಯನ್ನು ಹೊಂದುತ್ತವೆ. ಸ್ತೋಕವೆಂದರೆ ಅಲ್ಪ. ಅಂತಿಕ=ಹತ್ತಿರ. ಸ್ತೋಕಾತ್+ಮುಕ್ತಃ (ಸ್ತೋಕ+ಙಸಿ+ಮುಕ್ತ+ಸು) ಎಂದಿರುವಾಗ ಸುಪಿಗೆ ಲುಕ್ ಪ್ರಾಪ್ತವಾದರೆ ಅಪವಾದವಾಗಿ ಅಲುಕ್ ಹೇಳುತ್ತಾನೆ.

ದ್ವಿಪದ ಸೂತ್ರ. 'ಅಲುಗುತ್ತರಪದೇ' ಅಧಿಕಾರ. ಸ್ತೋಕಾದಿ ಶಬ್ದಗಳ ಪರದಲ್ಲಿರುವ ಪಂಚಮಿಗೆ ಉತ್ತರಪದ ಪರದಲ್ಲಿರುವಾಗ ಲುಕ್ ಬರುತ್ತದೆ. ಪ್ರಕೃತ ಉತ್ತರಪದ ಪರದಲ್ಲಿರುವುದರಿಂದ ಪಂಚಮಿಗೆ ಅಲುಕ್ ಬಂದರೆ ಸ್ತೋಕಾನ್ಮುಕ್ತಃ ಎಂದೇ ಇರುತ್ತದೆ. ಹೀಗೆಯೇ, ಅಂತಿಕಾತ್+ಆಗತಃ=ಅಂತಿಕಾದಾಗತಃ ; ಅಭ್ಯಾಶಾತ್+ಆಗತಃ=ಅಭ್ಯಾಶಾದಾಗತಃ । ದೂರಾದಾಗತಃ । ಕೃಚ್ಛ್ರಾದಾಗತಃ ॥

ಷಷ್ಠೀಸಮಾಸವಿಧಾಯಕ ಸೂತ್ರ.

**೯೩೪. ಷಷ್ಠೀ ॥ ೨-೨-೮ ॥**

**ಸುಬಂತೇನ ಪ್ರಾಗ್ವತ್ । ರಾಜಪುರುಷಃ ॥**

ಏಕಪದ ಸೂತ್ರ. ಷಷ್ಠ್ಯಂತ ಸುಬಂತವು ಸುಬಂತದೊಡನೆ ವಿಕಲ್ಪವಾಗಿ ಸಮಾಸವಾಗಿ ತತ್ಪುರುಷ ಸಂಜ್ಞೆಯನ್ನು ಹೊಂದುತ್ತದೆ. ಉದಾ.—ರಾಜ್ಞಃ+ಪುರುಷಃ (ರಾಜನ್+ಙಸ್+ಪುರುಷ+ಸು). ರಾಜನ್‌ಪುರುಷ ಎಂದಿರುವಾಗ 'ನಲೋಪಃ ಪ್ರಾತಿಪದಿಕಾಂತಸ್ಯ' ಸೂತ್ರದಿಂದ ನಲೋಪ. ರಾಜಪುರುಷಃ ॥

ಪೂರ್ವಾದಿಗಳಿಗೆ ಸಮಾಸ ಹೇಳುವ ಸೂತ್ರ.

**೯೩೫. ಪೂರ್ವಾಪರಾಧರೋತ್ತರಮೇಕದೇಶಿನೈಕಾಧಿಕರಣೇ ॥ ೨-೨-೧ ॥**

**ಅವಯವಿನಾ ಸಹ ಪೂರ್ವಾದಯಃ ಸಮಸ್ಯಂತೇ ಏಕತ್ವಸಂಖ್ಯಾವಿಶಿಷ್ಟಶ್ಚೇದವಯವೀ । ಷಷ್ಠೀಸಮಾಸಾಪವಾದಃ । ಪೂರ್ವಂ ಕಾಯಸ್ಯ ಪೂರ್ವಕಾಯಃ । ಅಪರಕಾಯಃ । ಏಕಾಧಿಕರಣೇ ಕಿಮ್ ? ಪೂರ್ವಶ್ಛಾತ್ರಾಣಾಮ್ ॥**

ಪೂರ್ವಾಪರಾಧರೋತ್ತರಂ, ಏಕದೇಶಿನಾ, ಏಕಾಧಿಕರಣೇ ॥ ತ್ರಿಪದ ಸೂತ್ರ. ಪೂರ್ವಶ್ಚ, ಅಪರಶ್ಚ, ಅಧರಶ್ಚ, ಉತ್ತರಶ್ಚ ತೇಷಾಂ ಸಮಾಹಾರಃ ಪೂರ್ವಾಪರಾಧರೋತ್ತರಂ. ಏಕದೇಶವೆಂದರೆ ಅವಯವ. ಅದು ಉಳ್ಳದ್ದು. ಏಕದೇಶಃ ಅಸ್ಯ ಅಸ್ತಿ ಇತಿ ಏಕದೇಶೀ. ಅವಯವಿಯೆಂದರ್ಥ. ಅಧಿಕರಣವೆಂದರೆ ದ್ರವ್ಯ. ಏಕತ್ವಸಂಖ್ಯಾವಿಶಿಷ್ಟದ್ರವ್ಯ ಎಂದರ್ಥ. **ಸೂತ್ರಾರ್ಥ**—ಏಕತ್ವಸಂಖ್ಯಾವಿಶಿಷ್ಟದ್ರವ್ಯವನ್ನು ಹೇಳುವ ಅವಯವಿವಾಚಕ ಸುಬಂತದೊಡನೆ ಪೂರ್ವ, ಅಪರ, ಅಧರ, ಉತ್ತರರೂಪ ಸುಬಂತ

ಗಳು ಸಮಾಸಹೊಂದಿ ತತ್ಪುರುಷಗಳಾಗುತ್ತವೆ. ಷಷ್ಠೀಸಮಾಸಕ್ಕೆ ಇದು ಅಪವಾದ. ಈ ಸೂತ್ರ ಹೇಳದಿದ್ದರೆ ಷಷ್ಠೀಸಮಾಸ ಬರುತ್ತಿತ್ತು. ಆಗ ಷಷ್ಠೀ ಎಂದು ಪ್ರಥಮಾಂತ ನಿರ್ದಿಷ್ಟವಾದುದರಿಂದ ಉಪಸರ್ಜನಸಂಜ್ಞಾ ಬಂದು ಅವಯುವಿವಾಚಕಕ್ಕೆ ಪೂರ್ವ ನಿಪಾತ ಬಂದು ಕಾಯಪೂರ್ವ ಎಂದಾಗಬೇಕಾಗುತ್ತದೆ. ಅದು ಇಷ್ಟವಲ್ಲ. ಆದುದ ರಿಂದ ಅವಯುವವಾಚಕಕ್ಕೆ ಪೂರ್ವನಿಪಾತ ಬರಲು ಈ ಸೂತ್ರ ಆರಬ್ಧವಾಗಿದೆ. ಉದಾ.—ಪೂರ್ವಂ+ಕಾಯಸ್ಯ. (ಪೂರ್ವ+ಸು+ಕಾಯ+ಜಸ್). ಕಾಯ ಅವಯುವೀ. ಪೂರ್ವಕಾಯಃ (ಶರೀರದ ಪೂರ್ವಭಾಗ). ಅಪರಂ ಕಾಯಸ್ಯ ಅಪರ ಕಾಯಃ। ಏಕಾಧಿಕರಣೇ ಕಿಮ್? ಸೂತ್ರದಲ್ಲಿ ಏಕತ್ವಸಂಖ್ಯಾವಿಶಿಷ್ಟವಾದ ಅವಯುವಿ ಯೆಂದುದೇಕೆ? ಪೂರ್ವಃ ಛಾತ್ರಾಣಾಮ್। ಇಲ್ಲಿ ಸಮಾಸ ಬರುವುದಿಲ್ಲ. ಶಿಷ್ಯ ಸಮುದಾಯದ ಪೂರ್ವಭಾಗವೆಂದರ್ಥ. ಪೂರ್ವಭಾಗದಲ್ಲಿ ಅನೇಕರಿರುವುದರಿಂದ ಏಕತ್ವಸಂಖ್ಯಾ ತೋರುವುದಿಲ್ಲ.

ಅರ್ಧ ಶಬ್ದಕ್ಕೆ ಸಮಾಸ ಹೇಳುವ ಸೂತ್ರ

**೯೩೬. ಅರ್ಧಂ ನಪುಂಸಕಮ್ ॥ ೨-೨-೨ ॥**

**ಸಮಾಂಶವಾಚ್ಯರ್ಧಶಬ್ದೋ ನಿತ್ಯಂ ಕ್ಲೀಬೇ, ಸ ಪ್ರಾಗ್ವತ್। ಅರ್ಧಂ ಪಿಪ್ಪಲ್ಯಾಃ ಅರ್ಧಪಿಪ್ಪಲೀ ॥**

ದ್ವಿಪದ ಸೂತ್ರ. ಅರ್ಧಂ ಎಂದು ಸೂತ್ರದಲ್ಲಿ ನಪುಂಸಕವಾಗಿ ನಿರ್ದೇಶ ಮಾಡಿರುವುದರಿಂದಲೇ ನಪುಂಸಕ ಶಬ್ದವೆಂದು ತಿಳಿಯುವಾಗ ನಪುಂಸಕಮ್ ಎಂದುದ ರಿಂದ ನಿತ್ಯನಪುಂಸಕವೆಂದು ಲಬ್ಧವಾಗುತ್ತದೆ. ಅದನ್ನೇ ವೃತ್ತಿಯಲ್ಲಿ ಹೇಳಿರುತ್ತಾನೆ. ಸಮವಾದ ಭಾಗವನ್ನು ಹೇಳುವ ಅರ್ಧ ಶಬ್ದವು ನಿತ್ಯವಾಗಿ ನಪುಂಸಕವಾಚಿಯಾಗಿರು ತ್ತದೆ. **ಸೂತ್ರಾರ್ಥ**—ಸಮ ಅಂದರೆ ಅರ್ಧಭಾಗ ಹೇಳುವ ನಿತ್ಯನಪುಂಸಕವಾದ ಅರ್ಧರೂಪ ಸುಬಂತವು ಅವಯುವಿವಾಚಕ ಸುಬಂತದೊಡನೆ ಸಮಾಸವಾಗಿ ತತ್ಪುರುಷ ಸಂಜ್ಞೆ ಹೊಂದುತ್ತದೆ. ಉದಾ.—ಅರ್ಧಂ ಪಿಪ್ಪಲ್ಯಾಃ (ಅರ್ಧ+ಸು+ಪಿಪ್ಪಲೀ+ ಜಸ್) ಪಿಪ್ಪಲೀ ಅವಯುವವುಳ್ಳ ಅವಯುವೀ. ಅರ್ಧಪಿಪ್ಪಲೀ. ಪಿಪ್ಪಲೀ ಉಪ ಸರ್ಜನವಾಗದಿರುವುದರಿಂದ 'ಗೋಸ್ತ್ರಿಯೋರುಪಸರ್ಜನಸ್ಯ' ಸೂತ್ರದಿಂದ ಹ್ರಸ್ವ ಬರುವುದಿಲ್ಲ.

ಸಪ್ತಮೀತತ್ಪುರುಷವಿಧಾಯಕ ಸೂತ್ರ.

**೯೩೭. ಸಪ್ತಮೀ ಶೌಂಡೈಃ ॥ ೨-೧-೪ ॥**

**ಸಪ್ತಮ್ಯಂತಂ ಶೌಂಡಾದಿಭಿಃ ಪ್ರಾಗ್ವತ್। ಅಕ್ಷೇಷು ಶೌಂಡಃ ಅಕ್ಷ ಶೌಂಡ ಇತ್ಯಾದಿ। ದ್ವಿತೀಯಾತೃತೀಯೇತ್ಯಾದಿಯೋಗವಿಭಾಗಾದನ್ಯತ್ರಾಪಿ ತೃತೀಯಾದಿವಿಭಕ್ತೀನಾಂ ಪ್ರಯೋಗವಶಾತ್ಸಮಾಸೋ ಜ್ಞೇಯಃ ॥**

ದ್ವಿಪದ ಸೂತ್ರ. ಶೌಂಡೈಃ ಬಹುವಚನ ನಿರ್ದೇಶದಿಂದ ಶೌಂಡ ಮುಂತಾದವುಗಳು ಎಂದರ್ಥವಾಗುತ್ತದೆ. **ಸೂತ್ರಾರ್ಥ**—ಸಪ್ತಮ್ಯಂತ ಸುಬಂತವು ಶೌಂಡಾದಿ ಪ್ರಕೃತಿಕ ಸುಬಂತಗಳೊಡನೆ ಸಮಾಸವಾಗಿ ತತ್ಪುರುಷಸಂಜ್ಞೆಯನ್ನು ಹೊಂದುತ್ತದೆ. **ಉದಾ.**—ಅಕ್ಷೇಷು ಶೌಂಡಃ ಅಕ್ಷಶೌಂಡಃ (ಅಕ್ಷ+ಸುಪ್+ಶೌಂಡ+ಸು)=ಪಗಡೆಯಲ್ಲಿ ನಿಪುಣ. ಶೌಂಡಾದಿಗಳಲ್ಲಿ ಶೌಂಡ, ಧೂರ್ತ, ಕಿತವ, ವ್ಯಾಡ, ಪ್ರವೀಣ, ಸಂವೀತ, ಅಂತರ, ಅಧಿ, ಪಟು, ಪಂಡಿತ, ಕುಶಲ, ಚಪಲ, ನಿಪುಣ ಪದಗಳು ಸೇರಿವೆ. ಹೀಗೆ ದ್ವಿತೀಯಾಂತದಿಂದ ಸಪ್ತಮ್ಯಂತದವರೆಗೆ ತತ್ಪುರುಷ ಸಮಾಸ ಹೇಳಿದೆ. ದ್ವಿತೀಯಾಂತವು ಶ್ರಿತಾದಿಶಬ್ದಗಳೊಡನೆ ಸಮಾಸಹೊಂದುವುದಲ್ಲದೆ ಇತರ ಸುಬಂತಗಳೊಡನೆಯೂ ಸಮಾಸವಾಗಿರುವುದು ಲೋಕದಲ್ಲಿ ದೃಷ್ಟವಾಗಿದೆ. ಅದಕ್ಕೆ ಅನುಶಾಸನ ಯಾವುದು ? ಅದಕ್ಕೋಸ್ಕರ 'ದ್ವಿತೀಯಾ—' ಎಂಬ ವಾಕ್ಯದಿಂದ ಸಮಾಧಾನ ಹೇಳುತ್ತಾನೆ. 'ದ್ವಿತೀಯಾ ಶ್ರಿತಾತೀತ—' ಸೂತ್ರದಲ್ಲಿ ದ್ವಿತೀಯಾ ಎಂದು ಯೋಗವಿಭಾಗ ಮಾಡಿಕೊಳ್ಳಬೇಕು. ಸೂತ್ರವನ್ನು ಎರಡು ವಿಭಾಗಮಾಡಿಕೊಳ್ಳಬೇಕು. 'ದ್ವಿತೀಯಾ—' ಮೊದಲನೇ ಸೂತ್ರ. ದ್ವಿತೀಯಾಂತ ಸುಬಂತವು ಸುಬಂತಗಳೊಡನೆ ಸಮಾಸಹೊಂದುತ್ತದೆ. ಆಗ ಶ್ರಿತಾದಿ ಭಿನ್ನಸುಬಂತಗಳೊಡನೆ ಸಮಾಸ ಸಿದ್ಧವಾಗುತ್ತದೆ. ಆಮೇಲೆ ಎರಡನೇ ಸೂತ್ರ. 'ಶ್ರಿತಾತೀ.....ನ್ನೈಃ' ದ್ವಿತೀಯಾ ಅನುವೃತ್ತಿ. ದ್ವಿತೀಯಾಂತವು ಶ್ರಿತಾದಿಸುಬಂತಗಳೊಡನೆ ಸಮಾಸ ಹೊಂದುತ್ತದೆ. ಮೊದಲಿನ ಸೂತ್ರವಿವರಣೆಗೋಸ್ಕರ ಈ ಸೂತ್ರವೆಂದು ತಿಳಿಯಬೇಕು. ಹೀಗೆಯೇ ತೃತೀಯಾದಿ ಸ್ಥಲದಲ್ಲಿಯೂ ಯೋಗವಿಭಾಗ ಮಾಡಿಕೊಂಡು ಅರ್ಥ ಹೇಳಬೇಕು. ಆಗ ಇತರ ಸುಬಂತಗಳೊಡನೆಯೂ ಸಮಾಸ ಸಿದ್ಧವಾಗುತ್ತದೆ. ಪ್ರಯೋಗದಿಂದ ಈ ಸಮಾಸಗಳನ್ನು ತಿಳಿಯಬೇಕು.

ದಿಕ್‌ಸಂಖ್ಯಾ ಶಬ್ದಗಳಿಗೆ ಸಮಾಸ ನಿಯಮ ಮಾಡುವ ಸೂತ್ರ.

**೯೩೮. ದಿಕ್‌ಸಂಖ್ಯೇ ಸಂಜ್ಞಾಯಾಮ್ ॥ ೨-೧-೫೦ ॥**

**ಸಂಜ್ಞಾಯಾಮೇವೇತಿ ನಿಯಮಾರ್ಥಂ ಸೂತ್ರಮ್ । ಪೂರ್ವೇಷು ಕಾಮಶಮೀ । ಸಪ್ತರ್ಷಯಃ ॥ ತೇನೇಹ ನ—ಉತ್ತರಾ ವೃಕ್ಷಾಃ । ಪಂಚ ಬ್ರಾಹ್ಮಣಾಃ ॥**

ದ್ವಿಪದ ಸೂತ್ರ. 'ಸಮಾನಾಧಿಕರಣೇನ' ಅಧಿಕಾರ. ದಿಗ್ವಾಚಕ, ಸಂಖ್ಯಾವಾಚಕ ಸುಬಂತಗಳು ಸಮಾನಾಧಿಕರಣವಾಚಕ ಸುಬಂತಗಳೊಡನೆ ಸಮಾಸಹೊಂದುತ್ತವೆ. ಸಮಾನಾಧಿಕರಣವೆಂದರೆ ಎರಡು ಶಬ್ದಗಳೂ ಒಂದೇ ಅರ್ಥವನ್ನು ಹೇಳುತ್ತಾ ಒಂದೇ ವಿಭಕ್ತ್ಯಂತವಾಗಿರುವುದು. 'ವಿಶೇಷಣಂ ವಿಶೇಷ್ಯೇಣ ಬಹುಲಮ್' ಸೂತ್ರದಿಂದಲೇ ಈ ಸಮಾಸ ಸಿದ್ಧವಾಗುವಾಗ ಪುನಃ ಇದನ್ನು ಏಕೆ ಹೇಳಬೇಕು ?

ಸಂಜ್ಞಾಯಾಮೇವ ಇತಿ ನಿಯಮಾರ್ಥಮ್. ದಿಗ್ವಾಚಕ ಸಂಖ್ಯಾವಾಚಕ ಶಬ್ದಗಳು ಸಮಾನಾಧಿಕರಣ ಸುಬಂತಗಳೊಡನೆ ಸಮಾಸಹೊಂದುವುದಾದರೆ ಸಂಜ್ಞಾ ತೋರು ವಾಗ ಮಾತ್ರ. ಇತರ ಸ್ಥಲದಲ್ಲಿ ಸಮಾಸಹೊಂದುವುದಿಲ್ಲ ಎಂದು ನಿಯಮ ತಿಳಿಸಲು ಪುನಃ ಆರಬ್ಧವಾಗಿದೆ. ಪೂರ್ವಾಚ ಸಾ ಇಷುಕಾಮಶಮೀ ಚ ಪೂರ್ವೇಷುಕಾಮ ಶಮೀ. ಇಷುಕಾಮಶಮೀಯೆಂಬುದು ಗ್ರಾಮವಿಶೇಷ. ಸಪ್ತ ಚ ತೇ ಋಷಯಶ್ಚ (ಸಪ್ತ+ಜಸ್+ಋಷಿ+ಜಸ್)=ಸಪ್ತರ್ಷಯಃ। ಏಳು ಋಷಿಗಳಿಗೆ ಒಂದು ಸಂಜ್ಞೆ. ಸಂಜ್ಞೆ ತೋರದಿದ್ದರೆ ಸಮಾಸ ಬರುವುದಿಲ್ಲ. ಉತ್ತರಾಃ+ವೃಕ್ಷಾಃ= ಉತ್ತರದಲ್ಲಿರುವ ಮರಗಳು. ಉತ್ತರ ದೇಶವಾಚಕವಾದರೂ ಸಂಜ್ಞೆ ತೋರದಿರುವುದ ರಿಂದ ಸಮಾಸವಾಗುವುದಿಲ್ಲ. ಪಂಚ+ಬ್ರಾಹ್ಮಣಾಃ= ಐದು ಜನ ಬ್ರಾಹ್ಮಣರು.

ತದ್ಧಿತಾರ್ಥಾದಿಗಳಲ್ಲಿ ಸಮಾಸ ಹೇಳುವ ಸೂತ್ರ.

**೯೩೯. ತದ್ಧಿತಾರ್ಥೋತ್ತರಪದಸಮಾಹಾರೇ ಚ ॥ ೨-೧-೫೧ ॥**

**ತದ್ಧಿತಾರ್ಥೇ ವಿಷಯೇ ಉತ್ತರಪದೇ ಚ ಪರತಃ ಸಮಾಹಾರೇ ಚ ವಾಚ್ಯೇ ದಿಕ್‌ಸಂಖ್ಯೇ ಪ್ರಾಗ್ವತ್। ಪೂರ್ವಸ್ಯಾಂ ಶಾಲಾಯಾಂ ಭವಃ —ಪೂರ್ವಾಶಾಲಾ ಇತಿ ಸಮಾಸೇ ಜಾತೇ ॥**

**ವಾ ॥ (ಸರ್ವನಾಮ್ನೋ ವೃತ್ತಿಮಾತ್ರೇ ಪುಂವದ್ಭಾವಃ)**

ದ್ವಿಪದ ಸೂತ್ರ. ಹಿಂದಿನ ಸೂತ್ರದಿಂದ 'ದಿಕ್‌ಸಂಖ್ಯೇ' ಅನುವೃತ್ತಿ. ತದ್ಧಿತಾರ್ಥಶ್ಚ, ಉತ್ತರಪದಂ ಚ, ಸಮಾಹಾರಶ್ಚ ತೇಷಾಂ ಸಮಾಹಾರಃ। ತಸ್ಮಿನ್. ತದ್ಧಿತಾರ್ಥೇ, ಉತ್ತರಪದೇ, ಸಮಾಹಾರೇ ಎಂದು ಪ್ರತ್ಯೇಕ ಸಪ್ತಮ್ಯಂತ ಮಾಡಿ ದಾಗ ಪ್ರತಿಸಪ್ತಮಿಗೂ ಭಿನ್ನಭಿನ್ನಾರ್ಥ ಹೇಳಬೇಕು. ತದ್ಧಿತಾರ್ಥ ವಿಷಯದಲ್ಲಿ (ತದ್ಧಿತಪ್ರತ್ಯಯ ಮುಂದೆ ಮಾಡಬೇಕೆಂದಿರುವಾಗ) ಉತ್ತರಪದ ಪರದಲ್ಲಿರುವಾಗ, ಸಮಾಹಾರವಾಚ್ಯವಾದಾಗ ಎಂದರ್ಥ. **ಸೂತ್ರಾರ್ಥ** — ತದ್ಧಿತಾರ್ಥವಿಷಯ ದಲ್ಲಿಯೂ, ಉತ್ತರಪದ ಪರವಾದಾಗಲೂ, ಸಮಾಹಾರವಾಚ್ಯವಾಗುವಾಗಲೂ ದಿಗ್ವಾಚಕ ಸಂಖ್ಯಾವಾಚಕ ಶಬ್ದಗಳು ಸಮಾನಾಧಿಕರಣ ಸುಬಂತಗಳೊಡನೆ ಸಮಾಸ ಹೊಂದುತ್ತವೆ. ಅದು ತತ್ಪುರುಷವಾಗುತ್ತದೆ. ತದ್ಧಿತಾರ್ಥ ವಿಷಯದಲ್ಲಿ— ಪೂರ್ವಸ್ಯಾಂ ಶಾಲಾಯಾಂ ಭವಃ। (ಪೂರ್ವಾ+ಙಿ+ಶಾಲಾ+ಙಿ) ಭವಾರ್ಥ ದಲ್ಲಿ ಮುಂದೆ ತದ್ಧಿತವನ್ನು ಹೇಳುತ್ತಾನೆ. ಪೂರ್ವಪದ ದಿಗ್ವಾಚಕವಾಗಿದೆ. ಸುಬ್ ಲುಕ್ಕಾಗಿ ಸಮಾಸವಾದಾಗ ಪೂರ್ವಾಶಾಲಾ ಎಂದಿರುವಾಗ ಪುಂವದ್ಭಾವವನ್ನು ವಾರ್ತಿಕದಿಂದ ಹೇಳುತ್ತಾನೆ. **ವಾರ್ತಿಕಾರ್ಥ**—ಸಮಾಸ ತದ್ಧಿತಾದಿ ವೃತ್ತಿಗಳಲ್ಲಿ ಇರುವ ಸರ್ವನಾಮ ಶಬ್ದಗಳಿಗೆ ಪುಂವದ್ಭಾವ ಬರುತ್ತದೆ. ಪ್ರಕೃತ ಸಮಾಸವೃತ್ತಿ ಯಾದುದರಿಂದ ಪೂರ್ವಾ ಎಂಬ ಸರ್ವನಾಮ ಶಬ್ದಕ್ಕೆ ಪುಂವದ್ಭಾವ ಬಂದರೆ ಪೂರ್ವ

ಶಾಲಾ ಎಂದಾಗುತ್ತದೆ. (ಟಾಪ್ ಹೋಗುತ್ತದೆ). ಈಗ ತದ್ಧಿತಪ್ರತ್ಯಯವನ್ನು ಹೇಳುತ್ತಾನೆ.

ಭವಾರ್ಥದಲ್ಲಿ ಞಪ್ರತ್ಯಯ ಹೇಳುವ ಸೂತ್ರ.

**೯೪೦. ದಿಕ್ಪೂರ್ವಪದಾದಸಂಜ್ಞಾಯಾಂ ಞಃ ॥ ೪-೨-೧೦೭ ॥**

**ಅಸ್ಮಾದ್ಭವಾದ್ಯರ್ಥೇ ಞಃ ಸ್ಯಾದಸಂಜ್ಞಾಯಾಮ್ ॥**

ದಿಕ್ಪೂರ್ವಪದಾತ್, ಅಸಂಜ್ಞಾಯಾಂ, ಞಃ ॥ ತ್ರಿಪದ ಸೂತ್ರ. ಅಸಂಜ್ಞಾಯಾಂ ಎಂಬಲ್ಲಿ ಪಂಚಮ್ಯರ್ಥದಲ್ಲಿ ಸಪ್ತಮೀ ಬಂದಿದೆ. **ಸೂತ್ರಾರ್ಥ**— ಸಂಜ್ಞಾ ಹೇಳದಿರುವ ದಿಗ್ವಾಚಕ ಶಬ್ದವೇ ಪೂರ್ವಪದವಾಗಿರುವ ಪ್ರಾತಿಪದಿಕದ ಮೇಲೆ ಭವಾರ್ಥದಲ್ಲಿ (ಇರುವುದು ಅಥವಾ ಹುಟ್ಟಿದ್ದು) ಞಪ್ರತ್ಯಯ ಬರುತ್ತದೆ. ಇಲ್ಲಿ ಪೂರ್ವಶಾಲೆಯಲ್ಲಿ ಹುಟ್ಟಿರುವುದು ಎಂದರ್ಥ ಮಾಡಿರುವುದರಿಂದ ಭವಾರ್ಥ ತೋರುತ್ತದೆ. ದಿಗ್ವಾಚಕ ಪೂರ್ವಶಬ್ದವು ಪೂರ್ವಪದವಾಗಿದೆ. ಸಂಜ್ಞಾ ತೋರುವುದಿಲ್ಲ. ಆದುದರಿಂದ ಞ ಬಂದರೆ ಪೂರ್ವಶಾಲಾ+ಞ ಎಂದಿರುವಾಗ 'ಚುಟೂ' ಸೂತ್ರದಿಂದ ಪ್ರತ್ಯಯದ ಆದಿ ಞಕಾರ ಇತ್ತಾಗಿ ಲೋಪವಾಗುತ್ತದೆ. ಪೂರ್ವಶಾಲಾ+ಅ. ಈಗ ಆದಿಯ ಅಚಿಗೆ ವೃದ್ಧಿ ಹೇಳುತ್ತಾನೆ.

ತದ್ಧಿತದಲ್ಲಿ ಆದ್ಯಚಿಗೆ ವೃದ್ಧಿ ಹೇಳುವ ಸೂತ್ರ.

**೯೪೧. ತದ್ಧಿತೇಷ್ವಚಾಮಾದೇಃ ॥ ೭-೨-೧೧೭ ॥**

**ಞಿತಿ ಣಿತಿ ಚ ತದ್ಧಿತೇಷ್ವಚಾಮಾದೇರಚೋ ವೃದ್ಧಿಃ ಸ್ಯಾತ್ । ಯಸ್ಯೇತಿ ಚ । ಪೌರ್ವಶಾಲಃ । ಪಂಚ ಗಾವೋ ಧನಂ ಯಸ್ಯೇತಿ ತ್ರಿಪದೇ ಬಹುವ್ರೀಹೌ ॥**

**ವಾ ॥ (ದ್ವಂದ್ವತತ್ಪುರುಷಯೋರುತ್ತರಪದೇ ನಿತ್ಯಸಮಾಸವಚನಮ್)**

ತದ್ಧಿತೇಷು, ಅಚಾಂ, ಆದೇಃ ॥ ತ್ರಿಪದ ಸೂತ್ರ. 'ಅಚೋಞ್ಣಿತಿ' ಸೂತ್ರವು ಅನುವೃತ್ತವಾಗುತ್ತದೆ. ಅಚಾಂ ನಿರ್ಧಾರಣಷಷ್ಠೀ. **ಸೂತ್ರಾರ್ಥ**—ಞಿತ್, ಣಿತ್ ಆದ ತದ್ಧಿತಪ್ರತ್ಯಯಗಳು ಪರದಲ್ಲಿರುವಾಗ ಅಚ್‌ಗಳ ಮಧ್ಯದಲ್ಲಿ ಯಾವ ಮೊದಲನೆಯ ಅಚ್ ಇದೆಯೋ ಅದಕ್ಕೆ ವೃದ್ಧಿ ಬರುತ್ತದೆ. ಇಲ್ಲಿ ಞಿತ್ತಾದ ತದ್ಧಿತಪ್ರತ್ಯಯ ಞ. ಇದು ಪರವಾದುದರಿಂದ ಪೂರ್ವಶಾಲಾ ಎಂಬಲ್ಲಿ ಆದಿ ಅಚ್ ಊಕಾರಕ್ಕೆ ವೃದ್ಧಿ (ಔ). ಪೌರ್ವಶಾಲಾ+ಅ. 'ಯಸ್ಯೇತಿ ಚ' (ಸೂ. ೨೩೭) ಸೂತ್ರದಿಂದ ತದ್ಧಿತಪರವಾದುದರಿಂದ ಪೂರ್ವದ ಆಕಾರಕ್ಕೆ ಲೋಪ. ಪೌರ್ವಶಾಲಃ ಎಂದಾಗುತ್ತದೆ. ಉತ್ತರಪದ ಪರವಾದಾಗ ಉದಾ.—ಪಂಚ ಗಾವೋ ಧನಂ ಯಸ್ಯ. ಇದು ತ್ರಿಪದ ಬಹುವ್ರೀಹಿ. ಇಲ್ಲಿ ಧನ ಎಂಬ ಉತ್ತರಪದ ಪರದಲ್ಲಿರುವಾಗ ಪಂಚ+ಗಾವ

ಎಂಬುದಕ್ಕೆ ತತ್ಪುರುಷ ಸಮಾಸ, ಇಲ್ಲಿ ವಾಕ್ಯ ಇರಬಾರದೆಂದು ವಾರ್ತಿಕಕಾರರು ನಿತ್ಯಸಮಾಸ ಹೇಳುತ್ತಾರೆ. **ವಾರ್ತಿಕಾರ್ಥ**—ದ್ವಂದ್ವ-ತತ್ಪುರುಷ ಸಮಾಸಗಳಲ್ಲಿ ಉತ್ತರಪದ ಪರದಲ್ಲಿರುವಾಗ ಯಾವಾಗಲೂ ನಿತ್ಯಸಮಾಸ ಹೇಳಬೇಕು. ಹೀಗೆ ನಿತ್ಯಸಮಾಸ ಬಂದಮೇಲೆ ಗೋ ಶಬ್ದಾಂತಕ್ಕೆ ಸಮಾಸಾಂತಪ್ರತ್ಯಯ ಹೇಳುತ್ತಾನೆ.

ಗೋಶಬ್ದಾಂತತತ್ಪುರುಷಕ್ಕೆ ಟಚ್ ಹೇಳುವ ಸೂತ್ರ.

**೯೪೨. ಗೋರತದ್ಧಿತಲುಕಿ ॥ ೫-೪-೯೨ ॥**

**ಗೋಽನ್ತಾತ್ತತ್ಪುರುಷಾಟ್ಟಚ್ ಸ್ಯಾತ್ ಸಮಾಸಾಂತಃ ನ ತು ತದ್ಧಿತ ಲುಕಿ । ಪಂಚಗವಧನಃ ॥**

ಗೋಃ, ಅತದ್ಧಿತಲುಕಿ ॥ ದ್ವಿಪದ ಸೂತ್ರ. 'ತತ್ಪುರುಷಸ್ಯಾಂಗುಲೇಃ—' ಸೂತ್ರದಿಂದ ಅನುವೃತ್ತವಾದ ತತ್ಪುರುಷಸ್ಯ ಪದವು ಪಂಚಮ್ಯಂತವಾಗಿ ವಿಪರಿಣತ ವಾಗುತ್ತದೆ. ಗೋಃ ಅದಕ್ಕೆ ವಿಶೇಷಣವಾದುದರಿಂದ ತದಂತಲಾಭ. 'ಸಮಾಸಾಂತಾಃ' ಅಧಿಕಾರ. **ಸೂತ್ರಾರ್ಥ**—ಗೋ ಶಬ್ದಾಂತವಾದ ತತ್ಪುರುಷಕ್ಕೆ ಟಚ್ ಸಮಾಸಾಂತವಾಗಿ ಬರುತ್ತದೆ; ತದ್ಧಿತಲುಕ್ ಆದಾಗ ಈ ಟಚ್ ಬರುವುದಿಲ್ಲ. ಪ್ರಕೃತ ಪಂಚಗೋ ಎಂದು ತತ್ಪುರುಷಸಮಾಸವಾಗಿದೆ. ಪಂಚನ್ + ಜಸ್ + ಗೋ + ಜಸ್ + ಧನ + ಸು. ಅಲೌಕಿಕ ವಿಗ್ರಹವಾಕ್ಯ. ಇಲ್ಲಿ ಮೊದಲು ಬಹುವ್ರೀಹಿ ಸಮಾಸ. ಆಮೇಲೆ ಉತ್ತರಪದಪರಕ ತತ್ಪುರುಷಸಮಾಸ. ಸುಪ್‌ಲುಕ್ ಆದಾಗ ಪಂಚ ಗೋ ಧನ ಎಂದಿರುವಾಗ ಟಚ್. ಟಚಿನಲ್ಲಿ ಅ ಉಳಿಯುತ್ತದೆ. ಪಂಚಗೋ + ಅ + ಧನ. 'ಏಚೋಽಯವಾಯಾವಃ' ಪಂಚಗವಧನ. ಇದರ ಮೇಲೆ ಸುಬಾದಿ. ಪಂಚಗವಧನಃ ಎಂದಾಗುತ್ತದೆ. ಪಂಚನ್ ಎಂಬಲ್ಲಿ ಲುಪ್ತವಾದ ವಿಭಕ್ತಿಯನ್ನಿಟ್ಟು ಕೊಂಡು ಪದಸಂಜ್ಞೆ ಬರುವುದರಿಂದ 'ನಲೋಪಃ ಪ್ರಾತಿಪದಿಕಾಂತಸ್ಯ' ಸೂತ್ರದಿಂದ ನಲೋಪ ಬಂದಿದೆ. ಸಮಾಹಾರದಲ್ಲಿ ಮುಂದೆ ಉದಾಹರಣೆ ಹೇಳುತ್ತಾನೆ.

[ಕರ್ಮಧಾರಯಸಂಜ್ಞಾವಿಧಾಯಕ ಸೂತ್ರ.

**೯೪೩. ತತ್ಪುರುಷಃ ಸಮಾನಾಧಿಕರಣಃ ಕರ್ಮಧಾರಯಃ ॥ ೧-೨-೪೨ ॥**

ತ್ರಿಪದ ಸೂತ್ರ. ಸುಲಭವಾದ ಅರ್ಥ ತೋರುವುದರಿಂದ ವೃತ್ತಿ ಬರೆಯಲಿಲ್ಲ. ಸಮಾನಾಧಿಕರಣವಾದ ಅನೇಕ ಪದ ಅವಯವವುಳ್ಳ ತತ್ಪುರುಷವು ಕರ್ಮಧಾರಯ ಸಂಜ್ಞೆಯನ್ನು ಹೊಂದುತ್ತದೆ. ಸಮಾನಂ ಏಕಂ ಅಧಿಕರಣಂ ವಾಚ್ಯಂ ಯಯೋಃ ತೇ ಸಮಾನಾಧಿಕರಣೇ (ಪದೇ). ತೇ ಅಸ್ಯ ಸ್ತಃ ಇತಿ ಸಮಾನಾಧಿಕರಣಃ । ಎರಡು ಪದಗಳಿಗೂ ವಾಚ್ಯಾರ್ಥ ಒಂದೇ ಆಗಿರುವುದು. ಅವು ಸಮಾನಾಧಿಕರಣಗಳು. ನೀಲಃ ಘಟಃ । ಇಲ್ಲಿ ನೀಲವೂ ಘಟವೂ ಒಂದೇ ಅರ್ಥವನ್ನು ಹೇಳುತ್ತಾ ಒಂದೇ

ವಿಭಕ್ತ್ಯಂತವಾಗಿದೆ. ಇವು ಸಮಾನಾಧಿಕರಣಗಳು. ಇವುಗಳಿಗೆ ಸಮಾಸ ಬಂದಾಗ ಅದು ಕರ್ಮಧಾರಯಸಂಜ್ಞೆಯನ್ನು ಹೊಂದುತ್ತದೆ.

ದ್ವಿಗುಸಂಜ್ಞಾವಿಧಾಯಕ ಸೂತ್ರ.

**೯೪೪. ಸಂಖ್ಯಾಪೂರ್ವೋ ದ್ವಿಗುಃ ॥ ೨-೧-೫೨ ॥**

**ತದ್ಧಿತಾರ್ಥೇತ್ಯತ್ರೋಕ್ತಸ್ತ್ರಿವಿಧಃ ಸಂಖ್ಯಾಪೂರ್ವೋ ದ್ವಿಗುಸಂಜ್ಞಃ ಸ್ಯಾತ್ ॥**

ಸಂಖ್ಯಾಪೂರ್ವಃ, ದ್ವಿಗುಃ ॥ ದ್ವಿಪದ ಸೂತ್ರ. ಸಂಖ್ಯಾಪೂರ್ವಃ ಎಂಬುದು ಬಹುವ್ರೀಹಿ. ಹಿಂದಿನ ಸೂತ್ರದಲ್ಲಿ ಹೇಳಿದ ಸಮಾಸವೇ ಅನ್ಯಪದಾರ್ಥ. **ಸೂತ್ರಾರ್ಥ**—'ತದ್ಧಿತಾರ್ಥ—' ಸೂತ್ರದಲ್ಲಿ ಹೇಳಿದ ಮೂರು ವಿಧ ಸಮಾಸಗಳಲ್ಲಿ ಸಂಖ್ಯಾವಾಚಕಪದವು ಪೂರ್ವಾವಯವವಾಗಿರುವುದು ಯಾವುದೋ ಅದು ದ್ವಿಗುಸಂಜ್ಞೆಯನ್ನು ಹೊಂದುತ್ತದೆ.

ದ್ವಿಗುವಿಗೆ ಏಕವಚನ ಹೇಳುವ ಸೂತ್ರ.

**೯೪೫. ದ್ವಿಗುರೇಕವಚನಮ್ ॥ ೨-೪-೧ ॥**

**ದ್ವಿಗ್ವರ್ಥಃ ಸಮಾಹಾರಃ ಏಕವತ್ ಸ್ಯಾತ್ ॥**

ದ್ವಿಗುಃ, ಏಕವಚನಮ್ ॥ ದ್ವಿಪದ ಸೂತ್ರ. 'ಸಮಾಹಾರಗ್ರಹಣಂ ಕರ್ತವ್ಯಮ್' ವಾರ್ತಿಕದಿಂದ 'ಸಮಾಹಾರಃ' ಲಬ್ಧವಾಗುತ್ತದೆ. ಏಕವಚನಮ್ ಅಂದರೆ ಏಕಾರ್ಥಪ್ರತಿಪಾದಕ ಎಂದರ್ಥ. **ಸೂತ್ರಾರ್ಥ**—ದ್ವಿಗು ಅರ್ಥವನ್ನು ಕೊಡುವ ಸಮಾಹಾರವು ಏಕತ್ವ ವಿಶಿಷ್ಟಾರ್ಥ ಪ್ರತಿಪಾದಕವಾಗುತ್ತದೆ. ಏಕವಚನವನ್ನು ಹೊಂದುತ್ತದೆ. ಉದಾಹರಣೆ ಮುಂದೆ ತೋರಿಸುತ್ತಾನೆ.

ಸಮಾಹಾರಕ್ಕೆ ನಪುಂಸಕತ್ವವಿಧಾಯಕ ಸೂತ್ರ.

**೯೪೬. ಸ ನಪುಂಸಕಮ್ ॥ ೨-೪-೧೭ ॥**

**ಸಮಾಹಾರೇ ದ್ವಿಗುರ್ದ್ವಂದ್ವಶ್ಚ ನಪುಂಸಕಂ ಸ್ಯಾತ್ । ಪಂಚಾನಾಂ ಗವಾಂ ಸಮಾಹಾರಃ ಪಂಚಗವಮ್ ॥**

ದ್ವಿಪದ ಸೂತ್ರ. 'ದ್ವಿಗುರೇಕವಚನಮ್' ಸೂತ್ರದಿಂದ 'ದ್ವಿಗುಃ', 'ದ್ವಂದ್ವಶ್ಚ ಪ್ರಾಣಿ—' ಸೂತ್ರದಿಂದ 'ದ್ವಂದ್ವಃ' ಪದವೂ ತಚ್ಛಬ್ದದಿಂದ ಪರಾಮೃಷ್ಟವಾಗುತ್ತದೆ. ವ್ಯಾಖ್ಯಾನದಿಂದ ಸಮಾಹಾರವೆಂದು ಲಬ್ಧವಾಗುತ್ತದೆ. **ಸೂತ್ರಾರ್ಥ**—ಸಮಾಹಾರದಲ್ಲಿ ದ್ವಿಗು ಮತ್ತು ದ್ವಂದ್ವ ಸಮಾಸಗಳು ನಪುಂಸಕಲಿಂಗವನ್ನು ಹೊಂದುತ್ತವೆ. 'ತದ್ಧಿತಾರ್ಥೋತ್ತರ—' ಸೂತ್ರದಿಂದ ಸಮಾಹಾರದಲ್ಲಿ ಸಮಾಸ. ಪಂಚಾನಾಂ

ಗವಾಂ ಸಮಾಹಾರಃ ಪಂಚಗವಮ್. ಸಂಖ್ಯಾಪೂರ್ವವಾದುದರಿಂದ ದ್ವಿಗುಸಂಜ್ಞೆಯನ್ನು ಹೊಂದುತ್ತದೆ. ದಿಗ್ವರ್ಥ ಸಮಾಹಾರವಾದುದರಿಂದ ಏಕವಚನವೂ ನಪುಂಸಕ ಲಿಂಗವೂ ಬರುತ್ತದೆ. ಪಂಚಗೋ ಎಂದಿರುವಾಗ 'ಗೋರತದ್ಧಿತಲುಕಿ' ಸೂತ್ರದಿಂದ ಟಚ್ ಸಮಾಸಾಂತಪ್ರತ್ಯಯ ಬಂದು ಅವಾದೇಶದಿಂದ ಪಂಚಗವಮ್ ಎಂದಾಗಿದೆ.

ವಿಶೇಷಣಸಮಾಸ ಹೇಳುವ ಸೂತ್ರ.

**೯೪೭. ವಿಶೇಷಣಂ ವಿಶೇಷ್ಯೇಣ ಬಹುಲಮ್ ॥ ೨-೧-೫೭ ॥**

**ಭೇದಕಂ ಭೇದ್ಯೇನ ಸಮಾನಾಧಿಕರಣೇನ ಬಹುಲಂ ಪ್ರಾಗ್ವತ್। ನೀಲಂ ಉತ್ಪಲಂ ನೀಲೋತ್ಪಲಮ್। ಬಹುಲಗ್ರಹಣಾತ್ ಕ್ವಚಿತ್ ನಿತ್ಯಮ್—ಕೃಷ್ಣಸರ್ಪಃ ॥ ಕ್ವಚಿನ್ನ—ರಾಮೋ ಜಾಮದಗ್ನ್ಯಃ ॥**

ತ್ರಿಪದ ಸೂತ್ರ. **ಸೂತ್ರಾರ್ಥ**—ವಿಶೇಷಣವಾಚಕ ಸುಬಂತವು ವಿಶೇಷ್ಯ ವಾಚಕ ಸುಬಂತದೊಡನೆ ಬಹುಲವಾಗಿ ಸಮಾಸಹೊಂದುತ್ತದೆ. ಸಮಾನಾಧಿಕರಣ ವಾಗುವುದರಿಂದ ಕರ್ಮಧಾರಯ ಸಂಜ್ಞೆ ಹೊಂದುತ್ತದೆ. ವಿಶೇಷಣವು ಭೇದಕ ವಾಗಿದೆ. ಭೇದ್ಯ ವಿಶೇಷ್ಯ. ಹೂ ಎಂದರೆ ಸಾಮಾನ್ಯ ಎಲ್ಲಾ ಬಣ್ಣದವುಗಳೂ ಆಗ ಬಹುದು. ನೀಲವೆಂದರೆ ಇತರ ಬಣ್ಣದವುಗಳನ್ನು ವ್ಯಾವೃತ್ತಿಪಡಿಸಿದಂತಾಗುತ್ತದೆ. ನೀಲ ವಿಶೇಷಣ. ಇದು ಇತರ ವ್ಯಾವರ್ತಕವಾಗುತ್ತದೆ. ವ್ಯಾವರ್ತ್ಯವಾದುದು ವಿಶೇಷ. ತನ್ನ ಅರ್ಥಕ್ಕೇ ಪ್ರಾಧಾನ್ಯ ಇರುವುದರಿಂದ ಇದು ಪ್ರಧಾನ. ತನ್ನ ಅರ್ಥವನ್ನು ಇನ್ನೊಂದಕ್ಕೆ ಸಮರ್ಪಿಸುವುದರಿಂದ ವಿಶೇಷಣ, ಅಪ್ರಧಾನ. ಬಹುಲಂ ಎಂದುದರಿಂದ ಕೆಲವು ಕಡೆ ನಿತ್ಯವೆಂದೂ, ಕೆಲವು ಕಡೆ ಅನಿತ್ಯವೆಂದೂ, ಕೆಲವು ಕಡೆ ನಿಯಮವನ್ನು ಅತಿಕ್ರಮಿಸಿ ಕಾರ್ಯವಾಗುತ್ತದೆಂದೂ ತಿಳಿಯಬೇಕು. ಉದಾ.— ನೀಲಂ ಚ ತತ್ ಉತ್ಪಲಂ ಚ (ನೀಲ + ಸು + ಉತ್ಪಲ + ಸು) = ಕನ್ನೈದಿಲೆ. ನೀಲೋತ್ಪಲಮ್. ಇಲ್ಲಿ ನೀಲಂ ಉತ್ಪಲಮ್ ಎಂದು ವ್ಯಸ್ತವಾಗಿಯೂ, ನೀಲೋತ್ಪಲಮ್ ಎಂದು ಸಮಸ್ತವಾಗಿಯೂ ಹೇಳಬಹುದು. ಕೆಲವು ಕಡೆ ನಿತ್ಯಸಮಾಸ. ಕೃಷ್ಣಸರ್ಪಃ। ಇಲ್ಲಿ ಕೃಷ್ಣಃ ಸರ್ಪಃ ಎಂದು ವಾಕ್ಯರೂಪವಾಗಿ ಪ್ರಯೋಗವಿಲ್ಲ. ಕೆಲವು ಕಡೆ ಸಮಾಸ ಬರುವುದೇ ಇಲ್ಲ. ರಾಮಃ ಜಾಮದಗ್ನ್ಯಃ। ಇಲ್ಲಿ ಸಮಸ್ತ ಪ್ರಯೋಗವಿಲ್ಲ. ಹೀಗೆ ಪ್ರಯೋಗವನ್ನನುಸರಿಸಿ ತಿಳಿಯಬೇಕು.

ಉಪಮಾನವಾಚಕಗಳಿಗೆ ಸಮಾಸ ಹೇಳುವ ಸೂತ್ರ.

**೯೪೮. ಉಪಮಾನಾನಿ ಸಾಮಾನ್ಯವಚನೈಃ ॥ ೨-೧-೫೫ ॥**

**ಘನ ಇವ ಶ್ಯಾಮೋ ಘನಶ್ಯಾಮಃ।**

**ವಾ ॥ (ಶಾಕಪಾರ್ಥಿವಾದೀನಾಂ ಸಿದ್ಧಯೇ ಉತ್ತರಪದಲೋಪ-**

**ಸ್ಯೋಪಸಂಖ್ಯಾನಮ್) ಶಾಕಪ್ರಿಯಃ ಪಾರ್ಥಿವಃ ಶಾಕಪಾರ್ಥಿವಃ। ದೇವಪೂಜಕೋ ಬ್ರಾಹ್ಮಣೋ ದೇವಬ್ರಾಹ್ಮಣಃ॥**

ದ್ವಿಪದ ಸೂತ್ರ. **ಸೂತ್ರಾರ್ಥ**— ಉಪಮಾನವಾಚಕ ಶಬ್ದಗಳು ಸಾಧಾರಣ ಧರ್ಮವಾಚಕ ಸಮಾನಾಧಿಕರಣ ಸುಬಂತಗಳೊಡನೆ ಸಮಾಸಹೊಂದುತ್ತವೆ. ಅದು ತತ್ಪುರುಷ. ಸಾದೃಶ್ಯನಿರೂಪಕವಾದುದು ಉಪಮಾನ. ಉಪಮಾನೋಪಮೇಯಗಳ ಸಾಧಾರಣಧರ್ಮವಾಚಕವಾದುದಕ್ಕೆ ಸಾಮಾನ್ಯವೆಂದು ಹೆಸರು. ಘನ ಇವ ಶ್ಯಾಮಃ (ಘನ+ಸು+ಶ್ಯಾಮ+ಸು)=ಘನಶ್ಯಾಮಃ॥ **ವಾರ್ತಿಕಾರ್ಥ**—ಶಾಕಪಾರ್ಥಿವ ಮುಂತಾದ ಶಬ್ದಗಳು ಸಿದ್ಧವಾಗುವುದಕ್ಕೋಸ್ಕರ ಉತ್ತರಪದಲೋಪಕ್ಕೆ ಅಧಿಕವಚನ ಹೇಳಬೇಕು. (ಉಪಸಂಖ್ಯಾನಂ=ಅಧಿಕವಚನ) ಪೂರ್ವಪದದಲ್ಲಿ ಯಾವುದು ಉತ್ತರಪದವೋ ಅದಕ್ಕೆ ಲೋಪ. ಶಾಕಪಾರ್ಥಿವಾದಿ ಗಣವನ್ನು ಪ್ರಯೋಗದಿಂದ ತಿಳಿಯಬೇಕು. ಶಾಕಪ್ರಿಯಃ+ಪಾರ್ಥಿವಃ=ಶಾಕಪಾರ್ಥಿವಃ। ಪೂರ್ವಪದದಲ್ಲಿರುವ ಉತ್ತರಪದ ಪ್ರಿಯ, ಇದಕ್ಕೆ ಲೋಪ ಬಂದಿದೆ. ಶಾಕಃ ಪ್ರಿಯಃ ಯಸ್ಯ ಸಃ ಶಾಕ ಪ್ರಿಯಃ, ಶಾಕಪ್ರಿಯಶ್ಚಾಸೌ ಪಾರ್ಥಿವಶ್ಚ. ಹೀಗೆ ವಿಗ್ರಹವಾಕ್ಯ ಹೇಳಬೇಕು. (ಸಸ್ಯಾಹಾರಪ್ರಿಯನಾದ ರಾಜ.) ದೇವಪೂಜಕಶ್ಚ ಅಸೌ ಬ್ರಾಹ್ಮಣಶ್ಚ ದೇವ ಬ್ರಾಹ್ಮಣಃ। ಪೂರ್ವಪದದಲ್ಲಿರುವ ಉತ್ತರಪದವಾದ ಪೂಜಕವೆಂಬುದಕ್ಕೆ ಲೋಪ ಬಂದಿದೆ.

ನಞ್ ತತ್ಪುರುಷ ಹೇಳುವ ಸೂತ್ರ.

**೯೪೯. ನಞ್ ॥ ೨-೨-೬ ॥**

**ನಞ್ ಸುಪಾ ಸಹ ಸಮಸ್ಯತೇ ॥**

ಏಕಪದ ಸೂತ್ರ. ಇನ್ನುಮುಂದೆ ಸಮಾನಾಧಿಕರಣವಾಗಬೇಕೆಂಬ ನಿಯಮ ವಿಲ್ಲ. ಕರ್ಮಧಾರಯದಲ್ಲಿ ಮಾತ್ರ ಆ ನಿಯಮ. **ಸೂತ್ರಾರ್ಥ**—ನಞ್ ಸುಬಂತವು ಸುಬಂತದೊಡನೆ ಸಮಾಸವಾಗಿ ತತ್ಪುರುಷಸಂಜ್ಞೆ ಹೊಂದುತ್ತದೆ. ಸೂತ್ರದಲ್ಲಿ ವಿಶೇಷ ಶಬ್ದ ಇಲ್ಲವಾದರೆ ಸಾಮಾನ್ಯಪ್ರಾಪ್ತವಾದ 'ಸುಪಾ' ಎಂಬುದಕ್ಕೆ ಮಾತ್ರ ಅನ್ವಯ. ನ+ಬ್ರಾಹ್ಮಣಃ (ನ+ಬ್ರಾಹ್ಮಣ+ಸು)—ಇಲ್ಲಿ ನಞಿನ ನಕಾರಕ್ಕೆ ಲೋಪ ಹೇಳುತ್ತಾನೆ.

ನಞಿನ ನಕಾರಕ್ಕೆ ಲೋಪ ಹೇಳುವ ಸೂತ್ರ.

**೯೫೦. ನಲೋಪೋ ನಞಃ ॥ ೬-೩-೭೩ ॥**

**ನಞೋ ನಸ್ಯ ಲೋಪಃ ಉತ್ತರಪದೇ ॥ ನ ಬ್ರಾಹ್ಮಣಃ ಅಬ್ರಾಹ್ಮಣಃ ॥**

ನ, ಲೋಪಃ, ನಞಃ ॥ ತ್ರಿಪದ ಸೂತ್ರ. ನ ಲುಪ್ತಷಷ್ಠ್ಯೇಕಪದ. 'ಅಲುಗುತ್ತರಪದೇ' ಸೂತ್ರದಿಂದ 'ಉತ್ತರಪದೇ' ಅಧಿಕಾರ. **ಸೂತ್ರಾರ್ಥ**—ನಞಿನ ನಕಾರಕ್ಕೆ ಉತ್ತರಪದ ಪರದಲ್ಲಿರುವಾಗ ಲೋಪಬರುತ್ತದೆ. ಪ್ರಕೃತ ಬ್ರಾಹ್ಮಣರೂಪ ಉತ್ತರಪದ ಪರದಲ್ಲಿರುವುದರಿಂದ ನಞಿನ ನಕಾರಕ್ಕೆ ಲೋಪಬಂದರೆ ಅ ಉಳಿಯುತ್ತದೆ. ಅಬ್ರಾಹ್ಮಣಃ ಎಂದಾಗುತ್ತದೆ.

ನಞಿನ ನಲೋಪವಾದಾಗ ನುಡಾಗಮ ಹೇಳುವ ಸೂತ್ರ.

**೯೫೧. ತಸ್ಮಾನ್ನುಡಚಿ ॥ ೬-೩-೭೪ ॥**

**ಲುಪ್ತನಕಾರಾನ್ನಞಃ ಉತ್ತರಪದಸ್ಯಾಜಾದೇರ್ನುಡಾಗಮಃ ಸ್ಯಾತ್ । ಅನಶ್ವಃ । ನೈಕಧೇತ್ಯಾದೌ ತು ನಶಬ್ದೇನ ಸಹ ಸುಪ್‌ಸುಪೇತಿ ಸಮಾಸಃ ॥**

ತಸ್ಮಾತ್, ನುಟ್, ಅಚಿ ॥ ತ್ರಿಪದ ಸೂತ್ರ. ತಚ್ಛಬ್ದದಿಂದ ಪೂರ್ವಸೂತ್ರದಲ್ಲಿ ಬಂದ ನಕಾರಲೋಪಹೊಂದಿದ ನಞ್ ಪರಾಮೃಷ್ಟವಾಗುತ್ತದೆ. 'ಅಚಿ' ಸಪ್ತಮ್ಯಂತ ವರ್ಣಗ್ರಹಣವು ಉತ್ತರಪದೇ ಎಂಬುದಕ್ಕೆ ವಿಶೇಷಣವಾದುದರಿಂದ ತದಾದಿಲಾಭ. ಪಂಚಮಿಗೆ ಪ್ರಾಧಾನ್ಯವಿರುವುದರಿಂದ ಉತ್ತರಪದೇ ಎಂಬ ಸಪ್ತಮ್ಯಂತವು ಷಷ್ಠ್ಯಂತವಾಗಿ ಪರಿಣತವಾಗುತ್ತದೆ. **ಸೂತ್ರಾರ್ಥ**—ನಕಾರ ಲೋಪಹೊಂದಿದ ನಞಿನ ಪರದಲ್ಲಿರುವ ಅಜಾದಿಯಾದ ಉತ್ತರಪದಕ್ಕೆ ನುಡಾಗಮ ಬರುತ್ತದೆ. ನುಟ್ ಟಿತ್ತಾದುದರಿಂದ ಉತ್ತರಪದದ ಆದಿಗೆ ಬರುತ್ತದೆ. ನ+ಅಶ್ವಃ ಎಂದು ವಿಗ್ರಹವಾಕ್ಯ ಮಾಡಿದಾಗ ಹಿಂದಿನ ಸೂತ್ರದಿಂದ ನಲೋಪ ಬಂದರೆ ಅ+ಅಶ್ವ ಎಂದಿರುವಾಗ ಉತ್ತರಪದವಾದ ಅಶ್ವ ಎಂಬುದರ ಆದಿಗೆ ಬಂದರೆ, ಅ+ನ್ ಅಶ್ವ=ಅನಶ್ವಃ ಎಂದಾಗುತ್ತದೆ.

ನಞ್ ಏಕಧಾ ಶಬ್ದದೊಡನೆ ಸಮಾಸವಾದಾಗ ನ+ಏಕಧಾ ಎಂದಿರುವಾಗ ನಞಿನ ನಕಾರಕ್ಕೆ ಲೋಪ ಬಂದು ಉತ್ತರಪದದ ಆದಿಗೆ ನುಡಾಗಮ ಬಂದರೆ ಅನೇಕಧಾ ಎಂದಾಗಬೇಕಾಗುತ್ತದೆ. ನೈಕಧಾ ಎಂದೂ ಪ್ರಯೋಗವಿದೆ. ಇದು ಹೇಗಾಗುವುದೆಂಬುದನ್ನು 'ನೈಕಧೇತ್ಯಾದೌ—' ವಾಕ್ಯದಿಂದ ವಿವರಿಸುತ್ತಾನೆ. ನಞಿನ ಅರ್ಥಕೊಡುವ ನ ಎಂಬ ಅವ್ಯಯವಿದೆ. ಅದರೊಡನೆ ಸಮಾಸವಾದರೆ ನಞ್ ಅಲ್ಲವಾದುದರಿಂದ ನಕಾರಕ್ಕೆ ಲೋಪವಿಲ್ಲ. ನ+ಏಕಧಾ ಎಂದಿರುವಾಗ ವೃದ್ಧಿ ಬಂದರೆ ನೈಕಧಾ ಎಂದಾಗುತ್ತದೆ. ಇದಕ್ಕೆ ಸಮಾಸವಿಧಾಯಕಶಾಸ್ತ್ರ ಯಾವುದು? 'ಸಹ ಸುಪಾ' ಎಂದು ಹೇಳಿದ ಸೂತ್ರದಿಂದ ಈ ಸಮಾಸ ಹೇಳಬೇಕು. ಇದಕ್ಕೆ ಸುಪ್‌ಸುಪ್ ಸಮಾಸವೆಂದು ಹೆಸರು.

ಕುಗತಿಪ್ರಾದಿಗಳಿಗೆ ಸಮಾಸ ಹೇಳುವ ಸೂತ್ರ.

**೯೫೨. ಕುಗತಿಪ್ರಾದಯಃ ॥ ೨-೨-೧೮ ॥**

**ಏತೇ ಸಮರ್ಥೇನ ನಿತ್ಯಂ ಸಮಸ್ಯಂತೇ । ಕುತ್ಸಿತಃ ಪುರುಷಃ ಕುಪುರುಷಃ ॥**

ಏಕಪದ ಸೂತ್ರ. ಕುಶ್ಚ, ಗತಿಶ್ಚ, ಪ್ರಾದಿಶ್ಚ ಕುಗತಿಪ್ರಾದಯಃ ॥ **ಸೂತ್ರಾರ್ಥ**—ಕು ಎಂಬ ಅವ್ಯಯವೂ ಗತಿಸಂಜ್ಞೆ ಉಳ್ಳವುಗಳೂ ಪ್ರಾದಿಗಳೂ ಸಮರ್ಥಸುಬಂತಗಳೊಡನೆ ಸಮಾಸವಾಗಿ ತತ್ಪುರುಷಸಂಜ್ಞೆಯನ್ನು ಹೊಂದುತ್ತವೆ. ಗತಿ ಪದದಿಂದ ಪ್ರಾದಿಗಳೇ ಗೃಹೀತವಾದರೂ ಕ್ರಿಯಾಯೋಗವಿರುವಾಗ ಮಾತ್ರ ಪ್ರಾದಿಗಳಿಗೆ ಗತಿಸಂಜ್ಞೆ ಹೇಳಿರುವುದರಿಂದ ಕ್ರಿಯಾಯೋಗ ಇಲ್ಲದೇ ಇರುವಾಗಲೂ ಪ್ರಾದಿಗಳಿಗೆ ಸಮಾಸ ಹೇಳಲು ಪುನಃ ಪ್ರಾದಿಗಳನ್ನು ಸೇರಿಸಿರುತ್ತಾನೆ. ಇದು ನಿತ್ಯಸಮಾಸ. ಸ್ವಪದವಿಗ್ರಹವಿಲ್ಲ. ಕುಶಬ್ದಕ್ಕೆ ಸಮಾಸ. ಕುತ್ಸಿತಃ ಪುರುಷಃ (ಕು+ಪುರುಷ+ಸು) =ಕುಪುರುಷಃ ॥ ಪ್ರಾದಿಗಳಿಗೆ ಮಾತ್ರ ಕ್ರಿಯಾಯೋಗವಿರುವಾಗ ಗತಿಸಂಜ್ಞಾ ಹಿಂದೆ ಹೇಳಿದೆ. ಈಗ ಊರ್ಯಾದಿಗಳಿಗೆ ಆ ಸಂಜ್ಞೆ ಹೇಳುತ್ತಾನೆ.

ಊರ್ಯಾದಿಗಳಿಗೆ ಗತಿಸಂಜ್ಞೆ ಹೇಳುವ ಸೂತ್ರ.

೯೫೩. **ಊರ್ಯಾದಿಚ್ವಿಡಾಚಶ್ಚ** ॥ ೧-೪-೬೧ ॥

**ಊರ್ಯಾದಯಶ್ಚ್ವ್ಯನ್ತಾ ಡಾಜನ್ತಾಶ್ಚ ಕ್ರಿಯಾಯೋಗೇ ಗತಿಸಂಜ್ಞಾಃ ಸ್ಯುಃ । ಊರೀಕೃತ್ಯ । ಶುಕ್ಲೀಕೃತ್ಯ । ಪಟಪಟಾಕೃತ್ಯ । ಸುಪುರುಷಃ ।**

ದ್ವಿಪದ ಸೂತ್ರ. **ಸೂತ್ರಾರ್ಥ**—ಊರೀ ಮುಂತಾದ ಶಬ್ದಗಳೂ ಚ್ವಿಪ್ರತ್ಯಯಾಂತಗಳೂ ಡಾಚ್‌ಪ್ರತ್ಯಯಾಂತಗಳೂ ಕ್ರಿಯಾಯೋಗ ಇರುವಾಗ ಗತಿಸಂಜ್ಞೆಯನ್ನು ಹೊಂದುತ್ತವೆ. 'ಗತಿಶ್ಚ' ಸೂತ್ರಾನುವೃತ್ತಿ. ಚ್ವಿ, ಡಾಚ್ ಪ್ರತ್ಯಯಗಳಾದುದರಿಂದ ತದಂತಗ್ರಹಣ. ಗತಿಸಮಾಸಕ್ಕೆ ಉದಾಹರಣೆ—ಊರೀಕೃತ್ಯ. ಕೃತ್ವಾ ಶಬ್ದದೊಡನೆ ಸಂಬಂಧ ಬಂದಾಗ ಈ ಸೂತ್ರದಿಂದ ಊರೀ ಎಂಬುದಕ್ಕೆ ಗತಿಸಂಜ್ಞಾ ಬಂದು 'ಕುಗತಿಪ್ರಾದಯಃ' ಸೂತ್ರದಿಂದ ಸಮಾಸವಾಗಿ 'ಸಮಾಸೇಽನಞ್—' (ಸೂ. ೮೮೭) ಸೂತ್ರದಿಂದ ಕ್ತ್ವಾಪ್ರತ್ಯಯಕ್ಕೆ ಲ್ಯಪ್ ಆದೇಶ ಬಂದರೆ ಊರೀಕೃ+ಯ ಎಂದಿರುವಾಗ 'ಹ್ರಸ್ವಸ್ಯ ಪಿತಿ—' (ಸೂ. ೭೮೦) ಸೂತ್ರದಿಂದ ತುಗಾಗಮ ಬಂದರೆ ಊರೀಕೃತ್ಯ ಎಂದಾಗುತ್ತದೆ. ಸ್ಥಾನಿವದ್ಭಾವದಿಂದ ಕ್ತ್ವಾಂತವಾದುದರಿಂದ 'ಕ್ತ್ವಾತೋಸುನ್‌ಕಸುನಃ' ಸೂತ್ರದಿಂದ ಅವ್ಯಯಸಂಜ್ಞಾ ಬಂದು 'ಅವ್ಯಯಾದಾಪ್ ಸುಪಃ' ಸೂತ್ರದಿಂದ ಸಮಾಸದ ಮೇಲೆ ಬಂದ ಸುಪಿಗೂ ಲುಕ್ ಬಂದು ಊರೀಕೃತ್ಯ ಎಂದೇ ಇರುತ್ತದೆ. ಅಂಗೀಕರಿಸಿ ಎಂದರ್ಥ. ಚ್ವ್ಯಂತಕ್ಕೆ ಉದಾ.—ಶುಕ್ಲೀಕೃತ್ಯ. ಅಶುಕ್ಲಂ ಶುಕ್ಲತ್ವೇನ ಸಂಪದ್ಯಮಾನಂ ಕೃತ್ವಾ । ಬೆಳ್ಳಗಾಗದಿರುವುದನ್ನು ಬೆಳ್ಳಗೆ ಮಾಡಿ. ಶುಕ್ಲೀ ಎಂಬುದು ಚ್ವ್ಯಂತ. ಹಿಂದಿನಂತೇ ಕ್ತ್ವಾಪ್ರತ್ಯಯಕ್ಕೆ ಲ್ಯಬಾದಿ. ಡಾಜಂತಕ್ಕೆ ಉದಾ.—ಪಟಪಟಾಕೃತ್ಯ. ಪಟಪಟಾ ಡಾಜಂತ. ಪಟಪಟಾ ಎಂಬ ಶಬ್ದಮಾಡಿ. ಪ್ರಾದಿಗಳಿಗೆ ಗತಿಸಂಜ್ಞಾ ಇಲ್ಲದಿರುವಾಗ ಸಮಾಸ

ಬಂದುದಕ್ಕೆ ಉದಾ.—ಸುಪುರುಷಃ। ಶೋಭನಃ ಪುರುಷಃ=ಒಳ್ಳೇ ಮನುಷ್ಯ. ಈಗ ಕೆಲವು ವಾರ್ತಿಕಗಳಿಂದ ಪ್ರಾದಿಸಮಾಸ ಹೇಳುತ್ತಾನೆ.

**ವಾ ॥ (ಪ್ರಾದಯೋ ಗತಾದ್ಯರ್ಥೇ ಪ್ರಥಮಯಾ)**
**ಪ್ರಗತ ಆಚಾರ್ಯಃ ಪ್ರಾಚಾರ್ಯಃ ॥**

**ವಾ ॥. (ಅತ್ಯಾದಯಃ ಕ್ರಾಂತಾದ್ಯರ್ಥೇ ದ್ವಿತೀಯಯಾ)**
**ಅತಿಕ್ರಾಂತೋ ಮಾಲಾಮಿತಿ ವಿಗ್ರಹೇ ॥**

ಗತ ಮುಂತಾದ ಅರ್ಥದಲ್ಲಿರುವ ಪ್ರ ಮುಂತಾದವುಗಳು ಪ್ರಥಮಾಂತಸುಬಂತದೊಡನೆ ಸಮಾಸಹೊಂದುತ್ತವೆ. ಪ್ರ ಎಂಬುದಕ್ಕೆ ಗತ ಎಂದರ್ಥ. ಗತ ಆಚಾರ್ಯಃ ಎಂದು ವಿಗ್ರಹವಾಕ್ಯ. ಪ್ರಾಚಾರ್ಯಃ। ಅಭಿಗತೋ ಮುಖಂ ಅಭಿಮುಖಂ। ಇತ್ಯಾದಿ. ನಿತ್ಯಸಮಾಸವಾದುದರಿಂದ ಸ್ವಪದವಿಗ್ರಹವಿಲ್ಲ.

ಕ್ರಾಂತ ಮುಂತಾದ ಅರ್ಥದಲ್ಲಿರುವ ಅತಿ ಮುಂತಾದವುಗಳು ದ್ವಿತೀಯಾಂತ ಸುಬಂತದೊಡನೆ ಸಮಾಸಹೊಂದುತ್ತವೆ. ಮಾಲಾಂ ಕ್ರಾಂತಃ। ಅತಿ ಎಂಬುದು ಕ್ರಾಂತ ಎಂಬರ್ಥವನ್ನು ಹೇಳುತ್ತದೆ. ಅತಿಮಾಲಾ ಎಂದಿರುವಾಗ ಹ್ರಸ್ವ ಹೇಳಲು ಮೊದಲು ಉಪಸರ್ಜನಸಂಜ್ಞೆ ಹೇಳುತ್ತಾನೆ.

ಉಪಸರ್ಜನಸಂಜ್ಞೆ ಹೇಳುವ ಸೂತ್ರ.

**೯೩೪. ಏಕವಿಭಕ್ತಿ ಚಾಪೂರ್ವನಿಪಾತೇ ॥ ೧-೨-೪೪ ॥**

**ವಿಗ್ರಹೇ ಯನ್ನಿಯತವಿಭಕ್ತಿಕಂ ತದುಪಸರ್ಜನಸಂಜ್ಞಂ ಸ್ಯಾತ್ ನ ತು ತಸ್ಯ ಪೂರ್ವನಿಪಾತಃ ॥**

ಏಕವಿಭಕ್ತಿ, ಚ, ಅಪೂರ್ವನಿಪಾತೇ॥ ತ್ರಿಪದ ಸೂತ್ರ. 'ಪ್ರಥಮಾನಿರ್ದಿಷ್ಟಂ—' ಸೂತ್ರದಿಂದ 'ಸಮಾಸ', 'ಉಪಸರ್ಜನಮ್' ಪದಗಳು ಅನುವೃತ್ತವಾಗುತ್ತವೆ. ಸಮಾಸವೆಂದರೆ ವಿಗ್ರಹವಾಕ್ಯವೆಂದು ಅರ್ಥಮಾಡಿಕೊಳ್ಳಬೇಕು. ಏಕೈವ ವಿಭಕ್ತಿರ್ಯಸ್ಯ ತತ್ ಏಕವಿಭಕ್ತಿ. ನಿಯತವಾದ ವಿಭಕ್ತಿಯುಳ್ಳದ್ದೆಂದರ್ಥ. **ಸೂತ್ರಾರ್ಥ**—ವಿಗ್ರಹದಲ್ಲಿ ಯಾವುದು ನಿಯತವಾದ ವಿಭಕ್ತಿಯುಳ್ಳದ್ದೋ ಅದು ಉಪಸರ್ಜನಸಂಜ್ಞೆಯನ್ನು ಹೊಂದುತ್ತದೆ; ಆದರೆ ಅದಕ್ಕೆ ಪೂರ್ವನಿಪಾತ ಬರುವುದಿಲ್ಲ. ವಿಗ್ರಹವಾಕ್ಯದಲ್ಲಿ ಯಾವುದು ಅನಿಯತವಿಭಕ್ತಿಯುಳ್ಳದ್ದೋ ಅದರ ಅಪೇಕ್ಷೆಯಿಂದ ಯಾವುದು ನಿಯತವಾದ ಒಂದೇ ವಿಭಕ್ತಿ ಉಳ್ಳದ್ದೋ ಅದು ಉಪಸರ್ಜನ ಸಂಜ್ಞೆಹೊಂದುತ್ತದೆ. ಮಾಲಾಂ ಅತಿಕ್ರಾಂತಃ। ಎಂಬಲ್ಲಿ ಅತಿಕ್ರಾಂತಃ ಎಂಬುದು ಅನಿಯತ ವಿಭಕ್ತಿಯುಳ್ಳದ್ದು. ಮಾಲಾಂ ಎಂಬುದು ನಿಯತವಾದ ಒಂದೇ ದ್ವಿತೀಯಾ ವಿಭಕ್ತಿಯುಳ್ಳದ್ದಾದ್ದರಿಂದ ಅದು ಉಪಸರ್ಜನ. ಮಾಲಾಂ ಅತಿಕ್ರಾಂತೇನ, ಮಾಲಾಂ

ಅತಿಕ್ರಾಂತಾತ್ ಎಂದು ಹೀಗೇ ಹೇಳಬಹುದು. ಮಾಲಾಂ ಎಂಬುದು ಯಾವ ವಾಕ್ಯದಲ್ಲಿಯೂ ವ್ಯತ್ಯಾಸಹೊಂದುವುದಿಲ್ಲ. ಅತಿಪದವು ವ್ಯತ್ಯಾಸಹೊಂದುತ್ತದೆ. ಅತಿಮಾಲಾ ಎಂಬಲ್ಲಿ ಮಾಲಾ ಎಂಬುದಕ್ಕೆ ಉಪಸರ್ಜನಸಂಜ್ಞೆ ಬಂದರೆ ಅದಕ್ಕೆ ಹ್ರಸ್ವ ಹೇಳುತ್ತಾನೆ.

ಉಪಸರ್ಜನಕ್ಕೆ ಹ್ರಸ್ವ ಹೇಳುವ ಸೂತ್ರ.

೯೫೫. ಗೋಸ್ತ್ರಿಯೋರುಪಸರ್ಜನಸ್ಯ ॥ ೧-೨-೪೮ ॥

**ಉಪಸರ್ಜನಂ ಯೋ ಗೋಶಬ್ದಃ ಸ್ತ್ರೀಪ್ರತ್ಯಯಾಂತಂ ಚ ತದಂತಸ್ಯ ಪ್ರಾತಿಪದಿಕಸ್ಯ ಹ್ರಸ್ವಃ ಸ್ಯಾತ್ ॥ ಅತಿಮಾಲಃ ॥**

ಗೋಸ್ತ್ರಿಯೋಃ, ಉಪಸರ್ಜನಸ್ಯ ॥ ದ್ವಿಪದ ಸೂತ್ರ. 'ಹ್ರಸ್ವೋ ನಪುಂಸಕೇ ಪ್ರಾತಿಪದಿಕಸ್ಯ' ಸೂತ್ರದಿಂದ 'ಹ್ರಸ್ವಃ', 'ಪ್ರಾತಿಪದಿಕಸ್ಯ' ಪದಗಳು ಅನುವೃತ್ತವಾಗುತ್ತವೆ. 'ಉಪಸರ್ಜನಸ್ಯ' ಎಂಬುದು 'ಗೋಸ್ತ್ರಿಯೋಃ' ಎಂಬುದಕ್ಕೆ ವಿಶೇಷಣ. ಪ್ರತ್ಯೇಕಾಭಿಪ್ರಾಯದಿಂದ ಏಕವಚನ ಹೇಳಿದೆ. ಸ್ತ್ರೀಶಬ್ದದಿಂದ ಸ್ತ್ರೀ ಪ್ರತ್ಯಯವು ಗೃಹೀತವಾಗುತ್ತದೆ. ಪ್ರತ್ಯಯವಾದುದರಿಂದ ತದಂತವನ್ನು ತೆಗೆದು ಕೊಳ್ಳಬೇಕು. ಉಪಸರ್ಜನವಾದ ಗೋಶಬ್ದ, ಸ್ತ್ರೀಪ್ರತ್ಯಯಾಂತಶಬ್ದ. ಇವುಗಳು ಪ್ರಾತಿಪದಿಕಕ್ಕೆ ವಿಶೇಷಣವಾದುದರಿಂದ ತದಂತಲಾಭ. **ಸೂತ್ರಾರ್ಥ**—ಉಪಸರ್ಜನವಾದ ಯಾವ ಗೋಶಬ್ದ, ಸ್ತ್ರೀಪ್ರತ್ಯಯಾಂತಶಬ್ದವಿದೆಯೋ ಅದೇ ಅಂತವಾದ ಪ್ರಾತಿಪದಿಕಕ್ಕೆ ಹ್ರಸ್ವಬರುತ್ತದೆ. ಅತಿಮಾಲಾ ಎಂಬಲ್ಲಿ ಮಾಲಾ ಸ್ತ್ರೀಪ್ರತ್ಯಯಾಂತ. ಅದು ಉಪಸರ್ಜನವಾಗಿದೆ. ಅದು ಅಂತವಾದ ಪ್ರಾತಿಪದಿಕ ಅತಿಮಾಲಾ, ಇದಕ್ಕೆ ಹ್ರಸ್ವ ಬಂದರೆ ಅತಿಮಾಲಃ ಎಂದಾಗುತ್ತದೆ.

**ವಾ ॥ (ಅವಾದಯಃ ಕ್ರುಷ್ಟಾದ್ಯರ್ಥೇ ತೃತೀಯಯಾ)**
**ಅವಕ್ರುಷ್ಟಃ ಕೋಕಿಲಯಾ— ಅವಕೋಕಿಲಃ ॥**

**ವಾ ॥ (ಪರ್ಯಾದಯೋ ಗ್ಲಾನಾದ್ಯರ್ಥೇ ಚತುರ್ಥ್ಯಾ)**
**ಪರಿಗ್ಲಾನೋಽಧ್ಯಯನಾಯ ಪರ್ಯಧ್ಯಯನಃ ॥**

**ವಾ ॥ (ನಿರಾದಯಃ ಕ್ರಾಂತಾದ್ಯರ್ಥೇ ಪಂಚಮ್ಯಾ)**
**ನಿಷ್ಕ್ರಾಂತಃ ಕೌಶಾಮ್ಬ್ಯಾಃ—ನಿಷ್ಕೌಶಾಂಬಿಃ ॥**

ಕ್ರುಷ್ಟ ಇತ್ಯಾದ್ಯರ್ಥವನ್ನು ಕೊಡುವ ಅವ ಮುಂತಾದವುಗಳು ತೃತೀಯಾಂತ ಸುಬಂತದೊಡನೆ ಸಮಾಸಹೊಂದುತ್ತವೆ. ಅವ(ಕ್ರುಷ್ಟಃ) ಕೋಕಿಲಯಾ ಅವ ಕೋಕಿಲಃ=ಕೋಗಿಲೆಯಿಂದ ಕರೆಯಲ್ಪಟ್ಟವನು.

ಗ್ಲಾನ ಇತ್ಯಾದ್ಯರ್ಥವನ್ನು ಕೊಡುವ ಪರಿ ಮುಂತಾದವುಗಳು ಚತುರ್ಥ್ಯಂತ ಸುಬಂತದೊಡನೆ ಸಮಾಸಹೊಂದುತ್ತವೆ. ಪರಿ(ಮ್ಲಾನಃ) ಅಧ್ಯಯನಾಯ ಪರ್ಯಧ್ಯಯನಃ=ಅಭ್ಯಾಸದಿಂದ ಬಳಲಿದವನು.

ಕ್ರಾಂತ ಮುಂತಾದ ಅರ್ಥವನ್ನು ಕೊಡುವ ನಿರ್ ಮುಂತಾದವುಗಳು ಪಂಚಮ್ಯಂತಸುಬಂತದೊಡನೆ ಸಮಾಸಹೊಂದುತ್ತವೆ. ನಿಷ್(ಕ್ರಾಂತಃ) ಕೌಶಾಂಬ್ಯಾಃ ನಿಷ್ಕೌಶಾಂಬಿಃ=ಕೌಶಾಂಬಿ ನಗರಿಯಿಂದ ಹೊರಟವನು. ಇಲ್ಲಿ ಕೌಶಾಂಬೀ ಎಂಬುದು ಉಪಸರ್ಜನವಾದ ಸ್ತ್ರೀಪ್ರತ್ಯಯಾಂತಶಬ್ದವಾದುದರಿಂದ ಹಿಂದಿನಂತೆ ಹ್ರಸ್ವಬಂದಿದೆ. ಭಾಷ್ಯದಲ್ಲಿ ವಿವೃತವಾದ ಈ ವಾರ್ತಿಕಗಳು—ಪ್ರಾದಿಸಮಾಸದ ವಿಶೇಷವನ್ನು ತಿಳಿಸುತ್ತವೆ. ವ್ಯವಸ್ಥೆಯನ್ನು ತಿಳಿಸುವುದೇ ಈ ವಾರ್ತಿಕಗಳ ಉದ್ದೇಶ. ಇಲ್ಲವಾದರೆ ಅವ್ಯವಸ್ಥೆಯಿಂದ ಸಮಾಸ ಬರಬೇಕಾಗುತ್ತದೆ.

ಉಪಪದಸಂಜ್ಞಾವಿಧಾಯಕ ಸೂತ್ರ.

**೯೫೬. ತತ್ರೋಪಪದಂ ಸಪ್ತಮೀಸ್ಥಮ್ ॥ ೩-೧-೯೨ ॥**

**ಸಪ್ತಮ್ಯಂತೇ ಪದೇ ಕರ್ಮಣೀತ್ಯಾದೌ ವಾಚ್ಯತ್ವೇನ ಸ್ಥಿತಂ ಯತ್ ಕುಂಭಾದಿ ತದ್ವಾಚಕಂ ಪದಮುಪಪದಸಂಜ್ಞಂ ಸ್ಯಾತ್ ॥**

ತತ್ರ, ಉಪಪದಂ, ಸಪ್ತಮೀಸ್ಥಮ್ ॥ ತ್ರಿಪದವಾದ ಅಧಿಕಾರಸೂತ್ರ. ಸಪ್ತಮೀ ವಿಭಕ್ತಿಯಾದುದರಿಂದ ತದಂತಗ್ರಹಣ. ಸಪ್ತಮ್ಯಾಂ ತಿಷ್ಠತೀತಿ ಸಪ್ತಮೀಸ್ಥಮ್ । ಸಪ್ತಮ್ಯಂತ ಪದದಲ್ಲಿ ಇರುವುದು. ಅಂದರೆ ವಾಚ್ಯವಾಚಕಭಾವಸಂಬಂಧದಿಂದ ಇರುವುದೆಂದರ್ಥ (ಸಪ್ತಮ್ಯಂತವಾಚ್ಯವೆಂದರ್ಥ). 'ಧಾತೋಃ' ಅಧಿಕಾರದಲ್ಲಿ ಹೇಳಿರುವುದರಿಂದ ಆ ಅಧಿಕಾರದಲ್ಲಿರುವ 'ಕರ್ಮಣ್ಯಣ್' ಮುಂತಾದ ಸೂತ್ರಗಳಲ್ಲಿ ಇರುವ 'ಕರ್ಮಣಿ' ಮುಂತಾದ ಸಪ್ತಮ್ಯಂತವು ಇಲ್ಲಿ ವಿವಕ್ಷಿತವಾಗಿ ಅದರಿಂದ ವಾಚ್ಯವಾದ ಕುಂಭಾದಿಗಳು ಗೃಹೀತವಾಗುತ್ತವೆ. ಅವುಗಳಿಗೆ ಸಂಜ್ಞೆ ವ್ಯರ್ಥವಾಗಿ ಅವುಗಳನ್ನು ಹೇಳುವ ಕುಂಭಾದಿಪದಗಳಿಗೆ ಸಂಜ್ಞೆಬರುತ್ತದೆ. **ಸೂತ್ರಾರ್ಥ**— ಸಪ್ತಮ್ಯಂತಪದವಾದ ಕರ್ಮಣಿ ಮುಂತಾದವುಗಳಲ್ಲಿ ವಾಚ್ಯತ್ವದಿಂದ ಇರುವ ಯಾವ ಕುಂಭಾದಿಗಳಿವೆಯೋ ಅವುಗಳನ್ನು ಹೇಳುವ ಪದವು ಉಪಪದಸಂಜ್ಞೆಯನ್ನು ಹೊಂದುತ್ತದೆ. 'ಕರ್ಮಣ್ಯಣ್' ಸೂತ್ರವು ಈ ಅಧಿಕಾರಕ್ಕೆ ಒಳಪಟ್ಟಿದೆ. ಅಲ್ಲಿ ಸಪ್ತಮ್ಯಂತ ಪದ 'ಕರ್ಮಣಿ' ಅದರಿಂದ ವಾಚ್ಯವಾದುದು (ಕುಂಭಂ ಕರೋತಿ ಕುಂಭಕಾರಃ ।) ಕುಂಭರೂಪಾರ್ಥ. ಅದನ್ನು ಹೇಳುವ ಪದ ಕುಂಭಂ ಎಂಬ ದ್ವಿತೀಯಾಂತಪದ ಅದಕ್ಕೆ ಉಪಪದಸಂಜ್ಞೆ ಬರುತ್ತದೆ. ಈಗ ಅದಕ್ಕೆ ಸಮಾಸ ಹೇಳುತ್ತಾನೆ.

## ಉಪಪದಸಮಾಸವಿಧಾಯಕ ಸೂತ್ರ.

### ೯೫೭. ಉಪಪದಮತಿಙ್ ॥ ೨-೨-೧೯ ॥

**ಉಪಪದಂ ಸುಬಂತಂ ಸಮರ್ಥೇನ ನಿತ್ಯಂ ಸಮಸ್ಯತೇ । ಅತಿಙನ್ತಶ್ಚಾಯಂ ಸಮಾಸಃ । ಕುಂಭಂ ಕರೋತೀತಿ ಕುಂಭಕಾರಃ । ಅತಿಙ್ ಕಿಮ್ ? ಮಾ ಭವಾನ್ ಭೂತ್ । ಮಾಙಿ ಲುಙಿತಿ ಸಪ್ತಮೀನಿರ್ದೇಶಾನ್ಮಾಙುಪಪದಮ್ । ಪರಿ—॥ ಗತಿಕಾರಕೋಪಪದಾನಾಂ ಕೃದ್ಭಿಃ ಸಹ ಸಮಾಸವಚನಂ ಪ್ರಾಕ್ ಸುಬುತ್ಪತ್ತೇಃ ॥ ವ್ಯಾಘ್ರೀ । ಅಶ್ವಕ್ರೀತೀ । ಕಚ್ಛಪೀತ್ಯಾದಿ ॥**

ಉಪಪದಮ್, ಅತಿಙ್ ॥ ದ್ವಿಪದ ಸೂತ್ರ. 'ಸುಬಾಮಂತ್ರಿತೇ—' ಸೂತ್ರದಿಂದ 'ಸುಪ್' ಅನುವೃತ್ತಿ. 'ಸಮರ್ಥಃ ಪದವಿಧಿಃ' ಅಧಿಕಾರದಿಂದ ಲಬ್ಧವಾದ 'ಸಮರ್ಥ' ಪದವು ತೃತೀಯಾಂತವಾಗಿ ವಿಪರಿಣತವಾಗುತ್ತದೆ. ತಿಙ್‌ಪ್ರತ್ಯಯವಾದುದರಿಂದ ತದಂತಲಾಭ. **ಸೂತ್ರಾರ್ಥ**—ಉಪಪದಸಂಜ್ಞೆಯಿರುವ ಸುಬಂತವು ಸಮರ್ಥವಾದ ಸುಬಂತದೊಡನೆ ಸಮಾಸಹೊಂದುತ್ತದೆ; ಆದರೆ ಆ ಸಮಾಸವು ತಿಙಂತದೊಡನೆ ಆಗುವುದಿಲ್ಲ. ಕುಂಭಂ+ಕರೋತಿ=ಕುಂಭಕಾರಃ ॥ 'ಕರ್ಮಣ್ಯಣ್' ಸೂತ್ರದಿಂದ ಕರ್ಮವನ್ನು ಹೇಳುವ ಕುಂಭವಾಚಕಪದವು ಉಪಪದವಾಗಿರುವಾಗಿರುವಾಗ ಕೃಞ್ ಧಾತುವಿಗೆ ಕರ್ತ್ರರ್ಥದಲ್ಲಿ ಅಣ್ ಪ್ರತ್ಯಯ ಬಂದು ವೃದ್ಧಿ (ಆರ್) ಬಂದಿದೆ. ಕಾರ ಶಬ್ದದೊಡನೆ ಸಮಾಸ. ವೃತ್ತಿಯಲ್ಲಿ ಕುಂಭಂ ಕರೋತಿ ಎಂದು ತೋರಿಸಿದುದು ಕೇವಲ ಅರ್ಥವಿವರಣೆ. ತಿಙಂತದೊಡನೆ ಸಮಾಸವಿಲ್ಲವೆಂದು ಸೂತ್ರದಲ್ಲೇ ಹೇಳಿದೆ. ಆದುದರಿಂದ ಕುಂಭ+ಙಸ್+ಕಾರ ಎಂಬ ಅಲೌಕಿಕವಿಗ್ರಹವಾಕ್ಯದಲ್ಲಿಯೇ ಸಮಾಸ. ಕೃದ್ಯೋಗವಿರುವುದರಿಂದ ದ್ವಿತೀಯಕ್ಕೆ ಅಪವಾದವಾಗಿ ಷಷ್ಠೀ ಬಂದುದರಿಂದ ಕುಂಭ+ಅಮ್ ಎಂದು ಹೇಳಬಾರದು. ಸುಪ್ ಲುಕ್ಕಾಗಿ ಕುಂಭಕಾರ ಎಂದಿರುವಾಗ ಸಮಾಸರೂಪಪ್ರಾತಿಪದಿಕವಾದುದರಿಂದ ಅದರ ಮೇಲೆ ಸುಪ್. ಕುಂಭಕಾರಃ । ಅತಿಙ್ ಕಿಮ್ ? ತಿಙಂತಘಟಿತವಾಗಬಾರದು ಎಂದುದೇಕೆ ? ಮಾ ಭವಾನ್ ಭೂತ್. ಇಲ್ಲಿ ಉಪಪದಸಮಾಸ ಬರುವುದಿಲ್ಲ. ಭೂತ್ ಎಂಬ ತಿಙಂತದೊಡನೆ ಮಾ ಎಂಬ ಉಪಪದಕ್ಕೆ ಸಮಾಸ ಬಂದಿದ್ದರೆ ಮಾಭೂತ್ ಎಂದಾಗಬೇಕಾಗುತ್ತದೆ. ಮಾಙ್‌ಯೋಗ ಇರುವಾಗ ಅಡಾಗಮ ಬರುವುದಿಲ್ಲ. ಮಾಙ್ ಉಪಪದ ಹೇಗೆ ಎಂಬುದನ್ನು 'ಮಾಙಿ ಲುಙ್—' ವಾಕ್ಯದಿಂದ ವಿವರಿಸುತ್ತಾನೆ. 'ಮಾಙಿ ಲುಙ್—' ಸೂತ್ರದಲ್ಲಿ 'ಮಾಙಿ' ಎಂದು ಸಪ್ತಮ್ಯಂತದಿಂದ ನಿರ್ದಿಷ್ಟವಾದುದರಿಂದ ಅದಕ್ಕೆ ಉಪಪದಸಂಜ್ಞೆ ಬರುತ್ತದೆ. ಸಮಾಸ ಬಂದರೂ ಬಾರದಿದ್ದರೂ ಭೇದ ತಿಳಿಯದಿರುವುದರಿಂದ ಮಧ್ಯದಲ್ಲಿ 'ಭವಾನ್' ಪದವನ್ನು ಸೇರಿಸಿರುತ್ತಾನೆ.

'ಗತಿಕಾರಕೋ—' ಪರಿಭಾಷೆ. ಗತಿ, ಕಾರಕ, ಉಪಪದಗಳಿಗೆ ಕೃದಂತ

ದೊಡನೆ ಸಮಾಸವು ಸುಪ್ ಬರಬೇಕಾದರೆ ಮೊದಲೇ ಬರುತ್ತದೆ. ಉತ್ತರಪದವಾದ ಕೃದಂತಕ್ಕೆ ಸುಪ್ ಬರುವುದರ ಮೊದಲೇ ಸಮಾಸ ಹೇಳಬೇಕು. ಹೀಗೆ ನಿಯಮ ಮಾಡಿರುವುದರಿಂದ ವ್ಯಾಘ್ರೀ, ಅಶ್ವಕ್ರೀತೀ, ಕಚ್ಛಪೀ ಇತ್ಯಾದಿ ರೂಪಗಳು ಸಿದ್ಧ ವಾಗುತ್ತವೆ. ವ್ಯಾಜಿಘ್ರತಿ ಇತಿ ವ್ಯಾಘ್ರೀ। ಘ್ರಾ ಧಾತು. 'ಆತಶ್ಚೋಽಪಸರ್ಗೇ' ಸೂತ್ರದಿಂದ ಕಪ್ರತ್ಯಯ. 'ಆತೋ ಲೋಪ ಇಟಿ ಚ' ಸೂತ್ರದಿಂದ ಕ ಪರವಾದಾಗ ಆಕಾರಲೋಪ. ಘ್ರ ಎಂದಾಗುತ್ತದೆ. ಆಙ್ ಗತಿಗೆ ಘ್ರಶಬ್ದದೊಡನೆಯೂ, ವಿ ಗತಿಗೆ ಆಘ್ರ ಶಬ್ದದೊಡನೆಯೂ ಈ ಪರಿಭಾಷೆಯಿಂದ ಸುಪ್ ಬರಬೇಕಾದರೆ ಮೊದಲೇ ಸಮಾಸ. (ಕುಗತಿಪ್ರಾದಯಃ) ವ್ಯಾಘ್ರ ಎಂದಾದಮೇಲೆ ಸುಪ್. ಸುಪ್ ಬರ ಬೇಕಾದರೆ ಮೊದಲು ಲಿಂಗಯೋಗವಿರಬೇಕಾದುದರಿಂದ ಇದು ಜಾತಿವಾಚಕವಾದುದ ರಿಂದ ಙೀಷ್ ಬಂದು ವ್ಯಾಘ್ರೀ ಎಂದಾದಮೇಲೆ ಸುಪ್. 'ಹಲ್ಙ್ಯಾಭ್ಯೋ—' ಸೂತ್ರದಿಂದ ಸುವಿಗೆ ಲೋಪ. ಸಮಾಸದಲ್ಲಿ ಸುಬಂತವನ್ನು ಅಪೇಕ್ಷಿಸುವುದಾದರೆ, ಕೃದಂತದ ಮೇಲೆ ಸುಪ್ ಮಾಡಿ ಸಮಾಸ ಹೇಳುವುದಾದರೆ, ಆಗ ಕೇವಲ ಘ್ರ ಶಬ್ದವು ಜಾತಿವಾಚಕವಾಗದಿರುವುದರಿಂದ ಅದಂತನಿಮಿತ್ತವಾಗಿ ಟಾಪ್ ಬರುತ್ತದೆ. ಟಾಬಂತದ ಮೇಲೆ ಸುಪ್. ವಿ, ಆ + ಘ್ರಾ + ಸು ಎಂದು ಸಮಾಸವಾದಮೇಲೆ ಹ್ರಸ್ವಾಕಾರಾಂತವಾಗದಿರುವುದರಿಂದ ಜಾತಿಲಕ್ಷಣ ಙೀಷ್ ಅದರ ಮೇಲೆ ಬಾರದೆ ಇಷ್ಟರೂಪವಾಗದೇ ಹೋಗಬೇಕಾಗುತ್ತದೆ. ಆದುದರಿಂದ ಸುಬುತ್ಪತ್ತಿಗಿಂತ ಮೊದಲೇ ಸಮಾಸ ಹೇಳಬೇಕು. ಕಾರಕಸಮಾಸಕ್ಕೆ ಉದಾಹರಣೆ ತೋರಿಸುತ್ತಾನೆ. ಅಶ್ವೇನ + ಕ್ರೀತಾ. 'ಕರ್ತೃಕರಣೇ ಕೃತಾ ಬಹುಲಮ್' ಸೂತ್ರದಿಂದ ಸಮಾಸ. ಇಲ್ಲಿಯೂ ಈ ಪರಿಭಾಷೆಯಿಂದ ಅಶ್ವ + ಟಾ + ಕ್ರೀತ ಎಂದು ಕೃದಂತದಮೇಲೆ ಸುಪ್ ಬರ ಬೇಕಾದರೆ ಮೊದಲು ಸಮಾಸ. ಅಶ್ವಕ್ರೀತ ಎಂದಿರುವಾಗ 'ಕ್ರೀತಾತ್ ಕರಣ ಪೂರ್ವಾತ್' ಸೂತ್ರದಿಂದ ಙೀಷ್. ಹಿಂದಿನಂತೆ ಸುಲೋಪವಾಗಿ ಅಶ್ವಕ್ರೀತೀ ಎಂದಾಗುತ್ತದೆ. ಸುಬುತ್ಪತ್ತಿಯಾದಮೇಲೆ ಸಮಾಸ ಹೇಳುವುದಾದರೆ ಕ್ರೀತ ಶಬ್ದದ ಮೇಲೆ ಟಾಪ್ ಬಂದು ಸುಪ್ ಬರುವುದರಿಂದ ಅಶ್ವ + ಟಾ + ಕ್ರೀತಾ + ಸು ಎಂದಾಗು ತ್ತದೆ. ಸುಪ್ ಲುಕ್ ಆದಮೇಲೆ ಅದಂತವಾಗದಿರುವುದರಿಂದ ಹಿಂದಿನ ಸೂತ್ರದಿಂದ ಙೀಷ್ ಬಾರದೆ ಅನಿಷ್ಟರೂಪವಾಗಬೇಕಾಗುತ್ತದೆ. ಉಪಪದ ಸಮಾಸಕ್ಕೆ ಉದಾ ಹರಣೆ—ಕಚ್ಛೇನ + ಪಿಬತಿ. 'ಉಪಪದಮತಿಙ್' ಸೂತ್ರದಿಂದ ಸಮಾಸ. 'ಸುಪಿ ಸ್ಥಃ' ಸೂತ್ರದಲ್ಲಿ 'ಸುಪಿ' ಎಂದು ಯೋಗವಿಭಾಗ ಮಾಡಿದಾಗ 'ಸುಪಿ' ಎಂದು ಸೂತ್ರವಾಗುತ್ತದೆ. ಸುಬಂತ ಉಪಪದವಾಗಿರುವಾಗ (ಆದಂತ) ಧಾತುವಿಗೆ ಕಪ್ರತ್ಯಯ ಬರುತ್ತದೆ ಎಂದರ್ಥವಾಗುವುದರಿಂದ ಕಚ್ಛ ಎಂಬುದು ಉಪಪದವಾದಾಗ ಪಾ ಧಾತು ವಿಗೆ ಕಪ್ರತ್ಯಯ. ಹಿಂದಿನಂತೆ ಆಲೋಪ. ಪ ಎಂದಾಗುತ್ತದೆ. ಕಚ್ಛ + ಟಾ + ಪ ಎಂದಿರುವಾಗಲೇ ಸಮಾಸ. ಕಚ್ಛಪ ಎಂದಾದಾಗ ಜಾತಿಲಕ್ಷಣ ಙೀಷ್ ಬಂದು ಕಚ್ಛಪೀ ಎಂದಾಗುತ್ತದೆ. ಈ ಪರಿಭಾಷೆಯಿಂದ ಸುಬುತ್ಪತ್ತಿಯ ಮೊದಲೇ ಸಮಾಸ

ಹೇಳದೇ ಹೋದರೆ ಪ ಶಬ್ದದ ಮೇಲೆ ಟಾಪ್ ಬಂದು ಸುಪ್ ಬರುವುದರಿಂದ ಸಮಾಸ ವಾದಮೇಲೆ ಅದಂತವಾಗದಿರುವುದರಿಂದ ಜಾತಿಲಕ್ಷಣ ಙೀಷ್ ಬರುವುದಿಲ್ಲ. ಮೊದಲೇ ಙೀಷ್ ಬರಲಿ ಎಂದರೆ ಪ ಜಾತಿವಾಚಕವಲ್ಲ. ಆದುದರಿಂದ ಈ ಪರಿಭಾಷೆಯಿಂದ ಈ ರೀತಿ ಸ್ಥಲಗಳಲ್ಲಿ ಸುಬುತ್ಪತ್ತಿಯು ಮೊದಲೇ ಸಮಾಸ ಹೇಳಬೇಕು. ಆಗ ಇಷ್ಟ ರೂಪ ಸಿದ್ಧಿಯಾಗುತ್ತದೆ. ಹೀಗೆ ತತ್ಪುರುಷಸಮಾಸ ಹೇಳಿ ಇನ್ನುಮುಂದೆ ಅದರ ಮೇಲೆ ಬರುವ ಸಮಾಸಾಂತಪ್ರತ್ಯಯಗಳನ್ನು ಹೇಳುತ್ತಾನೆ.

ಅಂಗುಲ್ಯಂತತತ್ಪುರುಷಕ್ಕೆ ಅಚ್ ಪ್ರತ್ಯಯ ಹೇಳುವ ಸೂತ್ರ.

೯೫೮. ತತ್ಪುರುಷಸ್ಯಾಙ್ಗುಲೇಃ ಸಂಖ್ಯಾವ್ಯಯಾದೇಃ || ೫-೪-೮೬ ||

**ಸಂಖ್ಯಾವ್ಯಯಾದೇರಙ್ಗುಲ್ಯಂತಸ್ಯ ಸಮಾಸಾಂತೋಽಚ್ ಸ್ಯಾತ್ | ದ್ವೇ ಅಂಗುಲೀ ಪ್ರಮಾಣಮಸ್ಯ ದ್ವ್ಯಂಗುಲಮ್ | ನಿರ್ಗತಮಂಗುಲಿಭ್ಯೋ ನಿರಂಗುಲಮ್ ||**

ತ್ರಿಪದ ಸೂತ್ರ. 'ಸಮಾಸಾಂತಾಃ' ಅಧಿಕಾರ. 'ಅಚ್ ಪ್ರತ್ಯನ್ವವಪೂರ್ವ—' ಸೂತ್ರದಿಂದ 'ಅಚ್' ಅನುವೃತ್ತಿ. 'ಅಂಗುಲೇಃ' ತತ್ಪುರುಷಸ್ಯ ಎಂಬುದಕ್ಕೆ ವಿಶೇಷಣವಾದುದರಿಂದ ತದಂತಲಾಭ. **ಸೂತ್ರಾರ್ಥ**—ಸಂಖ್ಯಾವಾಚಕ ಶಬ್ದ ವಾಗಲೀ, ಅವ್ಯಯವಾಗಲೀ ಆದಿಯಾಗಿರುವ ಅಂಗುಲಿ ಅಂತವಾಗಿರುವ ತತ್ಪುರುಷ ಸಮಾಸಕ್ಕೆ ಅಚ್ ಸಮಾಸಾಂತವಾಗಿ ಬರುತ್ತದೆ. ದ್ವೇ ಅಂಗುಲೀ ಪ್ರಮಾಣಂ ಅಸ್ಯ. ದ್ವಿ+ಔ+ಅಂಗುಲಿ+ಔ. ದ್ವ್ಯಂಗುಲಿ. ತದ್ಧಿತಾರ್ಥದಲ್ಲಿ ದ್ವಿಗುಸಮಾಸ. ಪ್ರಮಾಣಾರ್ಥದಲ್ಲಿ ಮಾತ್ರಚಾದಿಗಳು ಬಂದಾಗ 'ದ್ವಿಗೋರ್ನಿತ್ಯಮ್' ಸೂತ್ರದಿಂದ ಲುಕ್. ಸಂಖ್ಯಾವಾಚಕಪದ ಆದಿಯಾಗಿಯೂ ಅಂಗುಲ್ಯಂತವಾಗಿಯೂ ಇರುವುದ ರಿಂದ ಅಚ್. ದ್ವ್ಯಂಗುಲಿ+ಅ. 'ಯಸ್ಯೇತಿ ಚ' ಇಕಾರಲೋಪ. ದ್ವ್ಯಂಗುಲಮ್. ಎರಡು ಅಂಗುಲ ಪ್ರಮಾಣವುಳ್ಳದ್ದು. ಅವ್ಯಯಾದಿಗೆ ಉದಾಹರಣೆ—ನಿರ್ಗತಂ ಅಂಗುಲಿಭ್ಯಃ || 'ನಿರಾದಯಃ ಕ್ರಾಂತಾದ್ಯರ್ಥೇ ಪಂಚಮ್ಯಾ' ವಾರ್ತಿಕದಿಂದ ಸಮಾಸ. ನಿರಂಗುಲಮ್.

ರಾತ್ರಿಶಬ್ದಾಂತಕ್ಕೆ ಅಚ್ ಹೇಳುವ ಸೂತ್ರ.

೯೫೯. ಅಹಃ ಸರ್ವೈಕದೇಶಸಂಖ್ಯಾತಪುಣ್ಯಾಚ್ಚ ರಾತ್ರೇಃ || ೫-೪-೮೭ ||

**ಏಭ್ಯೋ ರಾತ್ರೇರಚ್ ಸ್ಯಾಚ್ಚಾತ್ ಸಂಖ್ಯಾವ್ಯಯಾದೇಃ | ಅಹರ್ಗ್ರಹಣಂ ದ್ವಂದ್ವಾರ್ಥಮ್ ||**

ತ್ರಿಪದ ಸೂತ್ರ. ಚಕಾರದಿಂದ 'ಸಂಖ್ಯಾವ್ಯಯಾದೇಃ' ಸಮುಚ್ಚಿತವಾಗುತ್ತದೆ. **ಸೂತ್ರಾರ್ಥ**—ಅಹನ್, ಸರ್ವ, ಏಕದೇಶ, ಸಂಖ್ಯಾತ, ಪುಣ್ಯಶಬ್ದಗಳ ಪರದಲ್ಲಿರುವ

ರಾತ್ರಿಶಬ್ದಕ್ಕೆ ಅಚ್ ಸಮಾಸಾಂತವಾಗಿ ಬರುತ್ತದೆ. ಅಹನ್ ಮುಂತಾದ ಪೂರ್ವ ಪದಗಳುಳ್ಳ ರಾತ್ರ್ಯಂತವಾದ ತತ್ಪುರುಷಕ್ಕೆ ಎಂದರ್ಥ. ಅಹನ್ ಶಬ್ದದ ಪರದಲ್ಲಿ ರಾತ್ರಿ ಶಬ್ದ ತತ್ಪುರುಷದಲ್ಲಿ ಬರುವುದು ಅಸಂಭವ. ಹಗಲಿನ ರಾತ್ರಿಯೆಂದಾಗಲೀ, ಹಗಲೇ ರಾತ್ರಿಯೆಂದಾಗಲೀ ಹೇಳುವುದು ಅಸಂಭವ. ದ್ವಂದ್ವಸಮಾಸಾಭಿಪ್ರಾಯ ದಿಂದ ಅಹನ್ ಶಬ್ದ ಹೇಳಿದೆ. ಹಗಲೂ, ರಾತ್ರಿಯೂ ಎಂದು ಹೇಳಬಹುದು. ಅಹಶ್ಚ ರಾತ್ರಿಶ್ಚ ಎಂದು ದ್ವಂದ್ವಸಮಾಸ ಮಾಡಿದಾಗ ಅಹನ್ + ರಾತ್ರಿ ಎಂದಿರುವಾಗ ಅಚ್. 'ಯಸ್ಯೇತಿ ಚ' ಇಕಾರ ಲೋಪ. ನಕಾರಕ್ಕೆ ರುತ್ವವಿಸರ್ಗ. ಅಹೋರಾತ್ರ. ಪರವಲ್ಲಿಂಗಕ್ಕೆ ಪ್ರಾಧಾನ್ಯ ಇರುವುದರಿಂದ ಸ್ತ್ರೀಲಿಂಗ ಪ್ರಾಪ್ತವಾದರೆ ಅಪವಾದ ಹೇಳುತ್ತಾನೆ.

ದ್ವಂದ್ವ ತತ್ಪುರುಷಗಳಿಗೆ ಪುಂಸ್ತ್ವ ಹೇಳುವ ಸೂತ್ರ.

**೯೭೦. ರಾತ್ರಾಹ್ನಾಹಾಃ ಪುಂಸಿ ॥ ೨-೪-೨೯ ॥**

**ಏತದಂತೌ ದ್ವಂದ್ವತತ್ಪುರುಷೌ ಪುಂಸ್ಯೇವ । ಅಹಶ್ಚ ರಾತ್ರಿಶ್ಚ ಅಹೋರಾತ್ರಃ । ಸರ್ವರಾತ್ರಃ । ಸಂಖ್ಯಾತರಾತ್ರಃ ।**

**ವಾ ॥ (ಸಂಖ್ಯಾಪೂರ್ವಂ ರಾತ್ರಂ ಕ್ಲೀಬಮ್)**
**ದ್ವಿರಾತ್ರಮ್ । ತ್ರಿರಾತ್ರಮ್ ॥**

ದ್ವಿಪದ ಸೂತ್ರ. 'ದ್ವಂದ್ವತತ್ಪುರುಷಯೋಃ—' ಅನುವೃತ್ತವಾಗಿ ಪ್ರಥಮಾಂತ ವಾಗಿ ಪರಿಣತವಾಗುತ್ತದೆ. ರಾತ್ರಾಹ್ನಾಹಾಃ ಅದಕ್ಕೆ ವಿಶೇಷಣವಾದುದರಿಂದ ತದಂತಲಾಭ. **ಸೂತ್ರಾರ್ಥ**—ರಾತ್ರ, ಅಹ್ನ, ಅಹಃ ಶಬ್ದಾಂತಗಳಾದ ದ್ವಂದ್ವ-ತತ್ಪುರುಷಗಳು ಪುಲ್ಲಿಂಗದಲ್ಲಿಯೇ ಇರುತ್ತವೆ. ಪರವಲ್ಲಿಂಗಕ್ಕೆ ಅಪವಾದ. ಪ್ರಕೃತ ರಾತ್ರಶಬ್ದಾಂತವಾದ ದ್ವಂದ್ವವಾದುದರಿಂದ ಪುಲ್ಲಿಂಗವೇ ಆದರೆ ಅಹೋರಾತ್ರಃ ಎಂದಾಗುತ್ತದೆ. ಸರ್ವಾ ಚ ಸಾ ರಾತ್ರಿಶ್ಚ ಸರ್ವರಾತ್ರಃ ॥ ಹಿಂದಿನಂತೆ ಅಚ್, ಪುಲ್ಲಿಂಗ ಬಂದಿದೆ. ವಿಶೇಷಣಸಮಾಸ. ಹೀಗೇ ಸಂಖ್ಯಾತರಾತ್ರಃ ಎಂದಾಗುತ್ತದೆ. ಪುಣ್ಯರಾತ್ರಃ । ರಾತ್ರಶಬ್ದಾಂತವಾದ ತತ್ಪುರುಷಕ್ಕೆ ಪುಲ್ಲಿಂಗವೇ ಎಂದುದರಿಂದ ಅದಕ್ಕೆ ವಾರ್ತಿಕಕಾರರು ಅಪವಾದ ಹೇಳುತ್ತಾರೆ. ಸಂಖ್ಯಾವಾಚಕಶಬ್ದ ಪೂರ್ವಪದ ವಾಗಿರುವ ರಾತ್ರಾಂತವಾದ ತತ್ಪುರುಷವು ನಪುಂಸಕಲಿಂಗವನ್ನು ಹೊಂದುತ್ತದೆ. ದ್ವಯೋಃ ರಾತ್ರ್ಯೋಃ ಸಮಾಹಾರಃ ದ್ವಿರಾತ್ರಮ್ ॥ 'ತದ್ಧಿತಾರ್ಥೋತ್ತರಪದ ಸಮಾಹಾರೇ ಚ' ಸೂತ್ರದಿಂದ ಸಮಾಹಾರದಲ್ಲಿ ದ್ವಿಗುಸಮಾಸ. ಸಂಖ್ಯಾಪೂರ್ವ ಪದವಾದುದರಿಂದ ರಾತ್ರಿಶಬ್ದಾಂತದ ಮೇಲೆ ಅಚ್. ಹೀಗೆಯೇ ತ್ರಿರಾತ್ರಮ್ ಎಂದಾಗುತ್ತದೆ. ಅವ್ಯಯಾದಿಗೆ ಅತಿರಾತ್ರಮ್ ಉದಾಹರಣೆ. ರಾತ್ರಿಂ ಅತಿಕ್ರಾಂತಃ ॥

### ತತ್ಪುರುಷದಲ್ಲಿ ಟಚ್ ವಿಧಾಯಕ ಸೂತ್ರ.

**೯೭೧. ರಾಜಾಹಃ ಸಖಿಭ್ಯಷ್ಟಚ್ ॥ ೫–೪–೯೧ ॥**

**ಏತದಂತಾತ್ತತ್ಪುರುಷಾಟ್ಟಚ್ ಸ್ಯಾತ್ । ಪರಮರಾಜಃ ॥**

ದ್ವಿಪದ ಸೂತ್ರ. 'ತತ್ಪುರುಷಸ್ಯಾಂಗುಲೇಃ—' ಸೂತ್ರದಿಂದ ಅನುವೃತ್ತವಾದ 'ತತ್ಪುರುಷಸ್ಯ' ಪದವು ಅನುವೃತ್ತವಾಗಿ ಪಂಚಮ್ಯಂತವಾಗಿ ಪರಿಣತವಾಗುತ್ತದೆ. 'ರಾಜಾಹಃ ಸಖಿಭ್ಯಃ' ಆದಕ್ಕೆ ವಿಶೇಷಣವಾದುದರಿಂದ ತದಂತಲಾಭ. **ಸೂತ್ರಾರ್ಥ**—ರಾಜನ್, ಅಹನ್, ಸಖಿಶಬ್ದಾಂತವಾದ ತತ್ಪುರುಷಕ್ಕೆ ಟಚ್ ಸಮಾಸಾಂತವಾಗಿ ಬರುತ್ತದೆ. ಟಚಿನಲ್ಲಿ ಅ ಉಳಿಯುತ್ತದೆ. ಪರಮಶ್ಚಾಸೌ ರಾಜಾ ಚ ॥ ವಿಶೇಷಣ ಸಮಾಸ. ಪರಮರಾಜನ್ ಎಂದಿರುವಾಗ ಟಚ್. ಪರಮರಾಜನ್+ಅ. 'ನಃ ತದ್ಧಿತೇ' ಸೂತ್ರದಿಂದ ಟಿಲೋಪ (ಅನ್). ಪರಮರಾಜಃ । ಉತ್ತಮಾಹಃ, ಕೃಷ್ಣ ಸಖಃ ಇತ್ಯಾದಿ ಉದಾಹರಣೆಗಳನ್ನು ಊಹಿಸಿಕೊಳ್ಳಬೇಕು.

### ಮಹತ್ ಶಬ್ದಕ್ಕೆ ಆತ್ವ ಹೇಳುವ ಸೂತ್ರ.

**೯೭೨. ಆನ್ಮಹತಃ ಸಮಾನಾಧಿಕರಣಜಾತೀಯಯೋಃ ॥ ೬–೩–೪೬ ॥**

**ಮಹತ ಆಕಾರೋಽನ್ತಾದೇಶಃ ಸ್ಯಾತ್ಸಮಾನಾಧಿಕರಣೇ ಉತ್ತರಪದೇ ಜಾತೀಯೇ ಚ ಪರೇ । ಮಹಾರಾಜಃ । ಪ್ರಕಾರವಚನೇ ಜಾತೀಯರ್ । ಮಹಾಪ್ರಕಾರೋ ಮಹಾಜಾತೀಯಃ ॥**

ಆತ್, ಮಹತಃ, ಸಮಾನಾಧಿಕರಣಜಾತೀಯಯೋಃ ॥ ತ್ರಿಪದ ಸೂತ್ರ. 'ಅಲುಗುತ್ತರಪದೇ' ಅಧಿಕಾರದಿಂದ ಲಬ್ಧವಾದ ಉತ್ತರಪದೇ ಎಂಬುದು ಸಮಾನಾಧಿಕರಣದಲ್ಲಿ ಅನ್ವಯಹೊಂದುತ್ತದೆ. ಜಾತೀಯರ್ ಪ್ರತ್ಯಯ. **ಸೂತ್ರಾರ್ಥ**—ಮಹತ್ ಶಬ್ದಕ್ಕೆ ಸಮಾನಾಧಿಕರಣವಾದ ಉತ್ತರಪದ ಪರದಲ್ಲಿರುವಾಗ ಆಕಾರವು ಅಂತಾದೇಶವಾಗಿ ಬರುತ್ತದೆ. 'ಅಲೋಽಂತ್ಯಸ್ಯ' ಪರಿಭಾಷೆಯಿಂದ ಅಂತಕ್ಕೆಂದು ಲಬ್ಧವಾಗುತ್ತದೆ. ಮಹಾಂಶ್ಚಾಸೌ ರಾಜಾ ಚ, ಮಹತ್‌ರಾಜನ್ ॥ ಇಲ್ಲಿ ಏಕಾರ್ಥವನ್ನು ಕೊಡುವ ಏಕವಿಭಕ್ತ್ಯಂತವಾದ (ಸಮಾನಾಧಿಕರಣ) ರಾಜನ್ ಶಬ್ದ ಉತ್ತರಪದವಾಗಿರುವುದರಿಂದ ಮಹಚ್ಛಬ್ದಕ್ಕೆ ಆಕಾರ ಅಂತಾದೇಶ. ಮಹ+ಅ+ರಾಜನ್. ಸವರ್ಣದೀರ್ಘ. ರಾಜನ್ನಿಗೆ ಟಚ್. ಟಿಲೋಪ. ಮಹಾರಾಜಃ । ಮಹತ್ಸದೃಶಃ, ಮಹಾಜಾತೀಯಃ । 'ಪ್ರಕಾರವಚನೇ ಜಾತೀಯರ್' ಸೂತ್ರದಿಂದ ಸದೃಶ ಎಂಬರ್ಥ ತೋರುವಾಗ ಜಾತೀಯರ್ ಪ್ರತ್ಯಯ. ಮಹಾಪ್ರಕಾರಃ=ದೊಡ್ಡವನಂತಿರುವವನು.

ದ್ವಿ, ಅಷ್ಟನ್ ಶಬ್ದಗಳಿಗೆ ಆತ್ವ ಹೇಳುವ ಸೂತ್ರ.

**೯೬೩. ದ್ವ್ಯಷ್ಟನಃ ಸಂಖ್ಯಾಯಾಮಬಹುವ್ರೀಹ್ಯಶೀತ್ಯೋಃ || ೬-೩-೪೭||**

**ಆತ್ ಸ್ಯಾತ್ | ದ್ವೌ ಚ ದಶ ಚ ದ್ವಾದಶ | ಅಷ್ಟಾವಿಂಶತಿಃ ||**

ತ್ರಿಪದ ಸೂತ್ರ. **ಸೂತ್ರಾರ್ಥ**—ದ್ವಿ, ಅಷ್ಟನ್ ಶಬ್ದಗಳಿಗೆ ಸಂಖ್ಯಾವಾಚಕ ಪದವು ಉತ್ತರಪದವಾಗಿರುವಾಗ ಆತ್ವ ಅಂತಾದೇಶವಾಗಿ ಬರುತ್ತದೆ; ಬಹುವ್ರೀಹಿ ಸಮಾಸದಲ್ಲಿಯೂ ಅಶೀತಿಪದ ಪರದಲ್ಲಿರುವಾಗಲೂ ಈ ಆತ್ವ ಬರುವುದಿಲ್ಲ. ದ್ವೌ ಚ ದಶ ಚ ದ್ವಿದಶನ್ || ಸಂಖ್ಯಾವಾಚಕ ದಶನ್ ಪರದಲ್ಲಿರುವುದರಿಂದ ದ್ವಿಗೆ ಆತ್ವ. (ಇಕಾರಕ್ಕೆ) ದ್ವಾದಶನ್. ಪದಾಂತದಲ್ಲಿ ನಲೋಪ. ದ್ವಾದಶ. ಎರಡು ಮತ್ತು ಹತ್ತು ಅಂದರೆ ಹನ್ನೆರಡು. ದ್ವ್ಯಧಿಕಾಃ ದಶ ಎಂದು ಉತ್ತರಪದಲೋಪಿಸಮಾಸವನ್ನೂ ಮಾಡ ಬಹುದು. ಎರಡು ಅಧಿಕವಾದ ಹತ್ತು. ಅಷ್ಟೌ ಚ ವಿಂಶತಿಶ್ಚ. ಅಷ್ಟನ್‌ವಿಂಶತಿ. ಆತ್ವ. ಅಷ್ಟ + ಆ + ವಿಂಶತಿ. ಸವರ್ಣದೀರ್ಘ. ಅಷ್ಟಾವಿಂಶತಿಃ | ಬಹುವ್ರೀಹಿಯಲ್ಲಿ ಬರುವುದಿಲ್ಲ, ದ್ವೌ ವಾ ತ್ರಯೋ ವಾ ದ್ವಿತ್ರಾಃ || ಡಚ್ ಸಮಾಸಾಂತಪ್ರತ್ಯಯ ಬಂದಿದೆ. ಹೀಗೆಯೇ ಅಶೀತಿ ಶಬ್ದ ಪರವಾದಾಗಲೂ ಬರುವುದಿಲ್ಲ. ದ್ವ್ಯಧಿಕಾ ಅಶೀತಿಃ ದ್ವ್ಯಶೀತಿಃ || ಆಕಾರ ಬಂದಿದ್ದರೆ ದ್ವಾತ್ರಾಃ, ದ್ವಾಶೀತಿಃ ಎಂದಾಗಬೇಕಾಗು ತ್ತದೆ.

ತ್ರಿಶಬ್ದಕ್ಕೆ ತ್ರಯಾದೇಶ ಹೇಳುವ ಸೂತ್ರ.

**೯೬೪. ತ್ರೇಸ್ತ್ರಯಃ || ೬-೩-೪೮ ||**

**ತ್ರಯೋದಶ | ತ್ರಯೋವಿಂಶತಿಃ | ತ್ರಯಸ್ತ್ರಿಂಶತ್ ||**

ತ್ರೇಃ, ತ್ರಯಃ || ದ್ವಿಪದ ಸೂತ್ರ. **ಸೂತ್ರಾರ್ಥ**—ಸಂಖ್ಯಾವಾಚಕ ಪರದಲ್ಲಿ ಇರುವಾಗ ತ್ರಿಶಬ್ದಕ್ಕೆ ತ್ರಯಸ್ ಆದೇಶ ಬರುತ್ತದೆ. ತ್ರ್ಯಧಿಕಾಃ ದಶ || ತ್ರಿ + ದಶನ್ ಎಂದಿರುವಾಗ ತ್ರಯಸ್ ಆದೇಶ ಬಂದರೆ ತ್ರಯಸ್ + ದಶನ್. 'ಸಸಜು ಷೋರುಃ' ಸಕಾರಕ್ಕೆ ರುತ್ವ. ತ್ರಯರ್ + ದಶನ್. 'ಹಶಿ ಚ' ತ್ರಯ + ಉ + ದಶನ್. ಗುಣ. ಹಿಂದಿನಂತೆ ನಲೋಪ. ತ್ರಯೋದಶ. ಹೀಗೆಯೇ ತ್ರಯೋವಿಂಶತಿಃ | ತ್ರಯಸ್ತ್ರಿಂಶತ್ | ತಕಾರ ಹಶ್ ಆಗದಿರುವುದರಿಂದ ಉತ್ವವಿಲ್ಲ. ವಿಸರ್ಗ. 'ವಿಸರ್ಜ ನೀಯಸ್ಯ ಸಃ' ಸತ್ವ ಬಂದಿದೆ.

ದ್ವಂದ್ವ-ತತ್ಪುರುಷಗಳಲ್ಲಿ ಲಿಂಗನಿರ್ಣಾಯಕ ಸೂತ್ರ.

**೯೬೫. ಪರವಲ್ಲಿಙ್ಗಂ ದ್ವಂದ್ವತತ್ಪುರುಷಯೋಃ || ೨-೪-೨೬ ||**

**ಏತಯೋಃ ಪರಪದಸ್ಯೇವ ಲಿಂಗಂ ಸ್ಯಾತ್ | ಕುಕ್ಕುಟಮಯೂ- ರ್ಯಾವಿಮೇ | ಮಯೂರೀಕುಕ್ಕುಟಾವಿಮೌ | ಅರ್ಧಪಿಪ್ಪಲೀ |**

**ವಾ ॥ (ದ್ವಿಗುಪ್ರಾಪ್ತಾಪನ್ನಾಲಂಪೂರ್ವಗತಿಸಮಾಸೇಷು ಪ್ರತಿಷೇಧೋ ವಾಚ್ಯಃ ॥ ಪಂಚಸು ಕಪಾಲೇಷು ಸಂಸ್ಕೃತಃ ಪಂಚಕಪಾಲಃ ಪುರೋಡಾಶಃ ॥**

ದ್ವಿಪದ ಸೂತ್ರ. ಪರಸ್ಯ ಇವ ಪರವತ್. **ಸೂತ್ರಾರ್ಥ**—ದ್ವಂದ್ವ, ತತ್ಪುರುಷ ಸಮಾಸಗಳಲ್ಲಿ ಪರಪದದ ಲಿಂಗದಂತೆಯೇ ಲಿಂಗ ಬರುತ್ತದೆ. ಪರಪದಕ್ಕೆ ಯಾವ ಲಿಂಗವೋ ಸಮಾಸದಮೇಲೂ ಅದೇ ಲಿಂಗ ಬರುತ್ತದೆ. ದ್ವಂದ್ವದಲ್ಲಿ ಸಮಾಹಾರಕ್ಕೆ ನಪುಂಸಕತ್ವವಿಧಾನ ಮಾಡಿರುವುದರಿಂದ ಇತರೇತರಯೋಗದ್ವಂದ್ವ ಮಾತ್ರ ತೆಗೆದು ಕೊಳ್ಳಬೇಕು. ನಿಯಮಕ್ಕೋಸ್ಕರ ಈ ಸೂತ್ರ ಹೇಳಿದೆ. ಕುಕ್ಕುಟಶ್ಚ ಮಯೂರೀ ಚ ಕುಕ್ಕುಟಮಯೂರ್ಯೌ ॥ ಗಂಡುಕೋಳಿ ಮತ್ತು ಹೆಣ್ಣುನವಿಲು. ಉತ್ತರಪದ ಸ್ತ್ರೀಲಿಂಗವಾದುದರಿಂದ ತತ್ಪುರುಷವೂ ಸ್ತ್ರೀಲಿಂಗವಾಗುತ್ತದೆ. ದ್ವಿವಚನದಲ್ಲಿ ಪುಲ್ಲಿಂಗ ಸ್ತ್ರೀಲಿಂಗ ಭೇದ ತೋರದಿರುವುದರಿಂದ ಸ್ತ್ರೀಲಿಂಗವೆಂದು ತಿಳಿಸಲು ಇದೇ ಎಂದಿರು ತ್ತಾನೆ. ಮಯೂರೀ ಚ ಕುಕ್ಕುಟಶ್ಚ ಮಯೂರೀಕುಕ್ಕುಟೌ ॥ ಪರಪದ ಪುಲ್ಲಿಂಗ ವಾದುದರಿಂದ ಪುಲ್ಲಿಂಗ ಬಂದಿದೆ. ಅರ್ಧಂ ಪಿಪ್ಪಲ್ಯಾಃ ಅರ್ಧಪಿಪ್ಪಲೀ ॥ 'ಅರ್ಧಂ ನಪುಂಸಕಮ್' ಸೂತ್ರದಿಂದ ಸಮಾಸ. ಅರ್ಧಕ್ಕೆ ಪ್ರಾಧಾನ್ಯವಿರುವುದರಿಂದ ನಪುಂಸಕ ಲಿಂಗ ಪ್ರಾಪ್ತವಾದರೆ ಈ ಸೂತ್ರದಿಂದ ಪರಪದದ ಲಿಂಗ (ಸ್ತ್ರೀಲಿಂಗ). ಹೀಗೆ ತತ್ಪುರುಷದಲ್ಲಿ ಪರಪದದ ಲಿಂಗವೇ ಪ್ರಾಪ್ತವಾದಾಗ ವಾರ್ತಿಕದಿಂದ ಕೆಲವು ಕಡೆ ನಿಷೇಧ ಹೇಳುತ್ತಾನೆ. **ವಾರ್ತಿಕಾರ್ಥ**—ದ್ವಿಗು, ಪ್ರಾಪ್ತ, ಆಪನ್ನ, ಅಲಂಪೂರ್ವ, ಗತಿಸಮಾಸ ಇವುಗಳಲ್ಲಿ ಪರವಲ್ಲಿಂಗಕ್ಕೆ ಪ್ರತಿಷೇಧ ಹೇಳಬೇಕು. ದ್ವಿಗುವಿನಲ್ಲಿ—ಪಂಚಕಪಾಲಃ ಪುರೋಡಾಶಃ ॥ ಐದು ಪಾತ್ರೆಗಳಲ್ಲಿ ಸಂಸ್ಕರಿಸಲ್ಪಟ್ಟ ಹೋಮ ದ್ರವ್ಯವಿಶೇಷ. ತದ್ಧಿತಾರ್ಥದಲ್ಲಿ ಸಮಾಸ. ಇಲ್ಲಿ ಪರಪದ ನಪುಂಸಕವಾದುದರಿಂದ ಅದನ್ನು ಬಾಧಿಸಿ ವಿಶೇಷ್ಯದ ಲಿಂಗ ಬಂದಿದೆ (ವಿಶೇಷ್ಯ ಪುರೋಡಾಶ). ಪ್ರಾಪ್ತ, ಆಪನ್ನ ಶಬ್ದಗಳ ಸಮಾಸ ಇದುವರೆಗೆ ಬಾರದಿರುವುದರಿಂದ ಈಗ ಅದನ್ನು ಹೇಳು ತ್ತಾನೆ.

ಪ್ರಾಪ್ತಾಪನ್ನಗಳಿಗೆ ಸಮಾಸ ಹೇಳುವ ಸೂತ್ರ.

**೯೭೭. ಪ್ರಾಪ್ತಾಪನ್ನೇ ಚ ದ್ವಿತೀಯಯಾ ॥ ೨-೨-೪ ॥**

**ಸಮಸ್ಯೇತೇ । ಅಕಾರಶ್ಚಾನಯೋರಂತಾದೇಶಃ । ಪ್ರಾಪ್ತೋ ಜೀವಿಕಾಂ ಪ್ರಾಪ್ತಜೀವಿಕಃ । ಆಪನ್ನಜೀವಿಕಃ । ಅಲಂ ಕುಮಾರ್ಯೈ—ಅಲಂಕುಮಾರಿಃ । ಅತ ಏವ ಜ್ಞಾಪಕಾತ್ಸಮಾಸಃ । ನಿಷ್ಕೌಶಾಂಬಿಃ ॥**

ತ್ರಿಪದ ಸೂತ್ರ. **ಸೂತ್ರಾರ್ಥ**—ಪ್ರಾಪ್ತ, ಆಪನ್ನ ಶಬ್ದಗಳು ದ್ವಿತೀಯಾಂತ ಸುಬಂತದೊಡನೆ ಸಮಾಸಹೊಂದುತ್ತವೆ. ಅದು ತತ್ಪುರುಷ. ಇಲ್ಲಿ ದ್ವಿತೀಯಯಾ+ಅ ಎಂದು ಛೇದಮಾಡಿ ಅಕಾರವನ್ನೂ ವಿಧಾನ ಮಾಡುತ್ತಾರೆ. ಅಕಾರ ಅಂತಾದೇಶ

ವಾಗಿ ಬರುತ್ತದೆ ಎಂದರ್ಥ. ಪ್ರಾಪ್ತಃ+ಜೀವಿಕಾಂ=ಪ್ರಾಪ್ತಜೀವಿಕಃ। ಆಪನ್ನಃ+ಜೀವಿಕಾಂ=ಆಪನ್ನಜೀವಿಕಃ। ಪರಪದದ ಲಿಂಗ ಬರುವುದಾಗಿದ್ದರೆ ಸ್ತ್ರೀಲಿಂಗವಾಗಬೇಕಿತ್ತು. ಅನ್ಯಪದಾರ್ಥಲಿಂಗ ಬಂದಿದೆ. ಅಲಂಪೂರ್ವಕ್ಕೆ ಇದುವರೆಗೆ ಯಾವ ಉದಾಹರಣೆ ಬಂದಿಲ್ಲ. ಇಲ್ಲಿ ನಿಷೇಧ ಹೇಳಿದುದು ವ್ಯರ್ಥವಲ್ಲವೇ ಅಂದರೆ ನಿಷೇಧ ಸಾರ್ಥಕ್ಯಕ್ಕೋಸ್ಕರ ಸಮಾಸ ಕಲ್ಪನೆ ಮಾಡಿಕೊಳ್ಳಬೇಕು ಅದನ್ನೇ ತೋರಿಸುತ್ತಾನೆ. ಅಲಂ ಕುಮಾರ್ಯೈ ಅಲಂಕುಮಾರಿಃ ॥ ಪರವಲ್ಲಿಂಗಕ್ಕೆ ನಿಷೇಧ ಹೇಳಿದುದರಿಂದಲೇ ಹೀಗೆ ಸಮಾಸ ಮಾಡಬೇಕು. ಕುಮಾರೀ ಸ್ತ್ರೀಲಿಂಗವಾದುದರಿಂದ ಸ್ತ್ರೀಲಿಂಗ ಬರಬೇಕಿತ್ತು. ಈ ಹುಡುಗಿಗೆ ಯೋಗ್ಯನಾದವ. ಪುಲ್ಲಿಂಗ ಬಂದಿದೆ. ಗತಿ ಸಮಾಸಕ್ಕೆ—ಕೌಶಾಂಬ್ಯಾಃ ನಿರ್ಗತಃ ನಿಷ್ಕೌಶಾಂಬಿಃ ॥ ಸ್ತ್ರೀಲಿಂಗವನ್ನು ಬಾಧಿಸಿ ಅನ್ಯಪದಲಿಂಗ ಬಂದಿದೆ. ವಾರ್ತಿಕದಿಂದ ಸಮಾಸ.

ಅರ್ಧರ್ಚಾದಿಗೆ ಲಿಂಗನಿರ್ಣಾಯಕ ಸೂತ್ರ.

**೯೭೭. ಅರ್ಧರ್ಚಾಃ ಪುಂಸಿ ಚ ॥ ೨-೪-೩೧ ॥**

**ಅರ್ಧರ್ಚಾದಯಃ ಶಬ್ದಾಃ ಪುಂಸಿ ಕ್ಲೀಬೇ ಚ ಸ್ಯುಃ। ಅರ್ಧರ್ಚಃ। ಅರ್ಧರ್ಚಮ್। ಏವಂ ಧ್ವಜ, ತೀರ್ಥ, ಶರೀರ, ಮಂಡಪ, ಯೂಪ, ದೇಹಾಂಕುಶ, ಪಾತ್ರ, ಸೂತ್ರಾದಯಃ। ಸಾಮಾನ್ಯೇ ನಪುಂಸಕಮ್। ಮೃದು ಪಚತಿ। ಪ್ರಾತಃ ಕಮನೀಯಮ್ ॥**

ಇತಿ ತತ್ಪುರುಷಃ ॥ ೩ ॥

ದ್ವಿಪದ ಸೂತ್ರ. ಅರ್ಧರ್ಚಾಃ ಎಂದು ಬಹುವಚನ ಹೇಳಿದುದರಿಂದ ಅರ್ಧರ್ಚ ಆದಿ ಶಬ್ದಗಳೆಂದು ತಿಳಿಯುತ್ತದೆ. ಅರ್ಧರ್ಚ ಮುಂತಾದ ಶಬ್ದಗಳು ಪುಲ್ಲಿಂಗದಲ್ಲಿಯೂ ನಪುಂಸಕಲಿಂಗದಲ್ಲಿಯೂ ಇರುತ್ತವೆ. ಋಚಃ+ಅರ್ಧಮ್. 'ಅರ್ಧಂ ನಪುಂಸಕಮ್' ಸೂತ್ರದಿಂದ ಏಕದೇಶಿಸಮಾಸ. 'ಋಕ್‌ಪೂರಬ್ಧೂಃ ಪಥಾಮಾನಕ್ಷೇ' ಸೂತ್ರದಿಂದ ಸಮಾಸಾಂತ ಅಚ್‌ಪ್ರತ್ಯಯ. ಅರ್ಧರ್ಚಃ, ಅರ್ಧರ್ಚಮ್. ಹೀಗೆಯೇ ಅರ್ಧರ್ಚಾದಿಗಳಲ್ಲಿ ಧ್ವಜ, ತೀರ್ಥ, ಶರೀರ, ಮಂಡಪ, ಯೂಪ, ದೇಹ, ಅಂಕುಶ, ಪಾತ್ರ, ಸೂತ್ರ ಮುಂತಾದ ಶಬ್ದಗಳು ಸೇರಿವೆ. ಇವೆಲ್ಲಾ ಶಬ್ದಗಳಿಗೂ ಎರಡು ಲಿಂಗಗಳು ಬರುತ್ತವೆ. ಸಾಮಾನ್ಯೇ ಇತಿ ॥ ಎಲ್ಲಿ ವಿಶೇಷರೂಪದಿಂದ ಲಿಂಗವಿಶೇಷಕ್ಕೆ ಭಾನವಿಲ್ಲವೋ (ಹೇಳಬೇಕೆಂದು ತಾತ್ಪರ್ಯವಿಲ್ಲವೋ) ಅದು ಸಾಮಾನ್ಯ. ಆಗ ನಪುಂಸಕಲಿಂಗ ಬರುತ್ತದೆ. ಮೃದು ಪಚತಿ ॥ ಮೃದು ಎಂಬಲ್ಲಿ ಲಿಂಗವಿಶೇಷಕ್ಕೆ ವಿವಕ್ಷಾ ಇಲ್ಲದಿರುವುದರಿಂದ ನಪುಂಸಕಲಿಂಗ ಬಂದಿದೆ. ಹಾಗೇ ಪ್ರಾತಃ ಕಮನೀಯಮ್ ಎಂಬಲ್ಲಿಯೂ ನಪುಂಸಕ ಬಂದಿದೆ. ಹೀಗೆ ಎಲ್ಲಿ ಲಿಂಗವಿಶೇಷಕ್ಕೆ ಭಾನವಿಲ್ಲವೋ ಅಲ್ಲಿ ನಪುಂಸಕಲಿಂಗ ಬರುತ್ತದೆ.

ತತ್ಪುರುಷಸಮಾಸ ಮುಗಿದಿದೆ ॥ ೩.॥

# ೨೦. ಅಥ ಬಹುವ್ರೀಹಿಃ

ಬಹುವ್ರೀಹಿ ಅಧಿಕಾರ ಹೇಳುವ ಸೂತ್ರ.

**೯೭೮. ಶೇಷೋ ಬಹುವ್ರೀಹಿಃ || ೨-೨-೨೩ ||**

**ಅಧಿಕಾರೋಽಯಂ ಪ್ರಾಗ್ದ್ವಂದ್ವಾತ್ ||**

ಶೇಷಃ, ಬಹುವ್ರೀಹಿಃ || ಅಧಿಕಾರಸೂತ್ರ. 'ಚಾರ್ಥೇ ದ್ವಂದ್ವಃ' ಸೂತ್ರದ ವರೆಗೆ ಈ ಸೂತ್ರಕ್ಕೆ ವ್ಯಾಪ್ತಿ ಹೇಳಿ ಉಳಿದದ್ದು ಶೇಷ. ಹಿಂದೆ ದ್ವಿತೀಯಾ, ತೃತೀಯಾ, ಚತುರ್ಥೀ, ಷಷ್ಠೀ, ಸಪ್ತಮೀ ಉಕ್ತವಾಗಿವೆ. ಉಳಿದದ್ದು ಪ್ರಥಮಾ. ವಿಶೇಷಣ ಸಮಾಸ ಪ್ರಥಮಾಂತಕ್ಕೆ ಹೇಳಿದರೂ ಪ್ರಥಮಾ ಎಂದು ಹೇಳಿ ಹಿಂದೆ ಸಮಾಸ ವಿಹಿತ ವಾಗಿಲ್ಲ. ಆದುದರಿಂದ ಪ್ರಥಮಾಂತಪದಗಳಿಗೆ ಬಹುವ್ರೀಹಿ ಎಂದು ತಾತ್ಪರ್ಯ.

ಅನೇಕ ಪ್ರಥಮಾಂತಗಳಿಗೆ ಬಹುವ್ರೀಹಿ ಹೇಳುವ ಸೂತ್ರ.

**೯೭೯. ಅನೇಕಮನ್ಯಪದಾರ್ಥೇ || ೨-೨-೨೪ ||**

**ಅನೇಕಂ ಪ್ರಥಮಾಂತಮನ್ಯಸ್ಯ ಪದಸ್ಯಾರ್ಥೇ ವರ್ತಮಾನಂ ವಾ ಸಮಸ್ಯತೇ ಸ ಬಹುವ್ರೀಹಿಃ ||**

ಅನೇಕಂ, ಅನ್ಯಪದಾರ್ಥೇ || ದ್ವಿಪದ ಸೂತ್ರ. **ಸೂತ್ರಾರ್ಥ**—ಅನ್ಯಪದಾರ್ಥ ವನ್ನು ಹೇಳುವ ಅನೇಕ ಪ್ರಥಮಾಂತಪದಗಳು ವಿಕಲ್ಪವಾಗಿ ಸಮಾಸಹೊಂದುತ್ತವೆ; ಅದು ಬಹುವ್ರೀಹಿ. ಅಪ್ರಥಮಾವಿಭಕ್ತ್ಯರ್ಥ ತೋರುವಾಗ ಅನೇಕ ಸಮಾನಾಧಿಕರಣ ಪ್ರಥಮಾಂತಪದಗಳಿಗೆ ಬಹುವ್ರೀಹಿ ಸಮಾಸವೆಂದು ತಿಳಿಯಬೇಕು. ಉದಾಹರಣೆ ಯನ್ನು ಮುಂದೆ ತೋರಿಸುತ್ತಾನೆ. ಪ್ರಸಂಗ ಸಂಗತಿಯಿಂದ ಪೂರ್ವಪ್ರಯೋಗ ನಿಯಮವನ್ನು ಹೇಳುತ್ತಾನೆ.

ಸಪ್ತಮೀವಿಶೇಷಣಕ್ಕೆ ಪೂರ್ವಪ್ರಯೋಗ ಹೇಳುವ ಸೂತ್ರ.

**೯೮೦. ಸಪ್ತಮೀವಿಶೇಷಣೇ ಬಹುವ್ರೀಹೌ || ೨-೨-೩೫ ||**

**ಸಪ್ತಮ್ಯಂತಂ ವಿಶೇಷಣಂ ಚ ಬಹುವ್ರೀಹೌ ಪೂರ್ವಂ ಸ್ಯಾತ್ | ಅತ ಏವ ಜ್ಞಾಪಕಾತ್ ವ್ಯಧಿಕರಣಪದೋ ಬಹುವ್ರೀಹಿಃ ||**

ದ್ವಿಪದ ಸೂತ್ರ. ಸಪ್ತಮೀ ಚ ವಿಶೇಷಣಂ ಚ ಸಪ್ತಮೀವಿಶೇಷಣೇ. ಸಪ್ತಮೀ ಪ್ರತ್ಯಯವಾದುದರಿಂದ ತದಂತಗ್ರಹಣ. 'ಉಪಸರ್ಜನಂ ಪೂರ್ವಮ್' ಸೂತ್ರದಿಂದ 'ಪೂರ್ವಂ' ಅನುವೃತ್ತಿ. **ಸೂತ್ರಾರ್ಥ**—ಸಪ್ತಮ್ಯಂತಪದವೂ, ವಿಶೇಷಣವೂ ಬಹುವ್ರೀಹಿ ಸಮಾಸದಲ್ಲಿ ಪೂರ್ವಪ್ರಯೋಗವನ್ನು ಹೊಂದುತ್ತದೆ. ಬಹುವ್ರೀಹಿಯಲ್ಲಿ

ಪ್ರಥಮಾಂತ ಪದಗಳಿಗೇ ಸಮಾಸವೆಂದು ಹಿಂದೆ ಹೇಳಿದೆ. ಸಪ್ತಮ್ಯಂತಕ್ಕೆ ಬಹುವ್ರೀಹಿಯೇ ಇಲ್ಲದಿರುವಾಗ ಪೂರ್ವಪ್ರಯೋಗ ನಿಯಮವಾದರೂ ವ್ಯರ್ಥವಲ್ಲವೇ? ಅಂದರೆ ಈ ಸೂತ್ರದಲ್ಲಿ ಸಪ್ತಮ್ಯಂತಕ್ಕೆ ಪೂರ್ವಪ್ರಯೋಗ ನಿಯಮಮಾಡಿದುದರಿಂದಲೇ ಕೆಲವು ಕಡೆ ವ್ಯಧಿಕರಣಪದಬಹುವ್ರೀಹಿ ಇದೆಯೆಂದು ಜ್ಞಾಪಿತವಾಗುತ್ತದೆ. ಭಿನ್ನವಿಭಕ್ತ್ಯಂತಗಳಿಗೆ ಸಮಾಸ ಬಂದರೆ ಅದಕ್ಕೆ ವ್ಯಧಿಕರಣಪದಬಹುವ್ರೀಹಿಯೆಂದು ಹೆಸರು. ಈ ಸಪ್ತಮೀಪದವೇ ವ್ಯಧಿಕರಣಪದಬಹುವ್ರೀಹಿಯನ್ನು ತಿಳಿಸಿಕೊಡುತ್ತದೆ. ಕಂಠೇ ಕಾಲಃ ಯಸ್ಯ ಸಃ॥ ಕುತ್ತಿಗೆಯಲ್ಲಿ ಕಪ್ಪು ಉಳ್ಳವನು. ಕಂಠ + ಙಿ + ಕಾಲ + ಸು. ಸುಪ್‌ಲುಕ್ ಪ್ರಾಪ್ತವಾದರೆ ಸಪ್ತಮಿಗೆ ಮಾತ್ರ ಅಲುಕ್ ಹೇಳುತ್ತಾನೆ.

ಸಪ್ತಮಿಗೆ ಅಲುಕ್ ಹೇಳುವ ಸೂತ್ರ.

**೯೭೮. ಹಲದಂತಾತ್ ಸಪ್ತಮ್ಯಾಃ ಸಂಜ್ಞಾಯಾಮ್ ॥ ೬-೩-೯ ॥**

**ಹಲಂತಾದದಂತಾಚ್ಚ ಸಪ್ತಮ್ಯಾ ಅಲುಕ್। ಕಂಠೇಕಾಲಃ। ಪ್ರಾಪ್ತ-ಮುದಕಂ ಯಂ ಸಃ ಪ್ರಾಪ್ತೋದಕೋ ಗ್ರಾಮಃ। ಊಢರಥೋಽನಡ್ವಾನ್। ಉಪಹೃತಪಶೂ ರುದ್ರಃ। ಉದ್ಧೃತೌದನಾ ಸ್ಥಾಲೀ। ಪೀತಾಂಬರೋ ಹರಿಃ। ವೀರಪುರುಷಕೋ ಗ್ರಾಮಃ।**

ತ್ರಿಪದ ಸೂತ್ರ. **ಸೂತ್ರಾರ್ಥ**—ಹಲಂತದ ಪರದಲ್ಲಿರುವ, ಹ್ರಸ್ವಾಕಾರಾಂತದ ಪರದಲ್ಲಿರುವ ಸಪ್ತಮಿಗೆ ಸಂಜ್ಞಾ ತೋರುತ್ತಿರುವಾಗ ಅಲುಕ್ ಬರುತ್ತದೆ. ಪ್ರಕೃತ ಕಂಠ ಅದಂತವಾಗಿ ಅದರ ಪರದಲ್ಲಿ ಸಪ್ತಮೀ ಬಂದಿದೆ. ಈಶ್ವರನಿಗೆ ಸಂಜ್ಞೆಯಾದುದರಿಂದ ಸಪ್ತಮಿಗೆ ಅಲುಕ್ ಬಂದರೆ ಕಂಠೇಕಾಲಃ ಎಂದಾಗುತ್ತದೆ. ಇನ್ನುಮುಂದೆ 'ಅನೇಕಮನ್ಯಪದಾರ್ಥೇ' ಸೂತ್ರಕ್ಕೆ ಉದಾಹರಣೆ ತೋರಿಸುತ್ತಾನೆ. ಅಲ್ಲಿ ಈ ತಾತ್ಪರ್ಯಾಂಶವನ್ನು ಮೊದಲು ತಿಳಿಯಬೇಕು. ಅನೇಕ ಪ್ರಥಮಾಂತಗಳಿಗೆ ದ್ವಿತೀಯಾದಿಸಪ್ತಮ್ಯಂತಾರ್ಥವು ಅನ್ಯಪದಾರ್ಥವಾಗಿ ತೋರುವಾಗ ಬಹುವ್ರೀಹಿ. ಅನ್ಯಪದಾರ್ಥ ದ್ವಿತೀಯಾದಿ ಷಷ್ಠ್ಯಂತವಾಗಿದ್ದರೆ ಆಗ ಅಲ್ಲಿ ಕರ್ತೃಕರ್ಮಪ್ರತ್ಯಯಾಂತ ಸುಬಂತದೊಡನೆ ಸಮಾಸ. ಷಷ್ಠೀಸಪ್ತಮ್ಯಂತಾರ್ಥದಲ್ಲಿ ಈ ನಿಯಮವಿಲ್ಲ. ಮತುಪ್ ಪ್ರತ್ಯಯಾರ್ಥದಲ್ಲಿ (ಉಳ್ಳದ್ದು) ಸಮಾಸ. ಕರ್ಮಾದ್ಯರ್ಥದಲ್ಲಿ ಬಹುವ್ರೀಹಿ ಬಂದಾಗ ಸಮಾಸದಿಂದ ಅಭಿಹಿತವಾದುದರಿಂದ ಅನಭಿಹಿತಕರ್ಮಾದಿಗಳು ಇಲ್ಲದಿರುವುದರಿಂದ ದ್ವಿತೀಯಾದಿವಿಭಕ್ತಿ ಬರುವುದಿಲ್ಲ. 'ಅಭಿಹಿತೇ ಪ್ರಥಮಾ' ಎಂದುದರಿಂದ ಪ್ರಥಮಾ ವಿಭಕ್ತಿಯೇ ಬರುತ್ತದೆ. ಕ್ರಮವಾಗಿ ಉದಾಹರಣೆ. ಪ್ರಾಪ್ತಂ ಉದಕಂ ಯಂ ಸಃ ಪ್ರಾಪ್ತೋದಕೋ ಗ್ರಾಮಃ॥ ನೀರು ಯಾವ ಗ್ರಾಮವನ್ನು ಹೊಂದಿದೆಯೋ ಅದು. ಕರ್ತ್ರರ್ಥದಲ್ಲಿ ಕ್ತಪ್ರತ್ಯಯ. ಊಢಃ ರಥಃ ಯೇನ ಸಃ ಊಢರಥಃ = ಅನಡ್ವಾನ್॥ ಯಾರಿಂದ ರಥವು ಎಳೆಯಲ್ಪಟ್ಟಿದೆಯೋ ಅದು ಊಢರಥ = ಎತ್ತು. ಕರ್ಮಾರ್ಥದಲ್ಲಿ

ಕ್ತಪ್ರತ್ಯಯ. ಉಪಹೃತಃ ಪಶುಃ ಯಸ್ಮೈ ಸಃ ಉಪಹೃತಪಶುಃ=ರುದ್ರಃ || ಯಾರಿಗೋಸ್ಕರ ಪಶುವು ಸಮರ್ಪಿಸಲ್ಪಟ್ಟಿದೆಯೋ ಅವನು ಉಪಹೃತಪಶು=ರುದ್ರ. ಕರ್ಮಾರ್ಥದಲ್ಲಿ ಕ್ತಪ್ರತ್ಯಯ. ಉದ್ಧೃತಂ ಓದನಂ ಯಸ್ಯಾಃ ಸಾ || ಯಾವುದರ ದೆಸೆಯಿಂದ ಅನ್ನವು ಎತ್ತಲ್ಪಟ್ಟಿದೆಯೋ ಅದು ಉದ್ಧೃತೋದನಾ=ತಪ್ಪಲೆ. ಇಲ್ಲಿಯೂ ಕರ್ಮಾರ್ಥದಲ್ಲಿ ಕ್ತಪ್ರತ್ಯಯ. ಪೀತಂ ಅಂಬರಂ ಯಸ್ಯ ಸಃ || ಹಳದಿ ಬಟ್ಟೆಯು ಯಾರಿಗಿದೆಯೋ ಅವನು ಪೀತಾಂಬರ. ಇಲ್ಲಿ ಕರ್ಮಕರ್ತೃನಿಯಮವಿಲ್ಲ. ವೀರಾಃ ಪುರುಷಾಃ ಯಸ್ಮಿನ್ ಸಃ || ವೀರರಾದ ಪುರುಷರು ಎಲ್ಲಿ ಇರುವರೋ ಅದು ವೀರಪುರುಷಕ=ಗ್ರಾಮ. ಸ್ವಾರ್ಥದಲ್ಲಿ ಕಪ್ ಪ್ರತ್ಯಯ ಬಂದಿದೆ. ಹೀಗೆ ಯಂ, ಯೇನ, ಯಸ್ಮೈ, ಯಸ್ಮಾತ್, ಯಸ್ಮಿನ್ ಎಂದು ದ್ವಿತೀಯಾದಿ ಸಪ್ತಮ್ಯಂತಾರ್ಥ ಗಳಲ್ಲಿ ಅನೇಕ ಪ್ರಥಮಾಂತಗಳಿಗೆ ಸಮಾಸ ಬರುತ್ತದೆ. ಈಗ ಈ ಸೂತ್ರದಲ್ಲಿ ಹೇಳಿದ ಕೆಲವು ವಾರ್ತಿಕಗಳನ್ನು ವಿವರಿಸುತ್ತಾನೆ.

**ವಾ || (ಪ್ರಾದಿಭ್ಯೋ ಧಾತುಜಸ್ಯ ವಾಚ್ಯೋ ವಾ ಚೋತ್ತರಪದಲೋಪಃ)**
**ಪ್ರಪತಿತಪರ್ಣಃ ಪ್ರಪರ್ಣಃ ||**

**ವಾ || (ನಞೋಽಸ್ತ್ಯರ್ಥಾನಾಂ ವಾಚ್ಯೋ ವಾ ಚೋತ್ತರಪದಲೋಪಃ)**
**ಅವಿದ್ಯಮಾನಃ ಪುತ್ರಃ ಅಪುತ್ರಃ ||**

ಪ್ರಾದಿಗಳಿಗಿಂತ ಪರದಲ್ಲಿ ಧಾತುವಿನಿಂದುಂಟಾದ ಪದವೇ ಪ್ರಕೃತಿಯಾಗಿರುವ ಯಾವ ಪ್ರಥಮಾಂತವಿದೆಯೋ ಅದೇ ಅಂತವಾದ ಸುಬಂತವು ಇತರ ಸುಬಂತ ಗಳೊಡನೆ ಬಹುವ್ರೀಹಿ ಸಮಾಸ ಹೊಂದುತ್ತದೆ. ಅಲ್ಲಿ ಪೂರ್ವಪದಾಂತರ್ಗತವಾದ ಉತ್ತರಪದಕ್ಕೆ (ಧಾತುಜಕ್ಕೆ) ವಿಕಲ್ಪವಾಗಿ ಲೋಪಬರುತ್ತದೆ. ಪ್ರಾದಿಗಳ ಪರದಲ್ಲಿರುವ ಧಾತುಜನ್ಯಪದಕ್ಕೆ ವಿಕಲ್ಪಲೋಪವೆಂದರ್ಥ. ಪ್ರಕೃಷ್ಟಂ ಪತಿತಂ ಪ್ರಪತಿತಮ್ || 'ಪ್ರಾದಯಃ ಗತಾದ್ಯರ್ಥೇ—' ವಾರ್ತಿಕದಿಂದ ಸಮಾಸ. ಪ್ರಪತಿತಂ ಪರ್ಣಂ ಯಸ್ಮಾತ್ ಸಃ ಎಂದಿರುವಾಗ ಈ ವಾರ್ತಿಕದಿಂದ ಸಮಾಸ. ಪ್ರಾದಿಗಳ ಪರದಲ್ಲಿ ಪತಿತ ಶಬ್ದವಿದೆ. ಇದು ಧಾತುಜ. ಪತ್ಲೃ ಧಾತುವಿಗೆ ಕ್ತಪ್ರತ್ಯಯ ಬಂದಿದೆ. ಇಲ್ಲಿ ಪತಿತ ಶಬ್ದಕ್ಕೆ ಲೋಪಬಂದರೆ ಪ್ರಪರ್ಣಃ ಎಂದೂ ಬಾರದಿದ್ದರೆ ಪ್ರಪತಿತಪರ್ಣಃ ಎಂದೂ ಆಗುತ್ತದೆ.

ನಞಿನ ಪರದಲ್ಲಿ ಯಾವ ಅಸ್ತ್ಯರ್ಥವಾಚಿ (ಇದೆಯೆಂದು ಹೇಳುವ) ಪದವಿದೆಯೋ ಅದೇ ಅಂತವಾದ ಪದವು ಪದಾಂತರದೊಡನೆ ಬಹುವ್ರೀಹಿ ಸಮಾಸವನ್ನು ಹೊಂದು ತ್ತದೆ. ಅಸ್ತ್ಯರ್ಥವಾಚಿಪದಕ್ಕೆ ವಿಕಲ್ಪಲೋಪ ಬರುತ್ತದೆ. ನ ವಿದ್ಯಮಾನಃ ಅವಿದ್ಯ ಮಾನಃ || ನಞ್ತತ್ಪುರುಷ. ಅವಿದ್ಯಮಾನಃ ಪುತ್ರಃ ಯಸ್ಯ ಸಃ ಅಪುತ್ರಃ || ಇಲ್ಲಿ ಅಸ್ತ್ಯರ್ಥವಾಚಕ ವಿದ್ಯಮಾನಪದ. ಅದಕ್ಕೆ ವಿಕಲ್ಪಲೋಪ. ಲೋಪ ಬಾರ

ದಿದ್ದರೆ ಅವಿದ್ಯಮಾನಪುತ್ರಃ ಎಂದೇ ಆಗುತ್ತದೆ. ಇಲ್ಲಿ 'ಅನೇಕಮನ್ಯಪದಾರ್ಥೇ' ಸೂತ್ರದಿಂದ ಸಮಾಸ ಬಂದರೂ ವಿಕಲ್ಪವಾಗಿ ಉತ್ತರಪದಲೋಪವು ಅದರಿಂದ ಸಿದ್ಧ ವಾಗಲಾರದು. ಅದಕ್ಕೋಸ್ಕರ ಇವು ಆರಬ್ಧವಾಗಿವೆ.

ಬಹುವ್ರೀಹಿಯಲ್ಲಿ ಪುಂವದ್ಭಾವ ಹೇಳುವ ಸೂತ್ರ.

೯೭೨. ಪುಂವದ್ಭಾಷಿತಪುಂಸ್ಕಾದನೂಙ್ ಸಮಾನಾಧಿಕರಣೇ
ಸ್ತ್ರಿಯಾಮಪೂರಣೀಪ್ರಿಯಾದಿಷು ॥ ೬-೩-೩೪ ॥

**ಉಕ್ತಪುಂಸ್ಕಾದನೂಙ್ ಊಙಃೋऽಭಾವೋऽಸ್ಯಾಮಿತಿ ಬಹುವ್ರೀಹಿಃ। ನಿಪಾತನಾತ್ ಪಂಚಮ್ಯಾ ಅಲುಕ್ ಷಷ್ಠ್ಯಾಶ್ಚ ಲುಕ್। ತುಲ್ಯೇ ಪ್ರವೃತ್ತಿನಿಮಿತ್ತೇ ಯದುಕ್ತಪುಂಸ್ಕಂ ತಸ್ಮಾತ್ಪರ ಊಙಃೋऽಭಾವೋ ಯತ್ರ ತಥಾಭೂತಸ್ಯ ಸ್ತ್ರೀವಾಚಕಶಬ್ದಸ್ಯ ಪುಂವಾಚಕಸ್ಯೇವ ರೂಪಂ ಸ್ಯಾತ್ ಸಮಾನಾಧಿಕರಣೇ ಸ್ತ್ರೀಲಿಂಗೇ ಉತ್ತರಪದೇ ನ ತು ಪೂರಣ್ಯಾಂ ಪ್ರಿಯಾದೌ ಚ ಪರತಃ। ಗೋಸ್ತ್ರಿಯೋರಿತಿ ಹ್ರಸ್ವಃ। ಚಿತ್ರಗುಃ। ರೂಪವದ್ಭಾರ್ಯಃ। ಅನೂಙ್ ಕಿಮ್? ವಾಮೋರುಭಾರ್ಯಃ। ಪೂರಣ್ಯಾಂ ತು॥**

ಸ್ತ್ರಿಯಾಂ, ಪುಂವತ್, ಭಾಷಿತಪುಂಸ್ಕಾದನೂಙ್, ಸಮಾನಾಧಿಕರಣೇ, ಸ್ತ್ರಿಯಾಂ, ಅಪೂರಣೀಪ್ರಿಯಾದಿಷು ॥ ಆರು ಪದಗಳುಳ್ಳ ಸೂತ್ರ. ಭಾಷಿತಪುಂಸ್ಕಾದನೂಙ್ ಲುಪ್ತಷಷ್ಠ್ಯೇಕಪದ. ಸೌತ್ರವಾಗಿ ಷಷ್ಠಿಗೆ ಲುಕ್ ಬಂದಿದೆ. 'ಸ್ತ್ರಿಯಾಃ' ಎಂಬುದಕ್ಕೆ ವಿಶೇಷಣ. ಭಾಷಿತಃ ಪುಮಾನ್ ಯೇನ. ಭಾಷಿತಪುಂಸ್ಕಮ್. ಭಾಷಿತಪುಂಸ್ಕಾತ್ ಪರಃ ಅನೂಙ್ ಅಸ್ಯಾಮಿತಿ ಭಾಷಿತಪುಂಸ್ಕಾದನೂಙ್. ಪಂಚಮಿಗೆ ಸೂತ್ರದಲ್ಲಿ ಹಾಗೆ ನಿಪಾತಮಾಡಿರುವುದರಿಂದ ಲುಕ್ ಬರುವುದಿಲ್ಲ. ಯಾವ ಸ್ತ್ರೀವಾಚಕ ಶಬ್ದವು ಪುಲ್ಲಿಂಗವನ್ನೂ ಹೇಳುವುದೋ, ಅದರ ಮೇಲೆ ಊಙ್ ಬರಲಿಲ್ಲವೋ ಅದು ಭಾಷಿತಪುಂಸ್ಕಾದನೂಙ್. **ಸೂತ್ರಾರ್ಥ**—ಸಮಾನಾಧಿಕರಣವಾದ ಸ್ತ್ರೀಲಿಂಗವಾಚಕಪದವು ಉತ್ತರಪದವಾಗಿರುವಾಗ, ಸ್ತ್ರೀಲಿಂಗ-ಪುಲ್ಲಿಂಗಗಳಲ್ಲಿ ಒಂದೇ ಪ್ರವೃತ್ತಿನಿಮಿತ್ತವಾಗಿ ಪುಲ್ಲಿಂಗವನ್ನೂ ಹೇಳುವ, ಊಙ್ ಹೊಂದದಿರುವ ಯಾವ ಸ್ತ್ರೀಲಿಂಗವಾಚಕಪದವಿದೆಯೋ ಅದಕ್ಕೆ ಪುಲ್ಲಿಂಗವಾಚಕ ಶಬ್ದದಂತೇ ರೂಪ ಬರುತ್ತದೆ; ಪೂರಣಾರ್ಥಕಪ್ರತ್ಯಯಾಂತ ಸ್ತ್ರೀಲಿಂಗಪದವೂ, ಪ್ರಿಯಾದಿಗಳೂ ಪರವಾಗಿದ್ದರೆ ಬರುವುದಿಲ್ಲ. ಚಿತ್ರಾಃ ಗಾವಃ ಯಸ್ಯ ಸಃ ॥ ಚಿತ್ರಾ + ಜಸ್ + ಗೋ + ಜಸ್. ಸುಬ್ ಲುಕ್ಕಾದಾಗ ಚಿತ್ರಾಗೋ ಎಂದಿರುತ್ತದೆ. ಇಲ್ಲಿ ಚಿತ್ರಾ ಪದವು ಸ್ತ್ರೀಲಿಂಗವಾಗಿದೆ. ಚಿತ್ರತ್ವ ಅಂದರೆ ನಾನಾಬಣ್ಣವಿರುವಿಕೆ, ಇದು ಪುಲ್ಲಿಂಗದಲ್ಲಿಯೂ ಸ್ತ್ರೀಲಿಂಗದಲ್ಲಿಯೂ ಒಂದೇ ಆದುದರಿಂದ ಪ್ರವೃತ್ತಿನಿಮಿತ್ತ ಒಂದೇ ಆಯಿತು. ಶಬ್ದಕ್ಕೆ ಅರ್ಥದಲ್ಲಿ ಪ್ರವೃತ್ತಿ ಬರಲು ಯಾವುದು ನಿಮಿತ್ತವೋ ಅದು ಪ್ರವೃತ್ತಿನಿಮಿತ್ತ. ಗೋ ಶಬ್ದ

ಹಸುವಿನಲ್ಲಿ ಹೇಳಲು ಗೋತ್ವ ಪ್ರವೃತ್ತಿನಿಮಿತ್ತ. ಹಾಗೆ ಇಲ್ಲಿ ಚಿತ್ರತ್ವ ಪ್ರವೃತ್ತಿ ನಿಮಿತ್ತ. ಚಿತ್ರಃ ಎಂದು ಪುಲ್ಲಿಂಗದಲ್ಲಿಯೂ ಪ್ರಯೋಗವಿದೆ. ಉಕ್ತಪುಂಸ್ಕವಾದ ಇದರ ಮೇಲೆ ಊಙ್ ಬರಲಿಲ್ಲ. ಪೂರಣೀಪ್ರಿಯಾದಿಗಳೂ ಉತ್ತರಪದವಾಗಿಲ್ಲ. ಗೋ ಎಂಬ ಸ್ತ್ರೀವಾಚಕಪದ ಉತ್ತರಪದವಾಗಿರುವುದರಿಂದ ಪುಲ್ಲಿಂಗದಂತೆ ರೂಪ ಬಂದರೆ ಟಾಪ್ ಹೋಗಿ ಹ್ರಸ್ವ ಬಂದು ಚಿತ್ರಗೋ ಎಂದಾಗುತ್ತದೆ. 'ಗೋಸ್ತ್ರಿಯೋ ರುಪಸರ್ಜನಸ್ಯ' ಸೂತ್ರದಿಂದ ಗೋ ಶಬ್ದಕ್ಕೆ ಹ್ರಸ್ವ (ಉ). ಚಿತ್ರಗುಃ | ರೂಪವತೀ ಭಾರ್ಯಾ ಯಸ್ಯ ಸಃ || ರೂಪವತೀ + ಸು + ಭಾರ್ಯಾ + ಸು. ರೂಪವತೀಭಾರ್ಯಾ. ರೂಪವಿರುವಿಕೆ ಪ್ರವೃತ್ತಿನಿಮಿತ್ತ. ರೂಪವಾನ್ ಪತಿಃ ಎಂದು ಪುಲ್ಲಿಂಗದಲ್ಲಿಯೂ ಪ್ರಯೋಗವಿದೆ. ಪುಂವದ್ಭಾವ ಬಂದರೆ ಙೀಪ್ ಹೋಗಿ ರೂಪವದ್ಭಾರ್ಯಾ ಎಂದಾಗಿ ಹಿಂದಿನಂತೆ ಉಪಸರ್ಜನಸ್ತ್ರೀಪ್ರತ್ಯಯಾಂತವಾದುದರಿಂದ ಹ್ರಸ್ವ ಬಂದು ರೂಪವ ದ್ಭಾರ್ಯಃ ಎಂದಾಗುತ್ತದೆ. ಸ್ತ್ರೀವಾಚಕಶಬ್ದದಮೇಲೆ ಊಙ್ ಬಂದಿರಬಾರದೆಂದು ಹೇಳಿದುದರಿಂದ ವಾಮೋರೂಭಾರ್ಯಃ ಎಂಬಲ್ಲಿ ಪುಂವದ್ಭಾವ ಬರುವುದಿಲ್ಲ. ವಾಮೋ ರೂಭಾರ್ಯಾ ಯಸ್ಯ ಸಃ=ಸುಂದರವಾದ ತೊಡೆಯುಳ್ಳ ಹೆಂಡತಿಯುಳ್ಳವ. 'ಸಂಹಿತ ಶಫಲಕ್ಷಣವಾಮಾದೇಶ್ಚ' ಸೂತ್ರದಿಂದ ಊರು ಶಬ್ದದಮೇಲೆ ಊಙ್ ಬಂದಿದೆ. ವಾಮೌ ಸುಂದರೌ ಊರೂ ಯಸ್ಯಾ ಸಾ ವಾಮೋರೂಃ || ಉಕ್ತಪುಂಸ್ಕವಾದರೂ ಊಙ್ ಬಂದುದರಿಂದ ಪುಂವದ್ಭಾವ ಬರುವುದಿಲ್ಲ. ಪೂರಣಾರ್ಥಕಪ್ರತ್ಯಯಾಂತಪದ ಪರದಲ್ಲಿರುವಾಗ ಅಪ್ ಸಮಾಸಾಂತಪ್ರತ್ಯಯ ಹೇಳುತ್ತಾನೆ.

ಬಹುವ್ರೀಹಿಯಲ್ಲಿ ಅಪ್ ಪ್ರತ್ಯಯ ಹೇಳುವ ಸೂತ್ರ.

**೯೭೩. ಅಪ್ ಪೂರಣೀಪ್ರಮಾಣ್ಯೋಃ || ೫-೪-೧೧೬ ||**

**ಪೂರಣಾರ್ಥಪ್ರತ್ಯಯಾನ್ತಂ ಯತ್ ಸ್ತ್ರೀಲಿಂಗಂ ತದಂತಾತ್ಪ್ರಮಾಣ್ಯ-ನ್ತಾಚ್ಚ ಬಹುವ್ರೀಹೇರಪ್ ಸ್ಯಾತ್ || ಕಲ್ಯಾಣೀ ಪಂಚಮೀ ಯಾಸಾಂ ರಾತ್ರೀಣಾಂ ತಾಃ ಕಲ್ಯಾಣೀಪಂಚಮಾಃ ರಾತ್ರಯಃ | ಸ್ತ್ರೀ ಪ್ರಮಾಣೀ ಯಸ್ಯ ಸಃ ಸ್ತ್ರೀಪ್ರಮಾಣಃ | ಅಪ್ರಿಯಾದಿಷು ಕಿಮ್ ? ಕಲ್ಯಾಣೀಪ್ರಿಯಃ ಇತ್ಯಾದಿ ||**

ಅಪ್, ಪೂರಣೀಪ್ರಮಾಣ್ಯೋಃ || ದ್ವಿಪದ ಸೂತ್ರ. 'ಬಹುವ್ರೀಹೌ ಸಕ್ಥ್ಯಕ್ಷ್ಣೋಃ—' ಸೂತ್ರದಿಂದ 'ಬಹುವ್ರೀಹೌ' ಅನುವೃತ್ತವಾಗಿ ಪಂಚಮ್ಯಂತವಾಗಿ ವಿಪರಿಣತವಾಗುತ್ತದೆ. 'ಪೂರಣೀಪ್ರಮಾಣ್ಯೋಃ' ಅದಕ್ಕೆ ವಿಶೇಷಣ. ತದಂತಲಾಭ. ಪೂರಣೀ ಎಂದು ಸ್ತ್ರೀಲಿಂಗ ಹೇಳಿದುದರಿಂದ ಪೂರಣಪ್ರತ್ಯಯಾಂತವಾದ ಸ್ತ್ರೀಲಿಂಗ ಪದವು ಇಲ್ಲಿ ವಿವಕ್ಷಿತವಾಗಿದೆ. ಸೂತ್ರಾರ್ಥ—ಪೂರಣಾರ್ಥಪ್ರತ್ಯಯಾನ್ತವಾದ ಸ್ತ್ರೀಲಿಂಗವಾಚಕಪದವೇ ಅಂತವಾದ ಬಹುವ್ರೀಹಿಗೂ, ಪ್ರಮಾಣೀಪದಾಂತಬಹು

ವ್ರೀಹಿಗೂ ಅಪ್ ಸಮಾಸಾಂತವಾಗಿ ಬರುತ್ತದೆ. ಉದಾ.—ಕಲ್ಯಾಣೀ ಪಂಚಮೀ ಯಾಸಾಂ ರಾತ್ರೀಣಾಂ ತಾಃ ಕಲ್ಯಾಣೀಪಂಚಮಾ ರಾತ್ರಯಃ ಎಂಬ ವಿಗ್ರಹದಲ್ಲಿ ... ಮೀತಿ=ಯಾವ ರಾತ್ರಿಸಮುದಾಯದಲ್ಲಿ ಪಂಚಮೀ ರಾತ್ರಿಯು ಮಂಗಳವಿಶಿಷ್ಟವಾಗಿದೆಯೋ ಆ ರಾತ್ರಿಗಳು ಕಲ್ಯಾಣೀಪಂಚಮಗಳು. ಕಲ್ಯಾಣೀ+ಸು+ಪಂಚಮೀ+ಸು. ಕಲ್ಯಾಣೀ ಶಬ್ದ ಭಾಷಿತಪುಂಸ್ಕವಾಗಿ ಸ್ತ್ರೀಲಿಂಗವಾಚಕವಾಗಿದೆ. ಮಂಗಳವಿರುವಿಕೆ ಎರಡು ಲಿಂಗಗಳಲ್ಲಿಯೂ ಒಂದೇ ಪ್ರವೃತ್ತಿನಿಮಿತ್ತ. ಪಂಚಮೀ ಎಂಬ ಸ್ತ್ರೀಲಿಂಗ ಶಬ್ದ ಉತ್ತರಪದವಾಗಿದೆ. ಆದರೂ ಪಂಚಮೀ ಎಂಬುದು ಪೂರಣಾರ್ಥಕ ಪ್ರತ್ಯಯಾಂತ ಶಬ್ದ. 'ನಾಂತಾದಸಂಖ್ಯಾ—' ಸೂತ್ರದಿಂದ ಮಟ್ ಬಂದಿದೆ. 'ಸ್ತ್ರಿಯಾಃ ಪುಂವತ್—' ಸೂತ್ರದಿಂದ ನಿಷೇಧ ಹೇಳಿದುದರಿಂದ ಕಲ್ಯಾಣೀ ಎಂಬುದಕ್ಕೆ ಪುಂವದ್ಭಾವ ಬರುವುದಿಲ್ಲ. ಈ ಸೂತ್ರದಿಂದ ಅಪ್. ಕಲ್ಯಾಣೀಪಂಚಮೀ+ಅ. 'ಯಸ್ಯೇತಿ ಚ' ಈಕಾರಲೋಪ. ಟಾಪ್. ಕಲ್ಯಾಣೀಪಂಚಮಾಃ ॥ ಪ್ರಮಾಣೀ ಶಬ್ದಾಂತಕ್ಕೆ ಉದಾಹರಣೆ. ಸ್ತ್ರೀ ಪ್ರಮಾಣೀ ಯಸ್ಯ ಸಃ ಸ್ತ್ರೀಪ್ರಮಾಣಃ ॥ ಸ್ತ್ರೀ+ಸು+ಪ್ರಮಾಣೀ+ಸು. ಸ್ತ್ರೀಪ್ರಮಾಣೀ. ಪೂರ್ವಪದ ನಿತ್ಯಸ್ತ್ರೀಲಿಂಗವಾದುದರಿಂದ ಭಾಷಿತಪುಂಸ್ಕವಾಗದಿರುವುದರಿಂದ ಹಿಂದಿನ ಸೂತ್ರದಿಂದ ಪುಂವದ್ಭಾವ ಬರುವುದಿಲ್ಲ. ಈ ಸೂತ್ರದಿಂದ ಅಪ್ ಬಂದರೆ ಸ್ತ್ರೀಪ್ರಮಾಣೀ+ಅ ಎಂದಿರುವಾಗ ಹಿಂದಿನಂತೆ ಈಕಾರಲೋಪವಾದರೆ, ಸ್ತ್ರೀಪ್ರಮಾಣಃ । ಒಬ್ಬ ಸ್ತ್ರೀಪ್ರಮಾಣವುಳ್ಳವನು. ಪ್ರಿಯಾದಿಗಳು ಪರದಲ್ಲಿರುವಾಗಲೂ ಪುಂವದ್ಭಾವವಿಲ್ಲ. ಕಲ್ಯಾಣೀ+ಪ್ರಿಯಾ ಯಸ್ಯ ಸಃ, ಕಲ್ಯಾಣೀಪ್ರಿಯಃ ॥ ಪ್ರಿಯಾ ಶಬ್ದ ಪರದಲ್ಲಿರುವುದರಿಂದ ಕಲ್ಯಾಣೀ ಶಬ್ದಕ್ಕೆ ಪುಂವದ್ಭಾವವಿಲ್ಲ. 'ಗೋಸ್ತ್ರಿಯೋರುಪಸರ್ಜನಸ್ಯ' ಸೂತ್ರದಿಂದ ಪ್ರಿಯಾ ಶಬ್ದಕ್ಕೆ ಹ್ರಸ್ವ. ಪ್ರಿಯಾದಿಗಳನ್ನು ಗಣಪಾಠದಿಂದ ತಿಳಿಯಬೇಕು.

ಬಹುವ್ರೀಹಿಯಲ್ಲಿ ಷಚ್ ಪ್ರತ್ಯಯ ಹೇಳುವ ಸೂತ್ರ.

**೯೭೪. ಬಹುವ್ರೀಹೌ ಸಕ್ಥ್ಯಕ್ಷ್ಣೋಃ ಸ್ವಾಙ್ಗಾತ್ ಷಚ್ ॥ ೫-೪-೧೧೩ ॥**

**ಸ್ವಾಙ್ಗವಾಚಿಸಕ್ಥ್ಯಕ್ಷ್ಯನ್ತಾದ್ಬಹುವ್ರೀಹೇಃ ಷಚ್ ಸ್ಯಾತ್। ದೀರ್ಘಸಕ್ಥಃ ॥ ಜಲಜಾಕ್ಷೀ। ಸ್ವಾಂಗಾತ್ ಕಿಮ್? ದೀರ್ಘಸಕ್ಥಿ ಶಕಟಮ್। ಸ್ಥೂಲಾಕ್ಷಾ ವೇಣುಯಷ್ಟಿಃ। ಅಕ್ಷ್ಣೋಽದರ್ಶನಾದಿತಿ ವಕ್ಷ್ಯಮಾಣೋಽಚ್ ॥**

ನಾಲ್ಕು ಪದಗಳುಳ್ಳ ಸೂತ್ರ. 'ಬಹುವ್ರೀಹೌ' ಸಪ್ತಮಿಯೂ 'ಸಕ್ಥ್ಯಕ್ಷ್ಣೋಃ' ಎಂಬಲ್ಲಿ ಪಂಚಮ್ಯರ್ಥದಲ್ಲಿ ಷಷ್ಠಿಯೂ ಬಂದಿದೆ. **ಸೂತ್ರಾರ್ಥ**—ಸ್ವಾಂಗವಾಚಕವಾದ ಸಕ್ಥಿ, ಅಕ್ಷಿ ಅಂತವಾದ ಬಹುವ್ರೀಹಿ ಸಮಾಸದ ಪರದಲ್ಲಿ ಸಮಾಸಾಂತವಾಗಿ ಷಚ್ ಪ್ರತ್ಯಯ ಬರುತ್ತದೆ. ಷಚಿನಲ್ಲಿ ಅಕಾರ ಉಳಿಯುತ್ತದೆ. ದೀರ್ಘೇ+ಸಕ್ಥಿನೀ ಯಸ್ಯ ಸಃ ॥ ಉದ್ದವಾದ ತೊಡೆಯುಳ್ಳವ. ಸಕ್ಥಿ ಸ್ವಾಂಗವಾಚಕವಾಗಿದೆ. ಷಚ್ ಬಂದರೆ ದೀರ್ಘಸಕ್ಥಿ+ಅ ಎಂದಿರುವಾಗ 'ಯಸ್ಯೇತಿ

ಚ ' ಸೂತ್ರದಿಂದ ಇಕಾರಲೋಪವಾದರೆ ದೀರ್ಘಸಕ್ಥಃ ಎಂದಾಗುತ್ತದೆ. ಜಲಜೇ ಇವ ಅಕ್ಷಿಣೀ ಯಸ್ಯಾಃ ಸಾ ॥ ಕಮಲದಂತೆ ಕಣ್ಣುಳ್ಳವಳು. ಅಕ್ಷಿ ಶಬ್ದ ಸ್ವಾಂಗ ವಾಚಕವಾಗಿಡೆ. ಜಲಜ+ಅಕ್ಷಿ+ಅ. ಇಕಾರಲೋಪ. ಜಲಜಾಕ್ಷ ಎಂದಿರುವಾಗ ಷಚ್ ಷಿತ್ ಆದುದರಿಂದ ಸ್ತ್ರೀತ್ವದಲ್ಲಿ ' ಷಿದ್ಗೌರಾದಿಭ್ಯಶ್ಚ ' ಸೂತ್ರದಿಂದ ಙೀಷ್. ಜಲಜಾಕ್ಷ+ಈ. ' ಯಸ್ಯೇತಿ ಚ ' ಜಲಜಾಕ್ಷೀ. ಸ್ವಾಂಗವಾಚಕವಾಗಬೇಕೆಂದು ದೇಕೆ ? ದೀರ್ಘಸಕ್ಥಿ ಶಕಟಮ್ ॥ ಇಲ್ಲಿ ಬರುವುದಿಲ್ಲ. ಗಟ್ಟಿಯಾದ ಮೂಕಿಯುಳ್ಳ ಗಾಡಿ. ಇಲ್ಲಿ ಸಕ್ಥಿ ಸ್ವಾಂಗವಾಚಕವಾಗಿಲ್ಲ. ಸ್ಥೂಲಾಕ್ಷಾ ವೇಣುಯಷ್ಟಿಃ ॥ ಸ್ಥೂಲಾನಿ ಅಕ್ಷೀಣಿ ಯಸ್ಯಾಃ ಸಾ ॥ ದೊಡ್ಡ ದೊಡ್ಡ ಗಂಟುಳ್ಳ ಬಿದಿರುಕೋಲು. ಅಕ್ಷಿ (ಗಿಣ್ಣು) ಸ್ವಾಂಗವಾಚಕವಾಗಿಲ್ಲ. ಷಚ್ ಬಾರದಿರುವುದರಿಂದ ಸ್ತ್ರೀತ್ವದಲ್ಲಿದ ಙೀಷಿಗೆ ನಿಮಿತ್ತ ವಿಲ್ಲದಿರುವುದರಿಂದ ಟಾಪ್ ಬಂದಿದೆ. ' ಅಕ್ಷ್ಣೋಽದರ್ಶನಾತ್ ' ಸೂತ್ರದಿಂದ ಅಕ್ಷಿ ಶಬ್ದಕ್ಕೆ ಅಚ್ ಬಂದುದರಿಂದ ಅದಂತವಾಗಿದೆ.

ಮೂರ್ಧನ್ ಶಬ್ದಕ್ಕೆ ಷ ಸಮಾಸಾಂತ ಹೇಳುವ ಸೂತ್ರ.

**೯೭೫. ದ್ವಿತ್ರಿಭ್ಯಾಂ ಷ ಮೂರ್ಧ್ನಃ ॥ ೫-೪-೧೧೫ ॥**

**ಆಭ್ಯಾಂ ಮೂರ್ಧ್ನಃ ಷಃ ಸ್ಯಾದ್ಬಹುವ್ರೀಹೌ ॥ ದ್ವಿಮೂರ್ಧಃ । ತ್ರಿಮೂರ್ಧಃ ॥**

ತ್ರಿಪದ ಸೂತ್ರ. ' ಬಹುವ್ರೀಹೌ ' ಅನುವೃತ್ತಿ. **ಸೂತ್ರಾರ್ಥ**—ಬಹುವ್ರೀಹಿ ಯಲ್ಲಿ ದ್ವಿ, ತ್ರಿ ಶಬ್ದಗಳ ಪರದಲ್ಲಿರುವ ಮೂರ್ಧನ್ ಶಬ್ದಕ್ಕೆ ಷ ಸಮಾಸಾಂತವಾಗಿ ಬರುತ್ತದೆ. ' ಷಃ ಪ್ರತ್ಯಯಸ್ಯ ' ಸೂತ್ರದಿಂದ ಷ್ ಇತ್ತಾಗಿ ಲೋಪವಾದರೆ ಅ ಉಳಿಯು ತ್ತದೆ. ದ್ವೌ ಮೂರ್ಧಾನೌ ಯಸ್ಯ ಸಃ ॥ ಎರಡು ತಲೆಯುಳ್ಳವನು. ದ್ವಿಮೂರ್ಧನ್ +ಅ. ' ನಸ್ತದ್ಧಿತೇ ' ಸೂತ್ರದಿಂದ ಟಿಲೋಪ. ದ್ವಿಮೂರ್ಧ್+ಅ. ದ್ವಿಮೂರ್ಧಃ ॥ ತ್ರಯಃ ಮೂರ್ಧಾನಃ ಯಸ್ಯ ಸಃ ॥ ಹಿಂದಿನಂತೇ ಕಾರ್ಯ ಬಂದರೆ ತ್ರಿಮೂರ್ಧಃ ಎಂದಾಗುತ್ತದೆ.

ಲೋಮನ್ ಶಬ್ದಾಂತಕ್ಕೆ ಅಪ್ ಹೇಳುವ ಸೂತ್ರ.

**೯೭೬. ಅಂತರ್ಬಹಿರ್ಭ್ಯಾಂ ಚ ಲೋಮ್ನಃ ॥ ೫-೪-೧೧೭ ॥**

**ಆಭ್ಯಾಂ ಲೋಮ್ನೋಽಪ್ಸ್ಯಾದ್ಬಹುವ್ರೀಹೌ ॥ ಅಂತರ್ಲೋಮಃ। ಬಹಿರ್ಲೋಮಃ ॥**

ತ್ರಿಪದ ಸೂತ್ರ. ಬಹುವ್ರೀಹಿಯಲ್ಲಿ ಅಂತರ್ ಬಹಿರ್ ಶಬ್ದಗಳ ಪರದಲ್ಲಿರುವ ಲೋಮನ್ ಶಬ್ದಕ್ಕೆ ಅಪ್ ಸಮಾಸಾಂತವಾಗಿ ಬರುತ್ತದೆ. ' ಅಪ್ ಪೂರಣೀ ಪ್ರಮಾಣ್ಯೋಃ ' ಸೂತ್ರದಿಂದ ' ಅಪ್ ' ಅನುವೃತ್ತವಾಗಿದೆ. ಅಂತಃ ಲೋಮಾನಿ

ಯಸ್ಯ ಸಃ || ಒಳಗೇ ಕೂದಲುಳ್ಳವನು. ಅಂತರ್ಲೋಮನ್ + ಅ. 'ನಸ್ತದ್ಧಿತೇ' ಟಿಲೋಪ. ಅಂತರ್ಲೋಮಃ || ಬಹಿಃ ಲೋಮಾನಿ ಯಸ್ಯ ಸಃ ಬಹಿರ್ಲೋಮಃ ||

ಪಾದಶಬ್ದಾಂತಕ್ಕೆ ಲೋಪ ಹೇಳುವ ಸೂತ್ರ.

**೯೭೭. ಪಾದಸ್ಯ ಲೋಪೋಽಹಸ್ತ್ಯಾದಿಭ್ಯಃ || ೫-೪-೧೩೮ ||**

**ಹಸ್ತ್ಯಾದಿವರ್ಜಿತಾದುಪಮಾನಾತ್ಪರಸ್ಯ ಪಾದಶಬ್ದಸ್ಯ ಲೋಪಃ ಸ್ಯಾತ್ ಬಹುವ್ರೀಹೌ । ವ್ಯಾಘ್ರಸ್ಯೇವ ಪಾದಾವಸ್ಯ ವ್ಯಾಘ್ರಪಾತ್ । ಅಹಸ್ತ್ಯಾದಿಭ್ಯಃ ಕಿಮ್ ? ಹಸ್ತಿಪಾದಃ । ಕುಸೂಲಪಾದಃ ||**

ತ್ರಿಪದ ಸೂತ್ರ. 'ಅಹಸ್ತ್ಯಾದಿಭ್ಯಃ' ಎಂದು ಛೇದಮಾಡಬೇಕು. 'ಉಪಮಾನಾಚ್ಚ' ಸೂತ್ರಾನುವೃತ್ತಿ. **ಸೂತ್ರಾರ್ಥ**—ಹಸ್ತಿ ಮುಂತಾದ ಶಬ್ದಗಳನ್ನು ಬಿಟ್ಟು ಉಪಮಾನವಾಚಕಪದದ ಪರದಲ್ಲಿರುವ ಪಾದ ಶಬ್ದಕ್ಕೆ ಬಹುವ್ರೀಹಿಯಲ್ಲಿ ಲೋಪಬರುತ್ತದೆ. 'ಅಲೋಂತ್ಯಸ್ಯ' ಪರಿಭಾಷೆಯಿಂದ ಪಾದಶಬ್ದಾಂತ್ಯಕ್ಕೆ ಲೋಪ. ವ್ಯಾಘ್ರಸ್ಯೇವ ಪಾದಾವಸ್ಯ. ಇದು ಫಲಿತಾರ್ಥವನ್ನು ಸೂಚಿಸುವ ವಿಗ್ರಹ. ವ್ಯಾಘ್ರಸ್ಯ ಪಾದಾವಿವ ಪಾದೌ ಯಸ್ಯ ಸಃ ಎಂದೇ ವಿಗ್ರಹಮಾಡಬೇಕು. ಪಾದಶಬ್ದಾಂತ್ಯಕ್ಕೆ ಲೋಪಬಂದರೆ ವ್ಯಾಘ್ರಪಾದ್. ಸು ಬಂದಾಗ 'ವಾವಸಾನೇ' ವಿಕಲ್ಪಚರ್ತ್ವ. ವ್ಯಾಘ್ರಪಾತ್. ಹಸ್ತ್ಯಾದಿಗಳು ಆಗಬಾರದೆಂದುದೇಕೆ ? ಹಸ್ತಿಪಾದಃ—ಹಸ್ತಿಪಾದೌ ಇವ ಪಾದೌ ಯಸ್ಯ ಸಃ || ಉಪಮಾನವಾಚಕವು ಪೂರ್ವಪದವಾಗಿದ್ದರೂ ಅವು ಹಸ್ತ್ಯಾದಿಗಳು ಆಗಬಾರದೆಂದುದರಿಂದ ಲೋಪವಿಲ್ಲ. ಕುಸೂಲಪಾದಃ || ಕುಸೂಲ ಪದವು ಹಸ್ತ್ಯಾದಿಗಣದಲ್ಲಿ ಸೇರಿದೆ. ಆದುದರಿಂದ ಲೋಪವಿಲ್ಲ. ಹಸ್ತ್ಯಾದಿಗಳನ್ನು ಗಣಪಾಠದಿಂದ ತಿಳಿಯಬೇಕು.

ಸಂಖ್ಯಾಸುಪೂರ್ವಪಾದಶಬ್ದಾಂತಕ್ಕೆ ಲೋಪ ಹೇಳುವ ಸೂತ್ರ.

**೯೭೮. ಸಂಖ್ಯಾಸುಪೂರ್ವಸ್ಯ || ೫-೪-೧೪೦ ||**

**ಪಾದಸ್ಯ ಲೋಪಃ ಸ್ಯಾತ್ ಸಮಾಸಾಂತಃ ಬಹುವ್ರೀಹೌ । ದ್ವಿಪಾತ್ । ಸುಪಾತ್ ।**

ಏಕಪದ ಸೂತ್ರ. **ಸೂತ್ರಾರ್ಥ**—ಸಂಖ್ಯಾವಾಚಕ ಮತ್ತು ಸು ಪದಗಳೇ ಪೂರ್ವದಲ್ಲಿರುವ ಪಾದಶಬ್ದಕ್ಕೆ ಬಹುವ್ರೀಹಿಯಲ್ಲಿ ಲೋಪಬರುತ್ತದೆ. ಉಪಮಾನ ವಾಚಕವಾಗದಿರುವುದರಿಂದ ಪುನಃ ಸೂತ್ರಾರಂಭಮಾಡಿರುತ್ತಾನೆ. 'ಸಮಾಸಾಂತಾಃ' ಅಧಿಕಾರದಲ್ಲಿ ಈ ಲೋಪವನ್ನು ಹೇಳಿರುವುದರಿಂದ ಲೋಪವಾದರೂ ಸ್ಥಾನಿಮೂಲಕ ಇದು ಸಮಾಸಾಂತವಾಗುತ್ತದೆ. ದ್ವೌ ಪಾದೌ ಯಸ್ಯ ಸಃ || ದ್ವಿಪಾದ ಎಂದಿರುವಾಗ ಲೋಪ. ದ್ವಿಪಾದ್. ಪ್ರಥಮೆಯಲ್ಲಿ ವಿಕಲ್ಪಚರ್ತ್ವ. ದ್ವಿಪಾತ್. ಶೋಭನೌ ಪಾದೌ ಯಸ್ಯ ಸಃ ಸುಪಾತ್ = ಸುಂದರವಾದ ಕಾಲುಳ್ಳವನು.

ಕಾಕುದ ಶಬ್ದಾಂತಕ್ಕೆ ಲೋಪ ಹೇಳುವ ಸೂತ್ರ.

**೯೭೯. ಉದ್ವಿಭ್ಯಾಂ ಕಾಕುದಸ್ಯ ॥ ೫-೪-೧೪೮ ॥**

**ಲೋಪಃ ಸ್ಯಾತ್ । ಉತ್ಕಾಕುತ್ । ವಿಕಾಕುತ್ ॥**

ದ್ವಿಪದ ಸೂತ್ರ. ಸೂತ್ರಾರ್ಥ—ಉತ್, ವಿ ಇವುಗಳ ಪರದಲ್ಲಿರುವ ಕಾಕುದ ಶಬ್ದಕ್ಕೆ ಬಹುವ್ರೀಹಿಯಲ್ಲಿ ಲೋಪ ಬರುತ್ತದೆ. 'ಅಲೋಂತ್ಯಸ್ಯ' ಸೂತ್ರದಿಂದ ಅಂತ್ಯಲೋಪ. ಉನ್ನತಂ (ಉದ್ಗತಂ) ಕಾಕುದಂ ಯಸ್ಯ ಸಃ ॥ ಎತ್ತರವಾದ ತಾಲು ಭಾಗವುಳ್ಳವನು. (ಉತ್+ಸು+ಕಾಕುದ+ಸು) ಉತ್ಕಾಕುದ ಎಂದಿರುವಾಗ ಅಂತ್ಯಲೋಪ. ವಿಭಕ್ತಿಯಲ್ಲಿ ಚರ್ತ್ವ. ಉತ್ಕಾಕುತ್. ವಿಗತಂ ಕಾಕುದಂ ಯಸ್ಯ ವಿಕಾಕುತ್. ತಾಲುವಿಲ್ಲದವನು.

ಕಾಕುದಾಂತಕ್ಕೆ ವಿಕಲ್ಪಲೋಪ ಹೇಳುವ ಸೂತ್ರ.

**೯೮೦. ಪೂರ್ಣಾದ್ವಿಭಾಷಾ ॥ ೫-೪-೧೪೯ ॥**

**ಪೂರ್ಣಕಾಕುತ್ । ಪೂರ್ಣಕಾಕುದಃ ॥**

ಪೂರ್ಣಾತ್, ವಿಭಾಷಾ ॥ ದ್ವಿಪದ ಸೂತ್ರ. 'ಕಾಕುದಸ್ಯ' ಅನುವೃತ್ತಿ. **ಸೂತ್ರಾರ್ಥ**—ಪೂರ್ಣ ಶಬ್ದದ ಪರದಲ್ಲಿರುವ ಕಾಕುದ ಶಬ್ದಕ್ಕೆ ಬಹುವ್ರೀಹಿಯಲ್ಲಿ ವಿಕಲ್ಪವಾಗಿ ಲೋಪಬರುತ್ತದೆ. ಪೂರ್ಣಂ ಕಾಕುದಂ ಯಸ್ಯ ॥ ತುಂಬಿದ ತಾಲು ಉಳ್ಳವನು. ಲೋಪಬಂದರೆ ಪೂರ್ಣಕಾಕುತ್, ಬಾರದಿದ್ದರೆ ಪೂರ್ಣಕಾಕುದಃ ಎಂದಾಗುತ್ತದೆ.

ಹೃದಯ ಶಬ್ದಕ್ಕೆ ಹೃದ್ ಆದೇಶ ಹೇಳುವ ಸೂತ್ರ.

**೯೮೧. ಸುಹೃದ್ದುರ್ಹೃದೌ ಮಿತ್ರಾಮಿತ್ರಯೋಃ ॥ ೫-೪-೧೫೦ ॥**

**ಸುದುರ್ಭ್ಯಾಂ ಹೃದಯಸ್ಯ ಹೃದ್ಭಾವೋ ನಿಪಾತ್ಯತೇ ॥ ಸುಹೃತ್=ಮಿತ್ರಮ್ । ದುರ್ಹೃತ್=ಅಮಿತ್ರಃ ॥**

ದ್ವಿಪದ ಸೂತ್ರ. ಅರ್ಥವಿಶೇಷದಲ್ಲಿ ಕಾರ್ಯವನ್ನು ಮಾಡಿ ತೋರಿಸುವುದರಿಂದ ನಿಪಾತವೆಂದು ತಿಳಿಯಬೇಕು. ಸು ಎಂಬುದರ ಪರದಲ್ಲಿರುವ ಹೃದಯ ಶಬ್ದಕ್ಕೆ ಮಿತ್ರ ಎಂಬ ಅರ್ಥ ತೋರುವಾಗಲೂ, ದುರ್ ಎಂಬುದರ ಪರದಲ್ಲಿರುವ ಹೃದಯ ಪದಕ್ಕೆ ಅಮಿತ್ರ (ಶತ್ರು) ಎಂಬರ್ಥ ತೋರುವಾಗಲೂ ಹೃದ್ ಆದೇಶ ಬರುತ್ತದೆ. ಮಿತ್ರನೆಂದು ತೋರುವಾಗ ಮಾತ್ರ ಸುಹೃತ್ ಎಂದೂ ಅಮಿತ್ರನೆಂದು ಹೇಳುವಾಗ ಮಾತ್ರ ದುರ್ಹೃತ್ ಎಂದೂ ಪ್ರಯೋಗಿಸಬೇಕು. ಕೇವಲ ಒಳ್ಳೇ ಹೃದಯವುಳ್ಳವ ಎಂದು ವಿವಕ್ಷಾ ಇದ್ದರೆ ಆಗ ಸುಹೃದಯ ಎಂದೇ ಹೇಳಬೇಕು.

ಬಹುವ್ರೀಹಿಯಲ್ಲಿ ಕಪ್ ಹೇಳುವ ಸೂತ್ರ.

**೯೮೨. ಉರಃಪ್ರಭೃತಿಭ್ಯಃ ಕಪ್** ॥ ೫-೪-೧೫೧ ॥

ದ್ವಿಪದ ಸೂತ್ರ. ಸುಲಭವಾದುದರಿಂದ ವೃತ್ತಿ ಬರೆಯಲಿಲ್ಲ. **ಸೂತ್ರಾರ್ಥ**— ಬಹುವ್ರೀಹಿಯಲ್ಲಿ ಉರಸ್ ಮುಂತಾದ ಶಬ್ದಗಳ ಪರದಲ್ಲಿ ಕಪ್ ಸಮಾಸಾಂತವಾಗಿ ಬರುತ್ತದೆ. ಅದು ತದ್ಧಿತಸಂಜ್ಞೆ ಹೊಂದುತ್ತದೆ. ಉರಸ್ ಮುಂತಾದ ಶಬ್ದಗಳೇ ಅಂತವಾದ ಬಹುವ್ರೀಹಿಗೆ ಕಪ್. ವ್ಯೂಢಂ ಉರಃ ಯಸ್ಯ ಸಃ ॥ ವಿಶಾಲವಾದ ಎದೆ ಉಳ್ಳವನು. (ವ್ಯೂಢ+ಸು+ಉರಸ್+ಸು) ವ್ಯೂಢೋರಸ್ ಎಂದಿರುವಾಗ ಕಪ್. ವ್ಯೂಢೋರಸ್+ಕ ಎಂದಿರುವಾಗ 'ಸ್ವಾದಿಷ್ವಸರ್ವನಾಮಸ್ಥಾನೇ' ಸೂತ್ರದಿಂದ ವ್ಯೂಢೋರಸಿಗೆ ಪದಸಂಜ್ಞೆ ಬರುವುದರಿಂದ 'ಸಸಜುಷೋರುಃ' ಸೂತ್ರದಿಂದ ಸಕಾರಕ್ಕೆ ರುತ್ವ. ವ್ಯೂಢೋರರ್+ಕ. 'ಖರವಸಾನಯೋರ್ವಿಸರ್ಜನೀಯಃ' ವ್ಯೂಢೋರಃ +ಕ. ಇಲ್ಲಿ ವಿಸರ್ಗಕ್ಕೆ 'ಕುಪ್ವೋಃ ᳲಕᳲಪೌ ಚ' ಸೂತ್ರದಿಂದ ᳲಕ ಎಂಬ ಜಿಹ್ವಾಮೂಲೀಯಾದೇಶ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಸತ್ವ ಹೇಳುತ್ತಾನೆ.

ಅಪದಾದಿಯಲ್ಲಿ ವಿಸರ್ಗಕ್ಕೆ ಸತ್ವ ಹೇಳುವ ಸೂತ್ರ.

**೯೮೩. ಸೋಽಪದಾದೌ** ॥ ೮-೩-೩೮ ॥

**ಪಾಶಕಲ್ಪಕಕಾಮ್ಯೇಷು ವಿಸರ್ಗಸ್ಯ ಸಃ** ॥

ಸಃ, ಅಪದಾದೌ ॥ ದ್ವಿಪದ ಸೂತ್ರ. 'ಪಾಶಕಲ್ಪಕಕಾಮ್ಯೇಷ್ವಿತಿ ವಾಚ್ಯಮ್' ಎಂಬ ವಾರ್ತಿಕ ಇರುವುದರಿಂದ ಪಾಶ, ಕಲ್ಪ, ಕ, ಕಾಮ್ಯಗಳಲ್ಲಿ ಮಾತ್ರ ಈ ಸತ್ವ ಎಂದು ತಿಳಿಯಬೇಕು. 'ವಿಸರ್ಜನೀಯಸ್ಯ ಸಃ' ಸೂತ್ರವು ಅನುವೃತ್ತವಾಗುತ್ತದೆ. **ಸೂತ್ರಾರ್ಥ**—ಅಪದಾದಿಯಲ್ಲಿರುವ ವಿಸರ್ಗಕ್ಕೆ ಪಾಶ, ಕಲ್ಪ, ಕ, ಕಾಮ್ಯಗಳು ಪರದಲ್ಲಿರುವಾಗ ಸಕಾರಾದೇಶ ಬರುತ್ತದೆ. ಜಿಹ್ವಾಮೂಲೀಯ, ಉಪಧ್ಮಾನೀಯ ಗಳಿಗೆ ಅಪವಾದವಾಗಿ ಈ ಸತ್ವ ಹೇಳಿದೆ. ಪ್ರಕೃತ ಕಪರದಲ್ಲಿರುವುದರಿಂದ ವಿಸರ್ಗಕ್ಕೆ ಸತ್ವ ಬಂದರೆ ವ್ಯೂಢೋರಸ್ಕಃ ಎಂದಾಗುತ್ತದೆ. ಅಥವಾ ಸತ್ವವು ಇನ್ನೊಂದು ಸೂತ್ರ ದಿಂದಲೂ ಸಿದ್ಧವಾಗುತ್ತದೆಂದು ತೋರಿಸುತ್ತಾನೆ.

ಕಸ್ಕಾದಿಗಣದಲ್ಲಿ ಷತ್ವ, ಸತ್ವ ಹೇಳುವ ಸೂತ್ರ.

**೯೮೪. ಕಸ್ಕಾದಿಷು ಚ** ॥ ೮-೩-೪೮ ॥

ಇಣ್ಣಿಣಿ ಉತ್ತರಸ್ಯ ವಿಸರ್ಗಸ್ಯ ಷಃ ಅನ್ಯಸ್ಯ ತು ಸಃ । ಇತಿ ಸಃ । ವ್ಯೂಢೋರಸ್ಕಃ ॥

ದ್ವಿಪದ ಸೂತ್ರ. 'ಇಣಃ ಷಃ' ಸೂತ್ರಾನುವೃತ್ತಿ. 'ವಿಸರ್ಜನೀಯಸ್ಯ ಸಃ' ಸೂತ್ರದಿಂದ ವಿಸರ್ಜನೀಯಸ್ಯ ಅನುವೃತ್ತಿ. ಕಸ್ಕಾದಿಷು ವಿಷಯಸಪ್ತಮೀ. 'ಸೋಽಪದಾದೌ' ಸೂತ್ರದಿಂದ ಸಃ ಪದವು ಅನುವೃತ್ತವಾಗುತ್ತದೆ. **ಸೂತ್ರಾರ್ಥ**—ಕಸ್ಕಾದಿಗಣದಲ್ಲಿ ಇಣಿನ ಪರದಲ್ಲಿರುವ ವಿಸರ್ಗಕ್ಕೆ ಷಕಾರವೂ, ಇತರ ವಿಸರ್ಗಕ್ಕೆ ಸಕಾರವೂ ಆದೇಶವಾಗಿ ಬರುತ್ತವೆ. ಪ್ರಕೃತ ವ್ಯೂಢೋರಸ್ಕ ಪದವು ಕಸ್ಕಾದಿಗಣದಲ್ಲಿ ಸೇರಿರುವುದರಿಂದ ಇಣಿನ ಪರದಲ್ಲಿಲ್ಲದಿರುವುದರಿಂದ ವಿಸರ್ಗಕ್ಕೆ ಸಕಾರ ಬಂದಿದೆ. ಹೀಗೆ ಎರಡು ಸೂತ್ರಗಳಲ್ಲಿ ಯಾವುದರಿಂದಲಾದರೂ ಸಕಾರ ಬರುತ್ತದೆ। ಪ್ರಿಯಂ ಸರ್ಪಿಃ ಯಸ್ಯ ಸಃ ॥ ಉರಸ್ ಮುಂತಾದವುಗಳಲ್ಲಿ ಸೇರಿರುವುದರಿಂದ ಕಪ್. ಪ್ರಿಯ ಸರ್ಪಿಸ್+ಕ. ಹಿಂದಿನಂತೆ ರುತ್ವ ವಿಸರ್ಗಗಳು ಬಂದಾಗ ಪ್ರಿಯಸರ್ಪಿಃ+ಕಃ ಎಂದಿರುವಾಗ ಜಿಹ್ವಾಮೂಲೀಯ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಷತ್ವ ಹೇಳುತ್ತಾನೆ.

ವಿಸರ್ಗಕ್ಕೆ ಷತ್ವ ಹೇಳುವ ಸೂತ್ರ.

**೯೮೫. ಇಣಃ ಷಃ ॥ ೮-೩-೩೯ ॥**

**ಇಣ ಉತ್ತರಸ್ಯ ವಿಸರ್ಗಸ್ಯ ಷಃ ಪಾಶಕಲ್ಪಕಕಾಮ್ಯೇಷು ಪರೇಷು। ಪ್ರಿಯಸರ್ಪಿಷ್ಕಃ ॥**

ದ್ವಿಪದ ಸೂತ್ರ. 'ವಿಸರ್ಜನೀಯಸ್ಯ' ಅನುವೃತ್ತಿ. ವಾರ್ತಿಕದಿಂದ 'ಪಾಶಕಲ್ಪಕಕಾಮ್ಯೇಷು' ನಿಮಿತ್ತಲಾಭ. **ಸೂತ್ರಾರ್ಥ**—ಇಣಿನ ಪರದಲ್ಲಿರುವ ವಿಸರ್ಗಕ್ಕೆ ಪಾಶ, ಕಾಮ್ಯ, ಕಲ್ಪ, ಕ ಇವುಗಳು ಪರದಲ್ಲಿರುವಾಗ ಷಕಾರಾದೇಶ ಬರುತ್ತದೆ. ಪ್ರಿಯಸರ್ಪಿಃ+ಕ ಎಂದಿರುವಾಗ ಇಕಾರದ ಪರದಲ್ಲಿ ವಿಸರ್ಗ ಬಂದಿದೆ. ಅದಕ್ಕೆ ಕ ಪರದಲ್ಲಿರುವುದರಿಂದ ಷತ್ವ ಬಂದರೆ ಪ್ರಿಯಸರ್ಪಿಷ್ಕಃ ಎಂದಾಗುತ್ತದೆ. ಪ್ರಿಯವಾದ ತುಪ್ಪವುಳ್ಳವನು.

ಬಹುವ್ರೀಹಿಯಲ್ಲಿ ಪೂರ್ವಪ್ರಯೋಗ ನಿಯಾಮಕ ಸೂತ್ರ.

**೯೮೬. ನಿಷ್ಠಾ ॥ ೨-೨-೩೬ ॥**

**ನಿಷ್ಠಾಂತಂ ಬಹುವ್ರೀಹೌ ಪೂರ್ವಂ ಸ್ಯಾತ್ ॥ ಯುಕ್ತಯೋಗಃ ॥**

ಏಕಪದ ಸೂತ್ರ. 'ಉಪಸರ್ಜನಂ ಪೂರ್ವಮ್' ಸೂತ್ರದಿಂದ 'ಪೂರ್ವಮ್', 'ಸಪ್ತಮೀ ವಿಶೇಷಣೇ—' ಸೂತ್ರದಿಂದ 'ಬಹುವ್ರೀಹೌ' ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ನಿಷ್ಠಾಂತಪದವು ಬಹುವ್ರೀಹಿಯಲ್ಲಿ ಪೂರ್ವಪ್ರಯೋಗವನ್ನು ಹೊಂದುತ್ತದೆ. 'ಕ್ತಕ್ತವತೂ ನಿಷ್ಠಾ' ಸೂತ್ರದಿಂದ ಕ್ತ, ಕ್ತವತು ಪ್ರತ್ಯಯಗಳಿಗೆ

ನಿಷ್ಠಾ ಎಂದು ಹೆಸರು. ಪ್ರತ್ಯಯವಾದುದರಿಂದ ತದಂತಲಾಭ. ಯುಕ್ತಃ+ಯೋಗಃ ಯೇನ ಸಃ ಯುಕ್ತಯೋಗಃ ॥ ಯುಜಿರ್ ಧಾತುವಿಗೆ ಕ್ತಪ್ರತ್ಯಯ ಬಂದು ಯುಕ್ತ ಎಂದಾಗಿದೆ. ಪೂರ್ವಪ್ರಯೋಗ ನಿಯಮಕ್ಕೋಸ್ಕರ ಈ ಸೂತ್ರ ಆರಬ್ಧವಾಗಿದೆ.

ಬಹುವ್ರೀಹಿಯಲ್ಲಿ ಕಪ್ ವಿಕಲ್ಪ ಹೇಳುವ ಸೂತ್ರ.

೯೮೭. ಶೇಷಾದ್ವಿಭಾಷಾ ॥ ೫-೪-೧೫೪ ॥

**ಅನುಕ್ತಸಮಾಸಾಂತಾದ್ಬಹುವ್ರೀಹೇಃ ಕಬ್ವಾ । ಮಹಾಯಶಸ್ಕಃ, ಮಹಾಯಶಾಃ ॥**

ಇತಿ ಬಹುವ್ರೀಹಿಃ ॥ ೪ ॥

ಶೇಷಾತ್, ವಿಭಾಷಾ ॥ ಇದುವರೆಗೆ ಯಾವ ಶಬ್ದಗಳ ಮೇಲೆ ಸಮಾಸಾಂತಗಳು ಹೇಳಿವೆಯೋ ಅವುಗಳನ್ನು ಬಿಟ್ಟು ಉಳಿದವು ಶೇಷಗಳು. 'ಕಪ್' ಅನುವೃತ್ತಿ. **ಸೂತ್ರಾರ್ಥ**—ಇದುವರೆಗೆ ಹೇಳದಿರುವ ಸಮಾಸಾಂತವುಳ್ಳ ಬಹುವ್ರೀಹಿಯ ಮೇಲೆ ಕಪ್ ವಿಕಲ್ಪವಾಗಿ ಬರುತ್ತದೆ. ಮಹದ್ ಯಶಃ ಯಸ್ಯ ಸಃ ॥ 'ಆನ್ಮಹತಃ—' ಸೂತ್ರದಿಂದ ಮಹಚ್ಛಬ್ದಕ್ಕೆ ಆತ್ವ. ಮಹಾಯಶಸ್ ಎಂದಿರುವಾಗ ಯಾವ ಸಮಾಸಾಂತವೂ ಬಾರದಿರುವುದರಿಂದ ಕಪ್. ಮಹಾಯಶಸ್ಕಃ । ಸಕಾರಕ್ಕೆ ರುತ್ವವಿಸರ್ಗ ಬಂದು 'ಸೋಽಪದಾದೌ' ಸೂತ್ರದಿಂದ ಸತ್ವ ಹೇಳಬೇಕು. ಕಪ್ ಬಾರದಿದ್ದರೆ ಮಹಾಯಶಸ್ ಎಂದೇ ಇರುತ್ತದೆ. ಸು ಪರವಾದಾಗ 'ಅತ್ವಸಂತಸ್ಯ ಚಾಧಾತೋಃ' ಸೂತ್ರದಿಂದ ಉಪಧಾದೀರ್ಘ. ಮಹಾಯಶಸ್+ಸ್. 'ಹಲ್‌ಙ್ಯಾಬ್ಭ್ಯಃ—' ಸೂತ್ರದಿಂದ ಸುಲೋಪ. ಸಕಾರಕ್ಕೆ ರುತ್ವವಿಸರ್ಗ. ಮಹಾಯಶಾಃ । ಅಧಿಕ ಕೀರ್ತಿಯುಳ್ಳವನು.

ಬಹುವ್ರೀಹಿಸಮಾಸ ಮುಗಿದಿದೆ.

## ೨೧. ಅಥ ದ್ವಂದ್ವಃ

ದ್ವಂದ್ವಸಮಾಸವಿಧಾಯಕ ಸೂತ್ರ.

೯೮೮. ಚಾರ್ಥೇ ದ್ವಂದ್ವಃ ॥ ೨-೨-೨೯ ॥

**ಅನೇಕಂ ಸುಬಂತಂ ಚಾರ್ಥೇ ವರ್ತಮಾನಂ ವಾ ಸಮಸ್ಯತೇ ಸ ದ್ವಂದ್ವಃ । ಸಮುಚ್ಚಯಾನ್ವಾಚಯೇತರೇತರಯೋಗಸಮಾಹಾರಾಶ್ಚಾರ್ಥಾಃ । ತತ್ರ 'ಈಶ್ವರಂ ಗುರುಂ ಚ ಭಜಸ್ವ' ಇತಿ ಪರಸ್ಪರನಿರಪೇಕ್ಷಸ್ಯಾನೇಕ-**

**ಸ್ಯೈಕಸ್ಮಿನ್ನನ್ವಯಃ ಸಮುಚ್ಚಯಃ। 'ಭಿಕ್ಷಾಮಟ ಗಾಂ ಚಾನಯ' ಇತ್ಯನ್ಯತರಸ್ಯಾನುಷಙ್ಗಿಕತ್ವೇನಾನ್ವಯೋಽನ್ವಾಚಯಃ। ಅನಯೋರಸಾಮರ್ಥ್ಯಾತ್ಸಮಾಸೋ ನ। 'ಧವಖದಿರೌ ಛಿನ್ಧಿ' ಇತಿ ಮಿಲಿತಾನಾಮನ್ವಯ ಇತರೇತರಯೋಗಃ। 'ಸಂಜ್ಞಾಪರಿಭಾಷಮ್' ಇತಿ ಸಮೂಹಃ ಸಮಾಹಾರಃ॥**

ದ್ವಿಪದ ಸೂತ್ರ. 'ಸಮಾಸಃ', 'ವಿಭಾಷಾ' ಅಧಿಕೃತವಾಗುತ್ತವೆ. 'ಸುಬಾಮಂತ್ರಿತೇ' ಸೂತ್ರದಿಂದ 'ಸುಪ್', 'ಅನೇಕಮನ್ಯಪದಾರ್ಥೇ' ಸೂತ್ರದಿಂದ 'ಅನೇಕಂ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಚಾರ್ಥದಲ್ಲಿ ಇರುವ ಅನೇಕ ಸುಬಂತಗಳು ವಿಕಲ್ಪವಾಗಿ ಸಮಾಸಹೊಂದುತ್ತವೆ; ಅವು ದ್ವಂದ್ವ ಎಂಬ ಸಂಜ್ಞೆಯನ್ನು ಹೊಂದುತ್ತವೆ. ಚಾರ್ಥವನ್ನು ವಿವರಿಸಿ ಎಲ್ಲಿ ಸಾಮರ್ಥ್ಯವಿದೆಯೋ ಅಲ್ಲಿ ಮಾತ್ರ ಸಮಾಸ ತೋರಿಸುತ್ತಾನೆ. ದ್ವಂದ್ವದಲ್ಲಿ ಎಲ್ಲಾ ಪದಾರ್ಥಗಳಿಗೂ ಪ್ರಾಧಾನ್ಯವಿದೆ. ಸಮುಚ್ಚಯ, ಅನ್ವಾಚಯ, ಇತರೇತರಯೋಗ, ಸಮಾಹಾರ ಎಂದು ಚಕಾರಕ್ಕೆ ನಾಲ್ಕು ಅರ್ಥಗಳಿವೆ. 'ಈಶ್ವರಂ ಗುರುಂ ಚ ಭಜಸ್ವ'—ಎಂಬಲ್ಲಿ ಚಕಾರ ಸಮುಚ್ಚಯಾರ್ಥವನ್ನು ಹೇಳುತ್ತದೆ. ಈಶ್ವರನನ್ನೂ ಗುರುವನ್ನೂ ಭಜಿಸು. ಪರಸ್ಪರ ನಿರಪೇಕ್ಷಿತಗಳಾದ ಅನೇಕ ವಸ್ತುಗಳಿಗೆ ಒಂದರಲ್ಲಿ ಅನ್ವಯ ಹೇಳುವುದೇ ಸಮುಚ್ಚಯ. ಇಲ್ಲಿ ಈಶ್ವರ, ಗುರುಗಳು ಪರಸ್ಪರ ನಿರಪೇಕ್ಷಿತಗಳಾಗಿವೆ. ಅವುಗಳಿಗೆ ಭಜನಕ್ರಿಯೆಯಲ್ಲಿ ಅನ್ವಯ. ಒಂದಕ್ಕೆ ಅನ್ವಯ ಹೇಳಿದ ಮೇಲೆ ಕ್ರಿಯೆಯನ್ನು ಆವೃತ್ತಿಮಾಡಿಕೊಂಡು ಪುನಃ ಇನ್ನೊಂದಕ್ಕೆ ಅನ್ವಯ ಹೇಳಿದರೆ ಆಗ ನಿರಪೇಕ್ಷಿತಗಳೆಂದು ತಿಳಿಯುತ್ತದೆ. ಭಿಕ್ಷಾಮಟ, ಗಾಂ ಚಾನಯ॥ ಭಿಕ್ಷೆಗೆ ತಿರುಗು, ಗೋವನ್ನು ತಾ. ಭಿಕ್ಷೆಗೆ ತಿರುಗುವಾಗ ಗೋವು ಸಿಕ್ಕಿದರೆ ತಾ ಎಂದರ್ಥ. ಇದು ಅನ್ವಾಚಯ. ಅನ್ಯತರಸ್ಯಾನುಷಂಗಿಕತ್ವೇನಾನ್ವಯಃ॥ ಎರಡರ ಮಧ್ಯದಲ್ಲಿ ಒಂದಕ್ಕೆ ಉದ್ದೇಶವಿಲ್ಲದೆ ಕ್ರಿಯೆಯಲ್ಲಿ ಅನ್ವಯವಿರುವಿಕೆ. ಒಂದಕ್ಕೆ ಪ್ರಾಧಾನ್ಯವೂ, ಅದರ ಸಂಬಂಧವಾದ ಕ್ರಿಯೆಗೆ ಅವಶ್ಯ ಕರ್ತವ್ಯಜ್ಞಾನವೂ ಉಂಟಾದರೆ ಅಲ್ಲಿ ಅನ್ವಾಚಯವಾಗುತ್ತದೆ. ಭಿಕ್ಷೆಯೆತ್ತುವುದು ಮುಖ್ಯ. ಭಿಕ್ಷೆಗೆ ಪ್ರಾಧಾನ್ಯ ಇರುವುದರಿಂದ ಅದಕ್ಕೋಸ್ಕರ ಅವಶ್ಯ ತಿರುಗಬೇಕು. ಗೋವು ಆನುಷಂಗಿಕ. ಸಿಕ್ಕಿದರೆ ತರುವುದು; ಇಲ್ಲವಾದರೆ ಇಲ್ಲ. ಆದುದರಿಂದ ಅದು ಅಪ್ರಧಾನ. ಈ ಸಮುಚ್ಚಯ, ಅನ್ವಾಚಯಗಳಲ್ಲಿ ದ್ವಂದ್ವ ಸಮಾಸ ಬರುವುದಿಲ್ಲ. ಅಲ್ಲಿ ಪದಗಳಿಗೆ ಪರಸ್ಪರ ಏಕಾರ್ಥೀಭಾವಸಾಮರ್ಥ್ಯ ಇಲ್ಲ. ಏಕಾರ್ಥೀಭಾವಸಾಮರ್ಥ್ಯ ಇದ್ದಲ್ಲಿಯೇ ಸಮಾಸ ಬರುವುದೆಂದು ಹಿಂದೆ ಹೇಳಿದೆ.

ಪರಸ್ಪರ ಅಪೇಕ್ಷಿತವಾಗಿ, ಸಮ್ಮಿಳಿತವಾಗಿರುವವುಗಳಿಗೆ ಒಂದು ಧರ್ಮದಲ್ಲಿ ಅನ್ವಯ ಹೇಳುವುದೇ ಇತರೇತರಯೋಗ. ಸಮುದಾಯವಾಗಿದ್ದರೂ ಅವಯವ ಭೇದ ಇಲ್ಲಿ ಸ್ಪಷ್ಟವಾಗಿ ತೋರುತ್ತದೆ. ಧವಖದಿರೌ ಛಿಂಧಿ॥ ಧವಶ್ಚ ಖದಿರಶ್ಚ.

(ಧವ+ಸು+ಖದಿರ+ಸು) ಇಲ್ಲಿ ಧವಕ್ಕೂ ಖದಿರಕ್ಕೂ ಏಕಕಾಲದಲ್ಲಿ ಛೇದನಕ್ರಿಯೆ ಯಲ್ಲಿ ಅನ್ವಯವಿರುವುದರಿಂದ ಪರಸ್ಪರ ಸಾಪೇಕ್ಷಿತವಾಗಿವೆ. ಆದುದರಿಂದ ಸಮಾಸ. ಸಮೂಹವೇ ಸಮಾಹಾರ. ಸಮುದಾಯದ ಅವಯವಸಂಖ್ಯೆ ಇಲ್ಲಿ ತೋರುವುದಿಲ್ಲ. ಒಟ್ಟಿಗೆ ಒಂದು ಸಮುದಾಯರೂಪವಾಗಿ ತೋರುತ್ತದೆ. ಸಂಜ್ಞಾ ಚ ಪರಿಭಾಷಾ ಚ ತಯೋಃ ಸಮಾಹಾರಃ ಸಂಜ್ಞಾಪರಿಭಾಷಮ್ ॥ 'ಸ ನಪುಂಸಕಮ್' ಸೂತ್ರದಿಂದ ಸಮಾಹಾರದ್ವಂದ್ವಕ್ಕೆ ನಪುಂಸಕಲಿಂಗ. 'ಹ್ರಸ್ವೋ ನಪುಂಸಕೇ ಪ್ರಾತಿಪದಿಕಸ್ಯ' ಸೂತ್ರದಿಂದ ಹ್ರಸ್ವ. ಇತರೇತರಯೋಗದ್ವಂದ್ವದಲ್ಲಿ ಅವಯವಗಳ ಸಂಖ್ಯೆಯನ್ನು ಸಮುದಾಯದಲ್ಲಿ ಆರೋಪಮಾಡುವುದರಿಂದ ಅಲ್ಲಿ ದ್ವಿವಚನಾಂತ, ಬಹುವಚನಾಂತ ಪ್ರಯೋಗವಿದೆ. ಸಮಾಹಾರದ್ವಂದ್ವದಲ್ಲಿ ಅವಯವಸಂಖ್ಯೆಗೆ ಭಾನವಿಲ್ಲದಿರುವುದ ರಿಂದ ಸಮುದಾಯದಲ್ಲಿ ಆರೋಪವಿಲ್ಲ. ಆದುದರಿಂದ ಯಾವಾಗಲೂ ಏಕವಚನಾಂತ ಪ್ರಯೋಗ. ಸಮಾಹಾರದ್ವಿಗುವಿಗೂ, ಸಮಾಹಾರದ್ವಂದ್ವಕ್ಕೂ ಸ್ವಲ್ಪ ವ್ಯತ್ಯಾಸವಿದೆ. ಸಮಾಹಾರದ್ವಿಗುವಿನಲ್ಲಿ ವಿಗ್ರಹವಾಕ್ಯದಲ್ಲಿ ಷಷ್ಠ್ಯಂತಪದಪ್ರಯೋಗವಿರುತ್ತದೆ. ಪಂಚಾನಾಂ ಗವಾಂ ಸಮಾಹಾರಃ ಪಂಚಗವಮ್ ॥ ಸಮಾಹಾರದ್ವಂದ್ವದಲ್ಲಿ ಹಿಂದೆ ತೋರಿಸಿದಂತೆ ವಿಗ್ರಹವಾಕ್ಯದಲ್ಲಿ ಪ್ರಥಮಾಂತಗಳಿಗೆ ಪ್ರಯೋಗ. ಪ್ರಥಮಾಂತ ಪದಗಳಿಗೆ ಮಾತ್ರ ದ್ವಂದ್ವವೆಂದು ವ್ಯಾಕರಣಸಿದ್ಧಾಂತ.

ದ್ವಂದ್ವದಲ್ಲಿ ಪರಪ್ರಯೋಗ ಹೇಳುವ ಸೂತ್ರ.

**೯೪೯. ರಾಜದಂತಾದಿಷು ಪರಮ್ ॥ ೨-೨-೩೧ ॥**

**ಏಷು ಪೂರ್ವಪ್ರಯೋಗಾರ್ಹಂ ಪರಂ ಸ್ಯಾತ್ । ದಂತಾನಾಂ ರಾಜಾನೋ ರಾಜದಂತಾಃ ।**

**ವಾ ॥ (ಧರ್ಮಾದಿಷ್ವನಿಯಮಃ) ಅರ್ಥಧರ್ಮೌ । ಧರ್ಮಾರ್ಥಾವಿತ್ಯಾದಿ ॥**

ದ್ವಿಪದ ಸೂತ್ರ. 'ಉಪಸರ್ಜನಂ ಪೂರ್ವಮ್' ಸೂತ್ರದಿಂದ 'ಪೂರ್ವಮ್' ಅನುವೃತ್ತಿ. **ಸೂತ್ರಾರ್ಥ**—ರಾಜದಂತಾದಿ ಗಣಪಠಿತಗಳಾದ ಶಬ್ದಗಳಲ್ಲಿ ಪೂರ್ವ ಪ್ರಯೋಗಕ್ಕೆ ಉಚಿತವಾದ ಪದವು ಪರಪ್ರಯೋಗವನ್ನು ಹೊಂದುತ್ತದೆ. ಉಪಸರ್ಜ ನಕ್ಕೆ ಪೂರ್ವಪ್ರಯೋಗವೆಂದು ಹಿಂದೆ ಹೇಳಿದೆ. ಅದಕ್ಕೆ ಅಪವಾದವಾಗಿ ಈಗ ಪರಪ್ರಯೋಗ ಹೇಳಿರುತ್ತಾನೆ. ದಂತಾನಾಂ ರಾಜಾನಃ ॥ ದಂತ+ಆಮ್+ ರಾಜನ್+ಜಸ್. ಇಲ್ಲಿ ದಂತ ಉಪಸರ್ಜನವಾದುದರಿಂದ ಪೂರ್ವಪ್ರಯೋಗಾರ್ಹ ವಾಗಿರುವುದರಿಂದ ಅದಕ್ಕೆ ಪರಪ್ರಯೋಗ. ರಾಜದಂತಾಃ । ಎದುರಿಗೆ ಕಾಣುವ ನಾಲ್ಕು ಹಲ್ಲುಗಳು. ಇದರಲ್ಲಿ ಸೇರಿದ ಶಬ್ದಗಳನ್ನು ಗಣಪಾಠದಿಂದ ತಿಳಿಯಬೇಕು. ಧರ್ಮಾರ್ಥ ಮುಂತಾದ ಪದಗಳೂ ಇದರಲ್ಲಿ ಸೇರಿರುವುದರಿಂದ ಅಲ್ಲಿಯೂ ಈ ನಿಯಮ

ಪ್ರಾಪ್ತವಾದರೆ ವಾರ್ತಿಕದಿಂದ ಅನಿಯಮ ಹೇಳುತ್ತಾನೆ. **ವಾರ್ತಿಕಾರ್ಥ**— ಧರ್ಮಾದಿಗಳಲ್ಲಿ ಈ ನಿಯಮವಿಲ್ಲ. ಯಾವುದಕ್ಕಾದರೂ ಪೂರ್ವನಿಪಾತ ಹೇಳ ಬಹುದು. ಅರ್ಥಶ್ಚ ಧರ್ಮಶ್ಚ ಅರ್ಥಧರ್ಮೌ, ಧರ್ಮಾರ್ಥೌ ಎಂದು ಎರಡು ರೀತಿಯಾಗಿಯೂ ಹೇಳಬಹುದು.

ಘಿಸಂಜ್ಞೆಗೆ ಪೂರ್ವಪ್ರಯೋಗ ಹೇಳುವ ಸೂತ್ರ.

**೯೯೦. ದ್ವಂದ್ವೇ ಘಿ ॥ ೨-೨-೩೨ ॥**

**ದ್ವಂದ್ವೇ ಘಿಸಂಜ್ಞಂ ಪೂರ್ವಂ ಸ್ಯಾತ್ । ಹರಿಶ್ಚ ಹರಶ್ಚ ಹರಿಹರೌ ॥**

ದ್ವಿಪದ ಸೂತ್ರ. 'ಪೂರ್ವಮ್' ಅನುವೃತ್ತಿ. **ಸೂತ್ರಾರ್ಥ**—ದ್ವಂದ್ವ ಸಮಾಸ ದಲ್ಲಿ ಘಿಸಂಜ್ಞೆಯುಳ್ಳ ಪದವು ಪೂರ್ವಪ್ರಯೋಗವನ್ನು ಹೊಂದುತ್ತದೆ. ದ್ವಂದ್ವದಲ್ಲಿ ಉಭಯಪದಾರ್ಥಗಳಿಗೂ ಪ್ರಾಧಾನ್ಯವಿರುವುದರಿಂದ ಯಾವ ಪದವನ್ನಾದರೂ ಮೊದಲು ಹೇಳಬಹುದು. ನಿಯಮಕ್ಕೋಸ್ಕರ ಈ ಸೂತ್ರ ಆರಬ್ಧವಾಗಿದೆ. ಹರಿಶ್ಚ, ಹರಶ್ಚ ವಿಗ್ರಹಮಾಡಿದಾಗ ಹರಿ ಶಬ್ದಕ್ಕೆ ಘಿಸಂಜ್ಞಾ ಇರುವುದರಿಂದ ಅದು ಮೊದಲು ಪ್ರಯೋಗವನ್ನು ಹೊಂದುತ್ತದೆ. ಹರಿಹರೌ। ನದೀಸಂಜ್ಞೆ ಇಲ್ಲದ ಹ್ರಸ್ವ ಇಕಾರಾಂತ, ಉಕಾರಾಂತ ಪದಗಳಿಗೆ ಘಿಸಂಜ್ಞಾ 'ಶೇಷೋಘ್ಯಸಖಿ' ಸೂತ್ರದಿಂದ ಹೇಳಿದೆ.

ಅಜಾದ್ಯದಂತಕ್ಕೆ ಪೂರ್ವಪ್ರಯೋಗ ಹೇಳುವ ಸೂತ್ರ.

**೯೯೧. ಅಜಾದ್ಯದಂತಮ್ ॥ ೨-೨-೩೩ ॥**

**ದ್ವಂದ್ವೇ ಪೂರ್ವಂ ಸ್ಯಾತ್ । ಈಶಕೃಷ್ಣೌ ॥**

ಏಕಪದ ಸೂತ್ರ. 'ದ್ವಂದ್ವೇ', 'ಪೂರ್ವಮ್' ಅನುವೃತ್ತಿ. ದ್ವಂದ್ವ ಸಮಾಸ ದಲ್ಲಿ ಅಜಾದಿಯಾಗಿಯೂ, ಅದಂತವಾಗಿಯೂ ಇರುವ ಪದವು ಪೂರ್ವಪ್ರಯೋಗ ವನ್ನು ಹೊಂದುತ್ತದೆ. ಈಶಶ್ಚ ಕೃಷ್ಣಶ್ಚ ಈಶಕೃಷ್ಣೌ ॥ ಇಲ್ಲಿ ಯಾವ ಪದವನ್ನಾದರೂ ಪೂರ್ವದಲ್ಲಿ ಪ್ರಯೋಗಿಸಬಹುದಾಗಿತ್ತು. ಈ ನಿಯಮದಿಂದ ಈಶ ಶಬ್ದವು ಹ್ರಸ್ವಾ ಕಾರಾಂತವಾಗಿ ಅಜಾದಿಯಾಗಿರುವುದರಿಂದ ಪೂರ್ವಪ್ರಯೋಗಹೊಂದುತ್ತದೆ.

ಅಲ್ಪಾಚಿಗೆ ಪೂರ್ವಪ್ರಯೋಗ ಹೇಳುವ ಸೂತ್ರ.

**೯೯೨. ಅಲ್ಪಾಚ್‌ತರಮ್ ॥ ೨-೨-೩೪ ॥ ಶಿವಕೇಶವೌ ॥**

ಏಕಪದ ಸೂತ್ರ. ಅಲ್ಪಃ (ಅಲ್ಪಸಂಖ್ಯಃ) ಅಚ್ ಯಸ್ಯ ಸಃ ಅಲ್ಪಾಚ್ ॥ ಅಲ್ಪಾಚೇವ ಅಲ್ಪಾಚ್‌ತರಮ್. ಸ್ವಾರ್ಥದಲ್ಲಿ ತರಪ್ ಪ್ರತ್ಯಯ. **ಸೂತ್ರಾರ್ಥ**— ದ್ವಂದ್ವಸಮಾಸದಲ್ಲಿ ಕಡಿಮೆಯ ಅಚುಳ್ಳ ಪದವು ಪೂರ್ವಪ್ರಯೋಗವನ್ನು ಹೊಂದು

ತ್ತದೆ. ಶಿವಶ್ಚ ಕೇಶವಶ್ಚ ಶಿವಕೇಶವೌ ‖ ಶಿವ ಪದವು ಕೇಶವ ಪದಕ್ಕಿಂತ ಕಡಿಮೆ ಅಚುಳ್ಳದ್ದರಿಂದ ಪೂರ್ವಪ್ರಯೋಗ ಹೊಂದಿದೆ.

ಪಿತೃ ಶಬ್ದಕ್ಕೆ ಶೇಷ ಹೇಳುವ ಸೂತ್ರ.

**೯೯೩. ಪಿತಾ ಮಾತ್ರಾ ‖ ೧-೨-೭೦ ‖**

**ಮಾತ್ರಾ ಸಹೋಕ್ತೌ ಪಿತಾ ವಾ ಶಿಷ್ಯತೇ । ಮಾತಾ ಚ ಪಿತಾ ಚ ಪಿತರೌ ‖ ಮಾತಾಪಿತರೌ ವಾ ‖**

ದ್ವಿಪದ ಸೂತ್ರ. ಏಕಶೇಷಸಮಾಸಪ್ರಕರಣವನ್ನು ಪ್ರತ್ಯೇಕವಾಗಿ ಹೇಳದಿರುವುದರಿಂದ ದ್ವಂದ್ವದಲ್ಲಿಯೇ ಏಕಶೇಷ ಹೇಳುತ್ತಾನೆ. 'ಸರೂಪಾಣಾಂ ಏಕಶೇಷಃ ಏಕವಿಭಕ್ತೌ' ಸೂತ್ರ ಹಿಂದೆ ಶಬ್ದಾಧಿಕಾರದಲ್ಲಿ ಹೇಳಿದೆ. **ಸೂತ್ರಾರ್ಥ**—ಮಾತೃ ಶಬ್ದದೊಡನೆ ಪಿತೃ ಶಬ್ದಕ್ಕೆ ಸಮಾಸ ಬಂದಾಗ ಪಿತೃ ಶಬ್ದವು (ಒಂದೇ) ವಿಕಲ್ಪವಾಗಿ ಉಳಿಯುತ್ತದೆ. ಮಾತಾ ಚ ಪಿತಾ ಚ ಪಿತರೌ ‖ ಪಿತೃ ಶಬ್ದಕ್ಕೆ ಶೇಷ ಬಾರದಿದ್ದರೆ ಮಾತಾಪಿತರೌ ಎಂದೇ ಇರುತ್ತದೆ.

ದ್ವಂದ್ವಕ್ಕೆ ಏಕವದ್ಭಾವ ಹೇಳುವ ಸೂತ್ರ.

**೯೯೪. ದ್ವಂದ್ವಶ್ಚ ಪ್ರಾಣಿತೂರ್ಯಸೇನಾಙ್ಗಾನಾಮ್ ‖ ೨-೪-೨ ‖**

**ಏಷಾಂ ದ್ವಂದ್ವಃ ಏಕವತ್ ‖ ಪಾಣಿಪಾದಮ್ । ಮಾರ್ದಂಗಿಕವೈಣವಿಕಮ್ । ರಥಿಕಾಶ್ವಾರೋಹಮ್ ‖**

ತ್ರಿಪದ ಸೂತ್ರ. ಪ್ರಾಣೀ ಚ ತೂರ್ಯಂ ಚ ಸೇನಾ ಚ ಪ್ರಾಣಿತೂರ್ಯಸೇನಾಃ ‖ ತೇಷಾಂ ಅಂಗಾನಿ. ತೇಷಾಮ್. ದ್ವಂದ್ವಾಂತದಲ್ಲಿ ಅಂಗ ಶಬ್ದವು ಶ್ರುತವಾದುದರಿಂದ ಅದಕ್ಕೆ ಪ್ರತ್ಯೇಕಾನ್ವಯ. **ಸೂತ್ರಾರ್ಥ**—ಪ್ರಾಣ್ಯಂಗಗಳ, ತೂರ್ಯಾಂಗಗಳ, ಸೇನಾಂಗಗಳ ದ್ವಂದ್ವಸಮಾಸವು ಏಕವಚನವನ್ನು ಹೊಂದುತ್ತದೆ. ಸಮಾಹಾರದ್ವಂದ್ವದಲ್ಲಿ ಏಕವಚನವು ಸಿದ್ಧವಾಗುವಾಗ ಪುನಃ ಇಲ್ಲಿ ದ್ವಂದ್ವಕ್ಕೆ ಏಕವಚನ ಹೇಳಿರುವುದು ವ್ಯರ್ಥವಾಗಿ ನಿಯಮವನ್ನು ತಿಳಿಸುತ್ತದೆ. ಪ್ರಾಣ್ಯಂಗ, ತೂರ್ಯಾಂಗ, ಸೇನಾಂಗಗಳಿಗೆ ದ್ವಂದ್ವಸಮಾಸ ಬರುವುದಾದರೆ ಸಮಾಹಾರದ್ವಂದ್ವವೇ; ಇತರೇತರಯೋಗದ್ವಂದ್ವ ಬರುವುದಿಲ್ಲ. ಪ್ರಾಣ್ಯಂಗಕ್ಕೆ, ಪಾಣ್ಯೋಶ್ಚ ಪಾದಯೋಶ್ಚ ಸಮಾಹಾರಃ ಪಾಣಿಪಾದಮ್ ‖ ಕೈಕಾಲುಗಳ ಸಮುದಾಯ. ತೂರ್ಯಾಂಗಕ್ಕೆ (ವಾದ್ಯವಿಶೇಷ), ಮಾರ್ದಂಗಿಕಶ್ಚ ವೈಣವಿಕಶ್ಚ ತಯೋಃ ಸಮಾಹಾರಃ ಮಾರ್ದಂಗಿಕವೈಣವಿಕಮ್ ‖ ಮೃದಂಗ ಬಾರಿಸುವವರ, ವೀಣಾ ನುಡಿಸುವವರ ಸಮುದಾಯ. 'ತದಸ್ಯ ಶಿಲ್ಪಮ್' ಸೂತ್ರದಿಂದ ಮೃದಂಗವಾದನಂ, ವೀಣಾವಾದನಂ ಶಿಲ್ಪಮಸ್ಯ

ಎಂಬರ್ಥದಲ್ಲಿ ಮೃದಂಗ, ವೀಣಾ ಶಬ್ದಗಳ ಮೇಲೆ ಠಕ್ ಪ್ರತ್ಯಯ ಬಂದಿದೆ. ಸೇನಾಂಗಕ್ಕೆ, ರಥಿಕಾಶ್ಚ ಅಶ್ವಾರೋಹಾಶ್ಚ ತೇಷಾಂ ಸಮಾಹಾರಃ ರಥಿಕಾಶ್ವಾರೋಹಮ್ ॥ ರಥದಲ್ಲಿ ತಿರುಗುವವರ, ಕುದುರೆಸವಾರರ ಸಮುದಾಯ. ಇನ್ನು ದ್ವಂದ್ವಸಮಾಸಾಂತಪ್ರತ್ಯಯಗಳನ್ನು ಹೇಳುತ್ತಾನೆ.

ದ್ವಂದ್ವದಲ್ಲಿ ಟಚ್ ಪ್ರತ್ಯಯ ಹೇಳುವ ಸೂತ್ರ.

೯೯೫. ದ್ವಂದ್ವಾಚ್ಚುದಷಹಾನ್ತಾತ್ಸಮಾಹಾರೇ ॥ ೫-೪-೧೦೬ ॥

**ಚವರ್ಗಾನ್ತಾದ್ದಷಹಾನ್ತಾಚ್ಚ ದ್ವಂದ್ವಾಟ್ಟಚ್ ಸ್ಯಾತ್ ಸಮಾಹಾರೇ । ವಾಕ್ ಚ ತ್ವಕ್ ಚ ವಾಕ್ತ್ವಚಮ್ । ತ್ವಕ್ಸ್ರಜಮ್ । ಶಮೀದೃಷದಮ್ ॥ ವಾಕ್ತ್ವಿಷಮ್ । ಛತ್ರೋಪಾನಹಮ್ । ಸಮಾಹಾರೇ ಕಿಮ್ ? ಪ್ರಾವೃಟ್ ಶರದೌ ॥**

**ಇತಿ ದ್ವಂದ್ವಃ ॥ ೫ ॥**

ದ್ವಂದ್ವಾತ್, ಚುದಷಹಾನ್ತಾತ್, ಸಮಾಹಾರೇ ॥ ' ರಾಜಾಹಃ ಸಖಿಭ್ಯಃ—' ಸೂತ್ರದಿಂದ ' ಟಚ್ ' ಅನುವೃತ್ತಿ. ಚು ಉದಿತ್ತಾದುದರಿಂದ ಚವರ್ಗಗ್ರಹಣ. ದ, ಷ, ಹ ವರ್ಣಗಳು. ದ್ವಂದ್ವಕ್ಕೆ ವಿಶೇಷಣವಾದುದರಿಂದ ತದಂತಲಾಭ. **ಸೂತ್ರಾರ್ಥ**—ಸಮಾಹಾರ ತೋರುವಾಗ ಚವರ್ಗಾಂತವಾದ ದಕಾರ, ಷಕಾರ, ಹಕಾರಾನ್ತವಾದ ದ್ವಂದ್ವಸಮಾಸದಮೇಲೆ ಟಚ್ ಸಮಾಸಾಂತವಾಗಿ ಬರುತ್ತದೆ. ಚವರ್ಗಾಂತಕ್ಕೆ—ವಾಕ್ ಚ ತ್ವಕ್ ಚ ತಯೋಃ ಸಮಾಹಾರಃ । (ವಾಚ್+ಸು, ತ್ವಚ್+ಸು) ಚಕಾರಾಂತ ಶಬ್ದವಾದುದರಿಂದ ಚಾಂತದ್ವಂದ್ವವಾಗಿದೆ. ವಾಕ್ ತ್ವಚ್+ಅ=ವಾಕ್ತ್ವಚಮ್. ಸಮಾಹಾರದ್ವಂದ್ವವಾದುದರಿಂದ ನಪುಂಸಕ ಏಕವಚನ ಬಂದಿದೆ. ತ್ವಕ್ ಚ ಸ್ರಕ್ ಚ ತಯೋಃ ಸಮಾಹಾರಃ (ತ್ವಚ್+ಸು+ಸ್ರಜ್+ಸು) ತ್ವಕ್ಸ್ರಜ್+ಅ=ತ್ವಕ್ಸ್ರಜಮ್. ದಾಂತಕ್ಕೆ—ಶಮೀ ಚ ದೃಷಚ್ಚ ತಯೋಃ ಸಮಾಹಾರಃ । (ಶಮೀ+ಸು+ದೃಷದ್+ಸು) ಶಮೀದೃಷದ್+ಅ= ಶಮೀದೃಷದಮ್. ಅರಣಿಯೆಂಬ ಮರದಿಂದ ಮಾಡಿದ ಯಜ್ಞದ ಪಾತ್ರ ಮತ್ತು ಕಲ್ಲು ಇವುಗಳ ಸಮುದಾಯ. ಷಾಂತಕ್ಕೆ—ವಾಕ್ ಚ ತ್ವಿಟ್ ಚ ತಯೋಃ ಸಮಾಹಾರಃ । (ವಾಚ್+ಸು+ತ್ವಿಷ್+ಸು) ವಾಕ್ತ್ವಿಷ್+ಅ=ವಾಕ್ತ್ವಿಷಮ್ (ಮಾತು ಮತ್ತು ಕಾಂತಿ). ಹಾನ್ತಕ್ಕೆ—ಛತ್ರಂ ಚ ಉಪಾನಹೌ ಚ ತೇಷಾಂ ಸಮಾಹಾರಃ । (ಛತ್ರ+ಸು+ಉಪಾನಹ್+ಔ) ಛತ್ರೋಪಾನಹ್+ಅ=ಛತ್ರೋಪಾನಹಮ್. ಸಮಾಹಾರದ್ವಂದ್ವದಲ್ಲಿ ಮಾತ್ರ ಈ ಸಮಾಸಾಂತ ಟಚ್ ಎಂದುದೇಕೆ? ಅಂದರೆ ಇತರೇತರಯೋಗದ್ವಂದ್ವದಲ್ಲಿ ಬರುವುದಿಲ್ಲ. ಪ್ರಾವೃಟ್ಶರದೌ. ಇತರೇತರಯೋಗದ್ವಂದ್ವವಾದುದರಿಂದ ದಾಂತವಾದರೂ ಟಚ್ ಬರುವುದಿಲ್ಲ. ಪ್ರಾವೃಟ್ ಚ,

ಶರಚ್ಚ. (ಪ್ರಾವೃಷ್ + ಸು + ಶರದ್ + ಸು) ಪ್ರಾವಟ್‌ಶರದೌ. ಹೀಗೆ ಐದು ಸಮಾಸಗಳನ್ನು ವಿಭಾಗಿಸಿ ಕ್ರಮವಾಗಿ ಅವುಗಳನ್ನು ಸಂಗ್ರಹವಾಗಿ ವಿವರಿಸಿರುತ್ತಾನೆ.

ದ್ವಂದ್ವಸಮಾಸ ಮುಗಿದಿದೆ.

# ೨೨. ಅಥ ಸಮಾಸಾಂತಪ್ರಕರಣಮ್

ಋಚಾದಿಗಳಿಗೆ ಅಪ್ರತ್ಯಯ ಹೇಳುವ ಸೂತ್ರ.

**೯೯೬. ಋಕ್ಪೂರಬ್ಧೂಃಪಥಾಮಾನಕ್ಷೇ ॥ ೫-೪-೭೪ ॥**

**ಅ ಅನಕ್ಷೇ ಇತಿಚ್ಛೇದಃ। ಋಗಾದ್ಯಂತಸ್ಯ ಸಮಾಸಸ್ಯ ಅಪ್ರತ್ಯಯೋಽನ್ತಾವಯವೋಽಕ್ಷೇ ಯಾ ಧೂಸ್ತದಂತಸ್ಯ ತು ನ। ಅರ್ಧರ್ಚಃ। ವಿಷ್ಣುಪುರಮ್। ವಿಮಲಾಪಂ ಸರಃ। ರಾಜಧುರಾ। ಅಕ್ಷೇ ತು ಅಕ್ಷಧೂಃ। ದೃಢಧೂರಕ್ಷಃ। ಸಖಿಪಥಃ। ರಮ್ಯಪಥೋ ದೇಶಃ ॥**

ಈಗ ಸರ್ವಸಮಾಸಗಳಿಗೆ ಸಾಧಾರಣಸಮಾಸಾಂತ ಪ್ರತ್ಯಯಗಳನ್ನು ವಿವರಿಸುತ್ತಾನೆ. ಋಕ್ಪೂರಬ್ಧೂಃಪಥಾಮ್, ಅ, ಅನಕ್ಷೇ ॥ ತ್ರಿಪದ ಸೂತ್ರ. ಅನಕ್ಷೇ ಎಂದು ಒಂದು ಪದವೆಂಬ ಭ್ರಾಂತಿನಿವಾರಣೆಗೆ ಪದಚ್ಛೇದ ತೋರಿಸಿರುತ್ತಾನೆ. ಅ ಲುಪ್ತ ಪ್ರಥಮಾಕಪದ. 'ಸಮಾಸಾಂತಾಃ' ಅಧಿಕಾರ. ಋಗಾದಿಗಳು ಸಮಾಸಕ್ಕೆ ವಿಶೇಷಣವಾದುದರಿಂದ ತದಂತಲಾಭ. **ಸೂತ್ರಾರ್ಥ**—ಋಕ್, ಪುರ್, ಅಪ್, ಧುರ್, ಪಥಿನ್ ಅಂತವಾದ ಸಮಾಸಕ್ಕೆ ಅಕಾರರೂಪ ಪ್ರತ್ಯಯವು ಅಂತಾವಯವವಾಗಿ ಬರುತ್ತದೆ; ಅಕ್ಷಸಂಬಂಧಿ ಧುರ್ ಶಬ್ದಕ್ಕೆ ಮಾತ್ರ ಬರುವುದಿಲ್ಲ. ಉದಾ.—ಋಚಃ + ಅರ್ಧಂ = ಅರ್ಧರ್ಚ್ + ಅ = ಅರ್ಧರ್ಚಃ ॥ ವಿಷ್ಣೋಃ + ಪೂಃ ॥ ವಿಷ್ಣು + ಙಸ್ + ಪುರ್ + ಸು. ವಿಷ್ಣುಪುರ್ + ಅ = ವಿಷ್ಣುಪುರಮ್. ಇವೆರಡೂ ತತ್ಪುರುಷ ಸಮಾಸ. ವಿಮಲಾಃ ಆಪಃ ಯಸ್ಮಿನ್ ತತ್. ತಿಳಿಯಾದ ನೀರು ಉಳ್ಳದ್ದು ಸರೋವರ. ವಿಮಲಾಪ್ + ಅ = ವಿಮಲಾಪಮ್. ಬಹುವ್ರೀಹಿ. ರಾಜ್ಞಃ + ಧೂಃ = ರಾಜಧುರ್ + ಅ = ರಾಜಧುರಾ. ತತ್ಪುರುಷದಲ್ಲಿ ಪರಪದದ ಲಿಂಗಕ್ಕೆ ಪ್ರಾಧಾನ್ಯವಿರುವುದರಿಂದ ಸ್ತ್ರೀಲಿಂಗ ಬಂದಿದೆ. ವಿಷ್ಣುಪುರಮ್ ಎಂಬಲ್ಲಿ ಪುರ್ ಶಬ್ದ ಸ್ತ್ರೀಲಿಂಗವಾದರೂ ಲೋಕದಲ್ಲಿ ನಪುಂಸಕಾಂತ ಪ್ರಯೋಗವೇ ಇರುವುದರಿಂದ ಪರವಲ್ಲಿಂಗ ಬರಲಿಲ್ಲ. ಸಖ್ಯುಃ + ಪಂಥಾಃ ॥ ಸಖಿ + ಙಸ್ + ಪಥಿನ್ + ಸು. ಸಖಿಪಥಿನ್ + ಅ. 'ನಸ್ತದ್ಧಿತೇ' ಟಲೋಪ. (ಅನ್) ಸಖಿಪಥಃ ॥ ರಮ್ಯಃ ಪನ್ಥಾಃ ಯಸ್ಮಿನ್ ಸಃ ॥ ರಮ್ಯಪಥಿನ್ + ಅ = ರಮ್ಯಪಥಃ ॥ ಮನೋಹರ ಮಾರ್ಗವುಳ್ಳ ದೇಶ. ಅಕ್ಷಸಂಬಂಧಿ

ಧುರ್ ಆದರೆ ಅಪ್ರತ್ಯಯ ಬರುವುದಿಲ್ಲ. ಅಕ್ಷಸ್ಯ + ಧೂಃ = ಅಕ್ಷಧುರ್ ‖ 'ರ್ವೋರುಪಧಾಯಾಃ ದೀರ್ಘ ಇಕಃ' ಸೂತ್ರದಿಂದ ದೀರ್ಘ. ರೇಫಕ್ಕೆ ವಿಸರ್ಗ. ಅಕ್ಷಧೂಃ = ಚಕ್ರದ ಅಗ್ರಭಾಗ. ದೃಢಾ ಧೂಃ ಯಸ್ಯ ಸಃ ದೃಢಧೂಃ ‖ ಗಟ್ಟಿಯಾದ ಮುಂಭಾಗವುಳ್ಳ ಚಕ್ರ. ಅ ಬಾರದಿರುವುದರಿಂದ ಧುರ್ ಎಂದೇ ಇರುತ್ತದೆ.

ಅಕ್ಷಿ ಶಬ್ದಕ್ಕೆ ಅಚ್ ಹೇಳುವ ಸೂತ್ರ.

**೯೯೭. ಅಕ್ಷ್ಣೋಽದರ್ಶನಾತ್ ‖ ೫-೪-೭೬ ‖**

**ಅಚಕ್ಷುಃ ಪರ್ಯಾಯಾದಕ್ಷ್ಣೋಽಚ್ ಸ್ಯಾತ್ ಸಮಾಸಾಂತಃ । ಗವಾಮಕ್ಷೀವ ಗವಾಕ್ಷಃ ‖**

ಅಕ್ಷ್ಣಃ, ಅದರ್ಶನಾತ್ ‖ ದ್ವಿಪದ ಸೂತ್ರ. ದೃಶ್ಯತೇ ಅನೇನ ಇತಿ ದರ್ಶನಂ. ಕಣ್ಣು. **ಸೂತ್ರಾರ್ಥ**—ಚಕ್ಷುಃ ಪರ್ಯಾಯವಾಚಕವಾಗದ (ಕಣ್ಣು ಎಂಬ ಅರ್ಥ ಕೊಡದ), ಅಕ್ಷಿ ಶಬ್ದಕ್ಕೆ ಅಚ್ ಸಮಾಸಾಂತವಾಗಿ ಬರುತ್ತದೆ. ಗವಾಂ ಅಕ್ಷೀವ ಗವಾಕ್ಷಃ । ಇಲ್ಲಿ ಅಕ್ಷಿಶಬ್ದವು ರಂಧ್ರ ಎಂಬರ್ಥ ಕೊಡುತ್ತದೆ. ಗೋವಿನ ಕಣ್ಣಿನಂತೆ ರಂಧ್ರವಿರುವುದರಿಂದ ಕಿಟಕಿಗೆ ಗವಾಕ್ಷ ಎಂದು ಹೆಸರು. ಗೋ + ಅಕ್ಷಿ + ಅ ಎಂದಿರುವಾಗ ಓಕಾರಕ್ಕೆ ಅವಙ್. 'ಯಸ್ಯೇತಿ ಚ' ಇಕಾರಲೋಪ. ಗವಾಕ್ಷಃ ‖

ಅಧ್ವನ್ ಶಬ್ದಕ್ಕೆ ಅಚ್ ಹೇಳುವ ಸೂತ್ರ.

**೯೯೮. ಉಪಸರ್ಗಾದಧ್ವನಃ ‖ ೫-೪-೮೫ ‖**

**ಪ್ರಗತೋಽಧ್ವಾನಂ ಪ್ರಾಧ್ವೋ ರಥಃ ‖**

ಉಪಸರ್ಗಾತ್, ಅಧ್ವನಃ ‖ ದ್ವಿಪದ ಸೂತ್ರ. **ಸೂತ್ರಾರ್ಥ**—ಉಪಸರ್ಗದ ಪರದಲ್ಲಿರುವ ಅಧ್ವನ್ ಶಬ್ದಕ್ಕೆ ಅಚ್ ಸಮಾಸಾಂತವಾಗಿ ಬರುತ್ತದೆ. ಪ್ರಗತಃ ಅಧ್ವಾನಮ್. 'ಅತ್ಯಾದಯಃ ಕ್ರಾಂತಾ—' ವಾರ್ತಿಕದಿಂದ ಸಮಾಸ. ಪ್ರ + ಅಧ್ವನ್ + ಅ. 'ನಸ್ತದ್ಧಿತೇ' ಟಿಲೋಪ. ಸವರ್ಣದೀರ್ಘ. ಪ್ರಾಧ್ವಃ ‖

ಸಮಾಸಾಂತಪ್ರತ್ಯಯಗಳಿಗೆ ನಿಷೇಧ ಹೇಳುವ ಸೂತ್ರ.

**೯೯೯. ನ ಪೂಜನಾತ್ ‖ ೫-೪-೬೯ ‖**

**ಪೂಜನಾರ್ಥಾತ್ಪರೇಭ್ಯಃ ಸಮಾಸಾಂತಾ ನ ಸ್ಯುಃ । ಸುರಾಜಾ । ಅತಿರಾಜಾ ‖**

ಇತಿ ಸಮಾಸಾಂತಾಃ ‖

ದ್ವಿಪದ ಸೂತ್ರ. 'ಸಮಾಸಾಂತಾಃ' ಅಧಿಕಾರ. ಸೂತ್ರಾರ್ಥ—ಪೂಜ ನಾರ್ಥವನ್ನು ಕೊಡುವ ಪದದ ಪರದಲ್ಲಿರುವ ಪದಗಳ ಮೇಲೆ ಸಮಾಸಾಂತಪ್ರತ್ಯಯ ಗಳು ಬರುವುದಿಲ್ಲ. 'ಪರೇಭ್ಯಃ' ಅಧ್ಯಾಹಾರದಿಂದ ಲಬ್ಧವಾಗಿದೆ. ಪೂಜಾರ್ಥವನ್ನು ಕೊಡುವವುಗಳು ಸು, ಅತಿ ಪದಗಳೇ ಆಗಬೇಕೆಂದು ವ್ಯಾಖ್ಯಾಕಾರರು ಹೇಳಿರುತ್ತಾರೆ. ಶೋಭನಃ ರಾಜಾ। ಅತಿಶಯಿತಃ ರಾಜಾ। 'ಕುಗತಿಪ್ರಾದಯಃ' ಸೂತ್ರದಿಂದ ಸಮಾಸ. ಸುರಾಜಾ, ಅತಿರಾಜಾ. 'ರಾಜಾಹಃ ಸಖಿಭ್ಯಷ್ಟಚ್' ಸೂತ್ರದಿಂದ ಟಚ್ ಸಮಾಸಾಂತ ಬರಬೇಕಾಗಿತ್ತು. ಸು, ಅತಿ ಪೂಜಾರ್ಥಕಗಳಾಗಿ ಅವುಗಳ ಪರದಲ್ಲಿ ಬಂದುದರಿಂದ ಟಚ್ ಬರುವುದಿಲ್ಲ. ಹೀಗೆ ಸಾಮಾನ್ಯವಾಗಿ ಎಲ್ಲಾ ಸಮಾಸ ಗಳಮೇಲೆ ಬರುವ ಪ್ರತ್ಯಯಗಳನ್ನು ಸಂಕ್ಷೇಪವಾಗಿ ಹೇಳಿರುತ್ತಾನೆ.

ಸಮಾಸಾಂತಪ್ರಕರಣ ಮುಗಿದಿದೆ.

# ೨೩. ಅಥ ತದ್ಧಿತಾಃ, ತತ್ರಾದೌ ಸಾಧಾರಣ ಪ್ರತ್ಯಯಾಃ

ಮೂರು ಪದಗಳಿಗೆ ಅಧಿಕಾರವನ್ನು ತಿಳಿಸುವ ಸೂತ್ರ.

**೧೦೦೦. ಸಮರ್ಥಾನಾಂ ಪ್ರಥಮಾದ್ವಾ ॥ ೪-೧-೮೨ ॥**

**ಇದಂ ಪದತ್ರಯಮಧಿಕ್ರಿಯತೇ ಪ್ರಾಗ್ದಿಶ ಇತಿ ಯಾವತ್ ॥**

ಸಮಾಸವಿಭಾಗವನ್ನು ವಿವರಿಸಿ ಈಗ ತದ್ಧಿತಪ್ರಕರಣವನ್ನು ಆರಂಭಿಸುತ್ತಾನೆ. ಸಾಮಾನ್ಯವಾಗಿ ಧಾತುವಿನ ಮೇಲೆ ಬರುವ ಪ್ರತ್ಯಯಗಳಿಗೆ ಕೃತ್ ಎಂದು ಹೆಸರು. ಕೃದಂತಶಬ್ದಗಳು ಹಿಂದೆ ಹೇಳಲ್ಪಟ್ಟವೆ. ಈಗ ಪ್ರಾತಿಪದಿಕ(ನಾಮ)ಗಳ ಮೇಲೆ ಬರುವ ಪ್ರತ್ಯಯಗಳನ್ನು ವಿವರಿಸುತ್ತಾನೆ. ಇವುಗಳಿಗೆ ತದ್ಧಿತಪ್ರತ್ಯಯಗಳೆಂದು ಹೆಸರು. ಮೊದಲು ಸಾಧಾರಣಪ್ರತ್ಯಯಗಳನ್ನು ಹೇಳಿ ಆಮೇಲೆ ಆಯಾಯ ಪ್ರಕರಣ ಗಳಲ್ಲಿ ವಿಶೇಷ ಪ್ರತ್ಯಯ ಹೇಳುತ್ತಾನೆ.

ಸಮರ್ಥಾನಾಂ, ಪ್ರಥಮಾತ್, ವಾ॥ ತ್ರಿಪದ ಅಧಿಕಾರಸೂತ್ರ. 'ಪ್ರಾಗ್ದಿಶೋ ವಿಭಕ್ತಿಃ' ಸೂತ್ರದವರೆಗೆ ಈ ಮೂರು ಪದಗಳು ಅಧಿಕೃತವಾಗುತ್ತವೆ. ಇದೂ ಪದವಿಧಿ ಯಾದುದರಿಂದ 'ಸಮರ್ಥಃ ಪದವಿಧಿಃ' ಸೂತ್ರವು ಇಲ್ಲಿಯೂ ಸಂಬದ್ಧವಾಗುತ್ತದೆ. ಏಕಾರ್ಥೀಭಾವಸಾಮರ್ಥ್ಯದಿಂದ ಕೂಡಿರುವಾಗಲೇ ತದ್ಧಿತಪ್ರತ್ಯಯವಿಧಾನ. ಸೂತ್ರ ದಲ್ಲಿ ಸಮರ್ಥಪದವು (ಶಕ್ತ) ಅರ್ಥಪ್ರತಿಪಾದಕ ಎಂಬರ್ಥ ಕೊಡುತ್ತದೆ. ಅರ್ಥಪ್ರತಿ ಪಾದಕವಾಗಬೇಕಾದರೆ ಸಂಧಿಕಾರ್ಯಾದಿಗಳನ್ನು ಹೊಂದಿ ಪರಿನಿಷ್ಠಿತವಾಗಿರಬೇಕು.

ಸಮರ್ಥಾನಾಂ ನಿರ್ಧಾರಣಷಷ್ಠೀ. ಉತ್ತರಸೂತ್ರಗಳಲ್ಲಿ ಈ ಸೂತ್ರ ಹೋಗಿ ಪರಿನಿಷ್ಠಿತರೂಪಹೊಂದಿದ ಪದಗಳ ಮಧ್ಯದಲ್ಲಿ ಯಾವುದು ಪ್ರಥಮೋಚ್ಚರಿತವಾಗಿದೆಯೋ ಅದರಮೇಲೆ ಏಕಾರ್ಥೀಭಾವಸಾಮರ್ಥ್ಯವಿರುವಾಗ ವಿಕಲ್ಪವಾಗಿ ಆಯಾಯ ಪ್ರತ್ಯಯಗಳು ಬರುತ್ತವೆ ಎಂದು ಅರ್ಥಕೊಡುತ್ತದೆ. 'ತಸ್ಯಾಪತ್ಯಮ್' ಅಣ್ ಪ್ರತ್ಯಯ ವಿಧಾಯಕ ಸೂತ್ರ. ಅಲ್ಲಿ ಪ್ರಥಮೋಚ್ಚರಿತವಾದ ಸಮರ್ಥಪದವೆಂದರೆ ಷಷ್ಠ್ಯಂತ ಪದ. ಅದರಮೇಲೆಯೇ ಪ್ರತ್ಯಯ ಬರುತ್ತದೆ.

ಅಶ್ವಪತ್ಯಾದಿಗಳಿಗೆ ಅಣ್ ಹೇಳುವ ಸೂತ್ರ.

**೧೦೦೧. ಅಶ್ವಪತ್ಯಾದಿಭ್ಯಶ್ಚ ॥ ೪-೧-೮೪ ॥**

**ಏಭ್ಯೋಽಣ್ ಸ್ಯಾತ್ ಪ್ರಾಗ್ದೀವ್ಯತೀಯೇಷ್ವರ್ಥೇಷು । ಅಶ್ವಪತೇರಪತ್ಯಾದಿ ಆಶ್ವಪತಮ್ । ಗಾಣಪತಮ್ ॥**

ದ್ವಿಪದ ಸೂತ್ರ. 'ಪ್ರಾಗ್ದೀವ್ಯತೋಽಣ್' ಸೂತ್ರದಿಂದ ಅಣ್ ಅಧಿಕೃತವಾಗುತ್ತದೆ. **ಸೂತ್ರಾರ್ಥ**—ಅಶ್ವಪತ್ಯಾದಿಗಣಪಠಿತಗಳಾದ ಶಬ್ದಗಳ ಮೇಲೆ 'ತೇನ ದೀವ್ಯತಿ-' ಸೂತ್ರದವರೆಗೆ ಹೇಳಿರುವ ಅರ್ಥಗಳಲ್ಲಿ ಅಣ್ ಪ್ರತ್ಯಯ ಬರುತ್ತದೆ. 'ಅಪತ್ಯಮ್', 'ಭವಃ' ಮುಂತಾದ ನಾನಾರ್ಥಗಳು ಅಲ್ಲಿ ಸೇರಿವೆ. ಪತ್ಯಂತಕ್ಕೆ ಣ್ಯಪ್ರತ್ಯಯ ಹೇಳುವುದರಿಂದ ಅದಕ್ಕೆ ಅಪವಾದವಾಗಿ ಇಲ್ಲಿ ಅಣ್ ಹೇಳಿದೆ. ತದ್ಧಿತವೃತ್ತಿಯಾದುದರಿಂದ ಅದಕ್ಕೂ ವಿಗ್ರಹವಾಕ್ಯ ಹೇಳಬೇಕು. ಅಶ್ವಪತೇಃ ಅಪತ್ಯಮ್॥ ಅಶ್ವಪತಿ+ಙಸ್+ಅಣ್. ತದ್ಧಿತಾಂತಕ್ಕೆ 'ಕೃತ್ತದ್ಧಿತಸಮಾಸಾಶ್ಚ' ಸೂತ್ರದಿಂದ ಪ್ರಾತಿಪದಿಕಸಂಜ್ಞೆ ಬರುವುದರಿಂದ 'ಸುಪೋ ಧಾತುಪ್ರಾತಿಪದಿಕಯೋಃ' ಸೂತ್ರದಿಂದ ಅವಯವಸುಪಿಗೆ ಲುಕ್. ಅಶ್ವಪತಿ+ಅ. 'ತದ್ಧಿತೇಷ್ವಚಾಮಾದೇಃ'(ಸೂ. ೯೪೧) ಸೂತ್ರದಿಂದ ಣಿತ್ತಾದ ಅ ಪರದಲ್ಲಿರುವುದರಿಂದ ಆದಿಗೆ ವೃದ್ಧಿ (ಆ). 'ಯಸ್ಯೇತಿ ಚ' ಇಕಾರಲೋಪ. ಆಶ್ವಪತಮ್. ಅಶ್ವಪತಿಯ ಮಗ. ಹೀಗೆ ಅಶ್ವಪತಿಸಂಬಂಧವಾದುದು ಮುಂತಾದ ಅರ್ಥಗಳಲ್ಲಿಯೂ ಅಣ್ ಬಂದು ಹೀಗೇ ರೂಪವಾಗುತ್ತದೆ. 'ಗಣಪತಿಃ ದೇವತಾ ಅಸ್ಯ।' ಗಣಪತಿ+ಸು+ಅಣ್. ಹಿಂದಿನಂತೆ ಆದಿವೃದ್ಧಿ, ಇಕಾರಲೋಪ. ಗಾಣಪತಮ್. ಗಣಪತಿ ದೇವತೆಯಾಗಿರುವ ಮಂತ್ರ. ಈ ಅರ್ಥವೂ ದೀವ್ಯತೀಯಾರ್ಥಗಳಲ್ಲಿ ಸೇರಿದೆ.

ದಿತ್ಯಾದಿಗಳಿಗೆ ಣ್ಯಪ್ರತ್ಯಯ ಹೇಳುವ ಸೂತ್ರ.

**೧೦೦೨. ದಿತ್ಯದಿತ್ಯಾದಿತ್ಯಪತ್ಯುತ್ತರಪದಾಣ್ಣ್ಯಃ ॥ ೪-೧-೮೫ ॥**

**ದಿತ್ಯಾದಿಭ್ಯಃ ಪತ್ಯುತ್ತರಪದಾಚ್ಚ ಪ್ರಾಗ್ದೀವ್ಯತೀಯೇಷ್ವರ್ಥೇಷು ಣ್ಯಃ ಸ್ಯಾತ್ । ಅಣೋಽಪವಾದಃ। ದಿತೇರಪತ್ಯಂ ದೈತ್ಯಃ। ಅದಿತೇಃ, ಆದಿತ್ಯಸ್ಯ ವಾ ॥**

ದಿತ್ಯ........ಪದಾತ್, ಣ್ಯಃ ॥ ದ್ವಿಪದ ಸೂತ್ರ. ದಿತಿ, ಅದಿತಿ, ಆದಿತ್ಯ, ಪತಿ ಶಬ್ದವೇ ಉತ್ತರಪದವಾಗಿರುವ ಶಬ್ದ, ಇವುಗಳಿಗೆ ದೀವ್ಯತಿಪದಘಟಿತವಾದ ಸೂತ್ರದ ವರೆಗೆ ಹೇಳಿರುವ ಅರ್ಥಗಳಲ್ಲಿ ಣ್ಯಪ್ರತ್ಯಯು ಬರುತ್ತದೆ. ಣ್ಯದಲ್ಲಿ 'ಚುಟೂ' ಸೂತ್ರ ದಿಂದ ಣಕಾರ ಇತ್ತಾದರೆ ಯ ಉಳಿಯುತ್ತದೆ. ಸಾಮಾನ್ಯ ಸೂತ್ರದಿಂದ (ಪ್ರಾಗ್ ದೀವ್ಯತೋಽಣ್) ಅಣ್ ಬರುತ್ತಿರುವಾಗ ಇಲ್ಲಿ ಣ್ಯಪ್ರತ್ಯಯು ಹೇಳಿರುವುದರಿಂದ ಅಣಿಗೆ ಅಪವಾದವೆಂದು ತಿಳಿಯಬೇಕು. ದಿತೇಃ ಅಪತ್ಯಮ್. ದಿತಿ+ಙಸ್+ಯ. ಆದಿವೃದ್ಧಿ. ಇಕಾರಲೋಪ. ದೈತ್ಯಃ=ದಿತಿಯ ಮಗ. ಅದಿತೇಃ ಅಪತ್ಯಮ್. ಅದಿತಿ +ಯ=ಆದಿತ್ಯಃ=ಅದಿತಿಯ ಮಗ. ಆದಿತ್ಯಸ್ಯ ಅಪತ್ಯಮ್. (ಆದಿತ್ಯ+ಙಸ್ +ಯ) ಆದಿತ್ಯ+ಯ ಎಂದಿರುವಾಗ 'ಯಸ್ಯೇತಿ ಚ' ಸೂತ್ರದಿಂದ ಅಕಾರ ಲೋಪವಾದರೆ ಆದಿತ್ಯ+ಯ ಎಂದಿರುವಾಗ ವಿಕಲ್ಪವಾಗಿ ಯಕಾರಲೋಪ ಹೇಳುತ್ತಾನೆ.

ಯಮಿಗೆ ಲೋಪ ಹೇಳುವ ಸೂತ್ರ.

**೧೧೦೩. ಹಲೋ ಯಮಾಂ ಯಮಿ ಲೋಪಃ ॥ ೮-೪-೬೪ ॥**

**ಹಲಃ ಪರಸ್ಯ ಯಮೋ ಲೋಪಃ ಸ್ಯಾದ್ ವಾ ಯಮಿ ॥ ಇತಿ ಯಲೋಪಃ। ಆದಿತ್ಯಃ। ಪ್ರಾಜಾಪತ್ಯಃ। ವಾ ॥ (ದೇವಾದ್ಯಞಞೌ) ದೈವ್ಯಮ್। ದೈವಮ್। ವಾ ॥ (ಬಹಿಷಷ್ಟಿಲೋಪೋ ಯಞ್ಚ) ಬಾಹ್ಯಃ॥ ವಾ ॥ (ಈಕಕ್ ಚ)**

ನಾಲ್ಕು ಪದಗಳುಳ್ಳ ಸೂತ್ರ. ಹಲಃ ಪಂಚಮೀ. ಪರಕ್ಕೆ ಕಾರ್ಯವೆಂದು ಪರಿಭಾಷೆಯಿಂದ ತಿಳಿಯುತ್ತದೆ. ಯಮ್ ಪ್ರತ್ಯಾಹಾರ. **ಸೂತ್ರಾರ್ಥ**—ಹಲಿನ ಪರದಲ್ಲಿರುವ ಯಮಿಗೆ ಯಮ್ ಪರದಲ್ಲಿರುವಾಗ ವಿಕಲ್ಪವಾಗಿ ಲೋಪ ಬರುತ್ತದೆ. 'ಝಯೋಹೋಽನ್ಯತರಸ್ಯಾಮ್' ಸೂತ್ರದಿಂದ 'ಅನ್ಯತರಸ್ಯಾಮ್' ಅನುವೃತ್ತಿ. ಆದಿತ್ಯ್+ಯ. ಇಲ್ಲಿ ಹಲ್ ತಕಾರ. ಅದರ ಪರದಲ್ಲಿರುವ ಯಮ್ ಯಕಾರ. ಇದಕ್ಕೆ ಯಕಾರರೂಪ ಯಮ್ ಪರದಲ್ಲಿರುವುದರಿಂದ ಲೋಪ. ಆದಿತ್+ಯ= ಆದಿತ್ಯಃ। ಪತಿಶಬ್ದಾಂತಕ್ಕೆ ಉದಾ.—ಪ್ರಜಾಪತೇಃ ಅಪತ್ಯಮ್ ಅಥವಾ ಪ್ರಜಾ ಪತಿಃ ದೇವತಾ ಅಸ್ಯ ಎಂಬರ್ಥದಲ್ಲಿ ಣ್ಯಪ್ರತ್ಯಯ. ಪ್ರಜಾಪತಿ+ಯ. ಆದಿವೃದ್ಧಿ. ಇಕಾರಲೋಪ. ಪ್ರಾಜಾಪತ್ಯಃ ॥

ಕೆಲವು ವಾರ್ತಿಕಗಳಿಂದ ಸಾಮಾನ್ಯಪ್ರತ್ಯಯ ಹೇಳುತ್ತಾನೆ. ದೇವ ಶಬ್ದದ ಮೇಲೆ ಪ್ರಾಗ್‌ದೀವ್ಯತೀಯಾರ್ಥಗಳಲ್ಲಿ ಯಞ್ ಮತ್ತು ಅಞ್ ಪ್ರತ್ಯಯಗಳು ಬರುತ್ತವೆ. 'ತೇನ ದೀವ್ಯತಿ—' ಸೂತ್ರದವರೆಗೆ ಹೇಳಿರುವ ಅರ್ಥಗಳಿಗೆ ಪ್ರಾಗ್ದೀವ್ಯ ತೀಯಾರ್ಥಗಳೆಂದು ಹೆಸರು. ದೇವಸ್ಯ ಅಪತ್ಯಮ್. ದೇವನ ಮಗ. ದೇವ+ಯ.

ಆದಿವೃದ್ಧಿ. ಅಕಾರಲೋಪ. ದೈವ್ಯಮ್. ಅಞ್ ಬಂದರೆ, ದೇವ+ಅ=ದೈವಮ್ ಎಂದಾಗುತ್ತದೆ. 'ತದ್ಧಿತೇಷ್ವಚಾಮಾದೇಃ' ಸೂತ್ರದಿಂದ ಆದಿವೃದ್ಧಿ. 'ಯಸ್ಯೇತಿ ಚ' ಸೂತ್ರದಿಂದ ಇಕಾರ, ಅಕಾರಲೋಪ. ಸಾಮಾನ್ಯ ಈ ತದ್ಧಿತಪ್ರಕರಣದಲ್ಲಿ ಆಯಾಯ ನಿಮಿತ್ತವಿರುವುದರಿಂದ ಈ ಎರಡು ಸೂತ್ರಗಳು ಬರುತ್ತಲೇ ಇರುತ್ತವೆ.

ಎರಡನೇ ವಾರ್ತಿಕಾರ್ಥ—ಬಹಿಸ್ ಶಬ್ದಕ್ಕೆ ಟಿಲೋಪವೂ ಯಞ್ ಪ್ರತ್ಯಯವೂ ಪ್ರಾಗ್ದೀವ್ಯತೀಯಾರ್ಥಗಳಲ್ಲಿ ಬರುತ್ತವೆ. ಬಹಿಃ ಭವಃ । ಬಹಿಸ್+ಯ. ಆದಿವೃದ್ಧಿ. ಟಿಲೋಪ. ಬಾಹ್+ಯ=ಬಾಹ್ಯಃ, ಹೊರಗಿರುವುದು.

ಬಹಿಸ್ ಶಬ್ದಕ್ಕೆ ಈಕಕ್ ಪ್ರತ್ಯಯವೂ ಟಿಲೋಪವೂ ಹಿಂದಿನ ಅರ್ಥಗಳಲ್ಲಿ ಬರುತ್ತದೆ. ಈಕಕಿನಲ್ಲಿ 'ಹಲಂತ್ಯಮ್' ಸೂತ್ರದಿಂದ ಕಕಾರ ಇತ್ತಾಗಿ ಲೋಪವಾದರೆ ಈಕ ಉಳಿಯುತ್ತದೆ. ಬಹಿಸ್+ಈಕ. ಟಿಲೋಪ. ಬಹ್+ಈಕ ಎಂದಿರುವಾಗ ಆದಿವೃದ್ಧಿ ಹೇಳುತ್ತಾನೆ.

### ಕಿತ್ ಆದ ತದ್ಧಿತದಲ್ಲಿ ಆದಿವೃದ್ಧಿ ಹೇಳುವ ಸೂತ್ರ.

### ೧೦೦೪. ಕಿತಿ ಚ ॥ ೭-೨-೧೧೮ ॥

**ಕಿತಿ ತದ್ಧಿತೇ ಚಾಚಾಮಾದೇರಚೋ ವೃದ್ಧಿಃ ಸ್ಯಾತ್ । ಬಾಹೀಕಃ । ವಾ ॥ (ಗೋರಜಾದಿಪ್ರಸಂಗೇ ಯತ್) ಗೋರಪತ್ಯಾದಿ ಗವ್ಯಮ್ ॥**

ದ್ವಿಪದ ಸೂತ್ರ. 'ಮೃಜೇರ್ವೃದ್ಧಿಃ' ಸೂತ್ರದಿಂದ 'ವೃದ್ಧಿಃ' ಪದವೂ 'ತದ್ಧಿತೇಷ್ವಚಾಮಾದೇಃ' ಸೂತ್ರವೂ ಅನುವೃತ್ತವಾಗುತ್ತವೆ. ಕ್ ಇತ್ ಯಸ್ಯ ಸಃ ಕಿತ್. ತಸ್ಮಿನ್ ಕಿತಿ. ಸೂತ್ರಾರ್ಥ—ಕಕಾರ ಇತ್ತಾದ ತದ್ಧಿತಪ್ರತ್ಯಯ ಪರದಲ್ಲಿರುವಾಗ ಅಚ್‌ಗಳ ಮಧ್ಯದಲ್ಲಿ ಆದಿಯಲ್ಲಿರುವ ಅಚಿಗೆ ವೃದ್ಧಿ ಬರುತ್ತದೆ. ಪ್ರಕೃತ ಈಕಕ್ ಕಿತ್ತಾದುದರಿಂದ ಆದಿಗೆ ವೃದ್ಧಿ ಬಂದರೆ ಬಾಹೀಕಃ ಎಂದಾಗುತ್ತದೆ. ಹೊರಗೆ ಇರುವವನು.

ವಾರ್ತಿಕಾರ್ಥ—ಗೋ ಶಬ್ದಕ್ಕೆ ಅಚ್ ಮುಂತಾದ ಪ್ರತ್ಯಯಗಳು ಪ್ರಾಪ್ತವಾದರೆ ಪ್ರಾಗ್ದೀವ್ಯತೀಯಾರ್ಥದಲ್ಲಿ ಯತ್ ಪ್ರತ್ಯಯವೇ ಬರುತ್ತದೆ. ಗೋಃ ಅಪತ್ಯಮ್, ಭವಮ್, ಆಗತಮ್—ಎಂಬಿವೇ ಮೊದಲಾದ ಅರ್ಥಗಳಲ್ಲಿ ಯತ್ ಬಂದರೆ ಗೋ+ಯ ಎಂದಿರುವಾಗ 'ವಾಂತೋ ಯಿ ಪ್ರತ್ಯಯೇ' ಸೂತ್ರದಿಂದ ಅವಾದೇಶ. ಗವ್ಯಮ್. ಹಸುವಿನ ಕರು, ಹಸುವಿನಿಂದುಂಟಾದ ಹಾಲು, ಮೊಸರು ಮುಂತಾದವುಗಳು.

### ಉತ್ಸಾದಿಗಳಿಗೆ ಅಞ್ ಹೇಳುವ ಸೂತ್ರ.

### ೧೦೦೫. ಉತ್ಸಾದಿಭ್ಯೋಽಞ್ ॥ ೪-೧-೮೬ ॥ ಔತ್ಸಃ ॥

ಇತ್ಯಪತ್ಯಾದಿವಿಕಾರಾಂತಾರ್ಥಸಾಧಾರಣಪ್ರತ್ಯಯಾಃ ॥

ಉತ್ಸಾದಿಭ್ಯಃ, ಅಞ್ ॥ ದ್ವಿಪದ ಸೂತ್ರ. **ಸೂತ್ರಾರ್ಥ—**ಉತ್ಸಾದಿಗಣ ಪಠಿತವಾದ ಶಬ್ದಗಳಮೇಲೆ ಪ್ರಾಗ್ದೀವ್ಯತೀಯಾರ್ಥದಲ್ಲಿ ಅಞ್‌ಪ್ರತ್ಯಯ ಬರುತ್ತದೆ. ಅಣ್, ಇಞ್ ಮುಂತಾದ ಪ್ರತ್ಯಯಗಳು ಪ್ರಾಪ್ತವಾದರೆ ಅವುಗಳಿಗೆ ಅಪವಾದವಾಗಿ ಅಞ್ ಹೇಳಿದೆ. ಉತ್ಸೇಭವಃ। ಝರಿಯಲ್ಲಿ ಇರುವುದು (ಹುಟ್ಟಿದ್ದು). ಉತ್ಸ+ಅ. ಆದಿವೃದ್ಧಿ, ಅಕಾರಲೋಪ. ಔತ್ಸಃ ॥ ಹೀಗೆ ಅಪತ್ಯಾದಿ, ವಿಕಾರಾಂತಾರ್ಥಗಳಲ್ಲಿ ಬರುವ ಸಾಧಾರಣ ತದ್ಧಿತಪ್ರತ್ಯಯಗಳು ನಿರೂಪಿತವಾಗಿವೆ. ಆಯಾಯ ವಿಶೇಷಾರ್ಥ ದಲ್ಲಿ ಬರುವ ವಿಶೇಷ ಪ್ರತ್ಯಯಗಳನ್ನು ಬಾಧಿಸಿ ಈ ಸಾಮಾನ್ಯ ಪ್ರತ್ಯಯಗಳು ಬರುತ್ತವೆ.

## ೨೪. ಅಥಾಪತ್ಯಾಧಿಕಾರಃ

ನಞ್, ಸ್ನಞ್ ಪ್ರತ್ಯಯವಿಧಾಯಕ ಸೂತ್ರ.

**೧೦೦೩. ಸ್ತ್ರೀಪುಂಸಾಭ್ಯಾಂ ನಞ್‌ಸ್ನಞೌ ಭವನಾತ್ ॥ ೪-೧-೮೭ ॥**

**ಧಾನ್ಯಾನಾಂ ಭವನ ಇತ್ಯತಃ ಪ್ರಾಗರ್ಥೇಷು ಸ್ತ್ರೀಪುಂಸಾಭ್ಯಾಂ ಕ್ರಮಾನ್ನಞ್‌ಸ್ನಞೌ ಸ್ತಃ। ಸ್ತ್ರೈಣಃ। ಪೌಂಸ್ನಃ॥**

ತ್ರಿಪದ ಸೂತ್ರ. ಭವನಶಬ್ದದಿಂದ 'ಧಾನ್ಯಾನಾಂ ಭವನೇ ಕ್ಷೇತ್ರೇ—' ಸೂತ್ರವು ವಿವಕ್ಷಿತವಾಗಿದೆ. 'ಪ್ರಾಗ್ದೀವ್ಯತೋಽಣ್' ಸೂತ್ರದಿಂದ 'ಪ್ರಾಗ್' ಅನುವೃತ್ತಿ. **ಸೂತ್ರಾರ್ಥ—**'ಧಾನ್ಯಾನಾಂ ಭವನೇ ಕ್ಷೇತ್ರೇ' ಸೂತ್ರದವರೆಗೆ ಹೇಳಿರುವ ಅರ್ಥಗಳಲ್ಲಿ ಸ್ತ್ರೀಪುಂಸ್ ಶಬ್ದಗಳ ಮೇಲೆ ಕ್ರಮವಾಗಿ ನಞ್, ಸ್ನಞ್ ಪ್ರತ್ಯಯಗಳು ಬರುತ್ತವೆ. ಸ್ತ್ರಿಯಾಃ ಅಪತ್ಯಮ್ (ಸ್ತ್ರೀಯ ಮಗ); ಸ್ತ್ರೀಷು ಭವಃ (ಹೆಂಗಸರಲ್ಲಿ ಉಂಟಾದುದು); ಸ್ತ್ರೀಣಾಂ ಸಮೂಹಃ (ಸ್ತ್ರೀಯರ ಸಮುದಾಯ) ಇತ್ಯಾದ್ಯರ್ಥಗಳಲ್ಲಿ ನಞ್ ಬಂದರೆ ಸ್ತ್ರೀ+ನ ಎಂದಿರುವಾಗ ಞಿತ್ತಾದುದರಿಂದ ಆದಿ ವೃದ್ಧಿ. ಸ್ತ್ರೈನ. 'ಅಟ್‌ಕುಪ್ವಾಙ್—' ಸೂತ್ರದಿಂದ ಣತ್ವ. ಸ್ತ್ರೈಣಃ। ಹೀಗೆಯೇ ಪುಂಸಃ ಅಪತ್ಯಮ್; ಪುಂಸಿ ಭವಃ; ಪುಂಸಾಂ ಸಮೂಹಃ ಇತ್ಯಾದ್ಯರ್ಥಗಳಲ್ಲಿ ಪುಂಸ್ ಶಬ್ದಕ್ಕೆ ಸ್ನಞ್. ಪುಂಸ್+ಸ್ನ. ಆದಿವೃದ್ಧಿ. ಪೌಂಸ್+ಸ್ನ. 'ಸ್ವಾದಿಷ್ವ ಸರ್ವನಾಮಸ್ಥಾನೇ' ಸೂತ್ರದಿಂದ ಪದಸಂಜ್ಞಾ ಬರುವುದರಿಂದ ಪೌಂಸ್ ಎಂಬಲ್ಲಿ ಸಂಯೋಗಾಂತಲೋಪ. ಪೌಂಸ್ನಃ।

ಅಪತ್ಯಾರ್ಥದಲ್ಲಿ ಅಣ್‌ವಿಧಾಯಕ ಸೂತ್ರ.

**೧೦೦೭. ತಸ್ಯಾಪತ್ಯಮ್ ॥ ೪-೧-೯೨ ॥**

**ಷಷ್ಠ್ಯನ್ತಾತ್ ಕೃತಸಂಧೇಃ ಸಮರ್ಥಾದಪತ್ಯೇಽರ್ಥೇ ಉಕ್ತಾ ವಕ್ಷ್ಯಮಾಣಾಶ್ಚ ಪ್ರತ್ಯಯಾ ವಾ ಸ್ಯುಃ ॥**

**ತಸ್ಯ, ಅಪತ್ಯಮ್** ॥ ದ್ವಿಪದ ಸೂತ್ರ. 'ತದ್ಧಿತಾಃ', 'ಪ್ರತ್ಯಯಃ', 'ಪರಶ್ಚ' ಅಧಿಕಾರಸೂತ್ರಗಳು ಅಧಿಕೃತವಾಗುತ್ತವೆ. ಸಮರ್ಥಗಳ ಮಧ್ಯದಲ್ಲಿ ಪ್ರಥಮೋಚ್ಚರಿತವಾದುದು 'ತಸ್ಯ' ಎಂಬ ಪದ. ಇದರಿಂದ ತಚ್ಛಬ್ದದ ಷಷ್ಠ್ಯಂತ ರೂಪ ಮಾತ್ರ ಗ್ರಹಣವಲ್ಲ. ಬುದ್ಧಿಯಲ್ಲಿರುವ ಸಕಲಪ್ರಾತಿಪದಿಕಪ್ರಕೃತಿಕ ಷಷ್ಠ್ಯಂತವು ಇದರಿಂದ ಗೃಹೀತವಾಗುತ್ತದೆ. 'ಅಪತ್ಯಮ್' ಸಪ್ತಮ್ಯರ್ಥದಲ್ಲಿ ಪ್ರಥಮಾ ಬಂದಿದೆ. ಮುಂದೆ 'ತತ್ರ ಜಾತಃ', 'ತೇನ ಪ್ರೋಕ್ತಮ್' ಇತ್ಯಾದಿ ಸ್ಥಲಗಳಲ್ಲಿಯೂ ಸಪ್ತಮ್ಯರ್ಥದಲ್ಲಿ ಸೌತ್ರಪ್ರಥಮಾಂತಶಬ್ದಗಳೆಂದು ತಿಳಿಯಬೇಕು. ತಸ್ಯ ಎಂಬುದರಿಂದ ಷಷ್ಠ್ಯಂತಗಳು ಗೃಹೀತವಾದರೆ ಅದು ಲುಪ್ತಪಂಚಮೀಕವೆಂದು ತಿಳಿಯಬೇಕು. **ಸೂತ್ರಾರ್ಥ**—ಏಕಾರ್ಥೀಭಾವಸಾಮರ್ಥ್ಯವಿರುವಾಗ ಕಾರ್ಯವಿಧಾಯಕ ಸೂತ್ರದಲ್ಲಿ ಪ್ರಥಮೋಚ್ಚರಿತವಾದ, ಸಂಧಿಕಾರ್ಯಾದಿಗಳಿಂದ ಪರಿನಿಷ್ಠಿತರೂಪಹೊಂದಿದ ಪ್ರಾತಿಪದಿಕಪ್ರಕೃತಿಕ ಷಷ್ಠ್ಯಂತದ ಮೇಲೆ ಹಿಂದೆ ಹೇಳಿರುವ, ಮುಂದೆ ಹೇಳುವ ಪ್ರತ್ಯಯಗಳು ಬರುತ್ತವೆ. 'ವಾ' ಅಧಿಕಾರವಿರುವುದರಿಂದ ಇವು ವಿಕಲ್ಪವೆಂದು ಲಬ್ಧವಾಗುತ್ತದೆ. ಉಪಗು ಒಬ್ಬನ ಹೆಸರು. ಉಪಗೋಃ+ಅಪತ್ಯಮ್, ಎಂಬರ್ಥ ವಿವಕ್ಷಾಮಾಡಿದಾಗ ಈ ಸೂತ್ರದಿಂದ ಅಣ್ ಬರುತ್ತದೆ. ಉಪಗು+ಙಸ್+ಅ. ಸುಪ್‌ಲುಕ್. ಉಪಗು+ಅ. ಣಿತ್ತಾದುದರಿಂದ ಆದಿವೃದ್ಧಿ. ಔಪಗು+ಅ. ಈಗ ಉಕಾರಕ್ಕೆ ಗುಣ ಹೇಳುತ್ತಾನೆ.

ತದ್ಧಿತದಲ್ಲಿ ಉವರ್ಣಾಂತಕ್ಕೆ ಗುಣ ಹೇಳುವ ಸೂತ್ರ.

### ೧೦೦೮. ಓರ್ಗುಣಃ ॥ ೬-೪-೧೪೬ ॥

**ಉವರ್ಣಾಂತಸ್ಯ ಭಸ್ಯ ಗುಣಸ್ತದ್ಧಿತೇ । ಉಪಗೋರಪತ್ಯಮೌಪಗವಃ । ಆಶ್ವಪತಃ । ದೈತ್ಯಃ । ಔತ್ಸಃ । ಸ್ತ್ರೈಣಃ । ಪೌಂಸ್ನಃ ॥**

ಓಃ, ಗುಣಃ ॥ ದ್ವಿಪದ ಸೂತ್ರ. 'ಭಸ್ಯ' ಅಧಿಕಾರ. ಓಃ ಉಕಾರದ ಷಷ್ಠ್ಯಂತ ರೂಪ. ಅದು 'ಭಸ್ಯ' ಎಂಬುದಕ್ಕೆ ವಿಶೇಷಣವಾದುದರಿಂದ ತದಂತಲಾಭ. 'ನಃ ತದ್ಧಿತೇ' ಸೂತ್ರದಿಂದ 'ತದ್ಧಿತೇ' ಅನುವೃತ್ತಿ. **ಸೂತ್ರಾರ್ಥ**—ಉಕಾರಾಂತವಾದ ಭಸಂಜ್ಞೆಯಿರುವ ಅಂಗಕ್ಕೆ ತದ್ಧಿತಪ್ರತ್ಯಯ ಪರದಲ್ಲಿರುವಾಗ ಗುಣ ಬರುತ್ತದೆ. ಪ್ರಕೃತ ಔಪಗು ಉವರ್ಣಾಂತವಾದ ಭಸಂಜ್ಞೆಯಿರುವ ಅಂಗ. ಅದಕ್ಕೆ ಅಣ್ ತದ್ಧಿತ ಪರದಲ್ಲಿರುವುದರಿಂದ ಗುಣ ಬಂದರೆ ಔಪಗೋ+ಅ. 'ಏಚೋಽಯವಾಯಾವಃ' ಔಪಗವಃ (ಉಪಗುವಿನ ಮಗ). ಹಿಂದೆ ಸಾಧಾರಣ ಸೂತ್ರಗಳಲ್ಲಿ ಮುಂದೆ ಹೇಳುವ ಅರ್ಥಗಳಲ್ಲಿ ಪ್ರತ್ಯಯ ಬರುತ್ತದೆ ಎಂದುದರಿಂದ ಈಗ ಇಲ್ಲಿ ಅಪತ್ಯಾರ್ಥ ಹೇಳಿರುವುದರಿಂದ ಅಪತ್ಯಾರ್ಥದಲ್ಲಿ ಅವುಗಳ ರೂಪವನ್ನು ಪುನಃ ತೋರಿಸಿರುತ್ತಾನೆ. ಆಶ್ವಪತಃ,

ದೈತ್ಯಃ ಇತ್ಯಾದಿ. ಇವುಗಳ ರೂಪವಿವರಣೆ ಹಿಂದೆ ಮಾಡಿದೆ. ಇಲ್ಲಿ ಕೇವಲ ಅವರ ಮಕ್ಕಳು ಎಂದರ್ಥ.

ಗೋತ್ರಸಂಜ್ಞೆಯನ್ನು ಹೇಳುವ ಸೂತ್ರ.

**೧೦೭೯. ಅಪತ್ಯಂ ಪೌತ್ರಪ್ರಭೃತಿ ಗೋತ್ರಮ್ ॥ ೪-೧-೧೬೨ ॥**

**ಅಪತ್ಯತ್ವೇನ ವಿವಕ್ಷಿತಂ ಪೌತ್ರಾದಿ ಗೋತ್ರಸಂಜ್ಞಂ ಸ್ಯಾತ್ ॥**

ತ್ರಿಪದ ಸೂತ್ರ. ಅಪತ್ಯರೂಪದಿಂದ ವಿವಕ್ಷಿತವಾದ ಪೌತ್ರ ಮುಂತಾದವರಿಗೆ ಗೋತ್ರ ಎಂಬ ಸಂಜ್ಞೆ ಬರುತ್ತದೆ. ಲೋಕದಲ್ಲಿ 'ಆಹುರ್ದುಹಿತರಂ ಸರ್ವೇಽಪತ್ಯಂ ತೋಕಂ ತಯೋಃ ಸಮೇ' ಇತ್ಯಾದಿ ಕೋಶಬಲದಿಂದ ಅಪತ್ಯ ಎಂದರೆ ಪುತ್ರ ಎಂಬ ಅರ್ಥ ಪ್ರಸಿದ್ಧವಾಗಿದೆ. ಇಲ್ಲಿ ಮಾತ್ರ ಯೌಗಿಕಾರ್ಥವನ್ನಿಟ್ಟುಕೊಂಡು (ನ ಪತಂತಿ ಪಿತರಃ ಅನೇನ=ಇವನಿಂದ ಪಿತೃಗಳು ನರಕಕ್ಕೆ ಬೀಳುವುದಿಲ್ಲ.) ಪೌತ್ರ ಮುಂತಾದವರಿಗೆ ಮಾತ್ರ ಗೋತ್ರಸಂಜ್ಞಾ ಬರುತ್ತದೆ. ಸಾಕ್ಷಾತ್ ಪುತ್ರನಿಗೆ ಗೋತ್ರಸಂಜ್ಞೆ ಇಲ್ಲ. ಆಗ ಅಪತ್ಯವನ್ನು ಮೂರು ರೀತಿ ಹೇಳಬಹುದು : (೧) ಅನಂತರಾಪತ್ಯ= ಮಗ; (೨) ಗೋತ್ರಾಪತ್ಯ=ಮಗನ ಮಗ ಮುಂತಾದವರು ; (೩) ಯುವಾಪತ್ಯ. ನಾಲ್ಕನೇ ತಲೆಗೆ, ಹಿಂದಿನವರು ಯಾರಾದರೂ ಜೀವಿಸಿದ್ದಾಗ ಯುವಸಂಜ್ಞೆ ಮುಂದೆ ಹೇಳುತ್ತಾನೆ. ಪೌತ್ರಾದಿಗಳಿಗೆ ಅಪತ್ಯವೆಂಬ ಹೆಸರು ರೂಢವಲ್ಲದಿರುವುದರಿಂದ ಅಪತ್ಯತ್ವೇನ ವಿವಕ್ಷಿತಂ ಎಂದಿರುತ್ತಾನೆ. ಪೌತ್ರ ಮುಂತಾದವರಿಗೆ ಅಪತ್ಯ ಎಂದು ವಿವಕ್ಷಾಮಾಡಿ ಗೋತ್ರಸಂಜ್ಞೆ ಹೇಳಬೇಕು.

ಗೋತ್ರದಲ್ಲಿ ಒಂದೇ ಪ್ರತ್ಯಯ ನಿಯಮಿಸುವ ಸೂತ್ರ.

**೧೦೧೦. ಏಕೋ ಗೋತ್ರೇ ॥ ೪-೧-೯೩ ॥**

**ಗೋತ್ರೇ ಏಕ ಏವಾಪತ್ಯಪ್ರತ್ಯಯಃ ಸ್ಯಾತ್ । ಉಪಗೋರ್ಗೋತ್ರಾಪತ್ಯಮೌಪಗವಃ ॥**

ಏಕಃ, ಗೋತ್ರೇ ॥ ದ್ವಿಪದ ಸೂತ್ರ. ಅಪತ್ಯಪ್ರತ್ಯಯಾಧಿಕಾರವಾದುದರಿಂದ ಅಪತ್ಯಪ್ರತ್ಯಯವೆಂದು ಲಬ್ಧವಾಗುತ್ತದೆ. ಒಂದು ಎಂದುದರಿಂದ ಇತರ ಸಂಖ್ಯೆ ನಿಷಿದ್ಧವಾಗುವುದರಿಂದ ಒಂದೇ ಎಂದರ್ಥವಾಗುತ್ತದೆ. **ಸೂತ್ರಾರ್ಥ**—ಗೋತ್ರಾರ್ಥ ವಿವಕ್ಷಾಮಾಡಿದಾಗ ಒಂದೇ ಅಪತ್ಯಪ್ರತ್ಯಯ ಬರುತ್ತದೆ. ಇದು ನಿಯಮಸೂತ್ರ. ಗೋತ್ರವು ಅಪತ್ಯವಾದುದರಿಂದ 'ತಸ್ಯಾಪತ್ಯಮ್' ಸೂತ್ರದಿಂದ ಅಪತ್ಯಪ್ರತ್ಯಯ ಬಂದೇ ಬರುತ್ತದೆ. ಆದರೆ ಅಪತ್ಯಪ್ರತ್ಯಯಾಂತದಮೇಲೆ ಅವನ ಮಗ ಎಂದರ್ಥ ವಿವಕ್ಷಾಮಾಡಿದಾಗ ಇನ್ನೊಂದು ಅಪತ್ಯಪ್ರತ್ಯಯವೂ, ತಿರುಗಿ ಅವನ ಪುತ್ರ ಎಂದು

ವಿವಕ್ಷಾಮಾಡಿದಾಗ ಅದರಮೇಲೆ ಒಂದು ಪ್ರತ್ಯಯವೂ ಹೀಗೆ ನೂರುತಲೆ ವಿವಕ್ಷಾ ಮಾಡಿದಾಗ ತೊಂಬತ್ತೊಂಬತ್ತು ಪ್ರತ್ಯಯಗಳು ಪರಂಪರೆಯಿಂದ ಬರಬೇಕಾಗುತ್ತವೆ. ಈ ಸೂತ್ರನಿಯಮದಿಂದ ಒಂದು ಗೋತ್ರವಾಗಲೀ ಬಹುಗೋತ್ರವಾಗಲೀ ವಿವಕ್ಷಾ ಮಾಡಿದಾಗ ಒಂದೇ ಅಪತ್ಯಪ್ರತ್ಯಯ. ಉಪಗುವಿನ ಪೌತ್ರನೂ ಔಪಗವ. ನೂರನೇ ಯುವನೂ ಔಪಗವ. ಉಪಗುವಿನ ಗೋತ್ರಾಪತ್ಯ ಎಷ್ಟೇ ಆಗಲಿ, ಒಂದೇ ಪ್ರತ್ಯಯ ಬಂದು ಒಂದೇ ರೂಪವಾಗುತ್ತದೆ.

ಯಞ್‌ಪ್ರತ್ಯಯವಿಧಾಯಕ ಸೂತ್ರ.

**೧೦೧೧. ಗರ್ಗಾದಿಭ್ಯೋ ಯಞ್ ॥ ೪-೧-೧೦೫ ॥**

**ಗೋತ್ರಾಪತ್ಯೇ । ಗರ್ಗಸ್ಯ ಗೋತ್ರಾಪತ್ಯಂ ಗಾರ್ಗ್ಯಃ । ವಾತ್ಸ್ಯಃ ॥**

ದ್ವಿಪದ ಸೂತ್ರ. 'ಗೋತ್ರೇ ಕುಂಜಾದಿಭ್ಯಃ—' ಸೂತ್ರದಿಂದ 'ಗೋತ್ರೇ' ಅನುವೃತ್ತಿ. **ಸೂತ್ರಾರ್ಥ**—ಗರ್ಗಾದಿಗಣಪಠಿತ ಶಬ್ದಗಳ ಮೇಲೆ ಗೋತ್ರಾಪತ್ಯಾರ್ಥ ದಲ್ಲಿ ಯಞ್ ಪ್ರತ್ಯಯ ಬರುತ್ತದೆ. ಅಣಿಗೆ ಅಪವಾದ. ಗರ್ಗನ ಗೋತ್ರಾಪತ್ಯ. ಗರ್ಗ + ಙಸ್ + ಯ. ಞಿತ್ತಾದುದರಿಂದ ಆದಿವೃದ್ಧಿ. ಗಾರ್ಗ + ಯ. 'ಯಸ್ಯೇತಿ ಚ' ಅಕಾರಲೋಪ. ಗಾರ್ಗ್ಯಃ । ಹೀಗೇ, ವತ್ಸಸ್ಯ ಗೋತ್ರಾಪತ್ಯಮ್. ವತ್ಸ + ಯ = ವಾತ್ಸ್ಯಃ । ಗಣಪಾಠ ನೋಡಿ ಶಬ್ದನಿಶ್ಚಯ ಮಾಡಿಕೊಳ್ಳಬೇಕು.

ಬಹುವಚನದಲ್ಲಿ ಯಞ್, ಅಞ್ ಗಳಿಗೆ ಲುಕ್ ಹೇಳುವ ಸೂತ್ರ.

**೧೦೧೨. ಯಞಞೋಶ್ಚ ॥ ೨-೪-೬೪ ॥**

**ಗೋತ್ರೇಯದ್ಯಞನ್ತಮಞನ್ತಂ ಚ ತದವಯವಯೋರೇತಯೋ-ರ್ಲುಕ್ ಸ್ಯಾತ್ ತತ್ಕೃತೇ ಬಹುತ್ವೇ ನ ತು ಸ್ತ್ರಿಯಾಮ್ । ಗರ್ಗಾಃ । ವತ್ಸಾಃ ॥**

ಯಞಞೋಃ, ಚ ॥ ದ್ವಿಪದ ಸೂತ್ರ. 'ತದ್ರಾಜಸ್ಯ ಬಹುಷು ತೇನೈವಾಽ ಸ್ತ್ರಿಯಾಮ್' ಸೂತ್ರವು 'ತದ್ರಾಜಸ್ಯ' ಬಿಟ್ಟು ಪೂರ್ತಿ ಅನುವೃತ್ತವಾಗುತ್ತದೆ. 'ಣ್ಯಕ್ಷತ್ರಿಯಾರ್ಷ—' ಸೂತ್ರದಿಂದ 'ಲುಕ್', 'ಯಸ್ಕಾದಿಭ್ಯೋ ಗೋತ್ರೇ' ಸೂತ್ರದಿಂದ 'ಗೋತ್ರೇ' ಪದಗಳು ಅನುವೃತ್ತವಾಗುತ್ತವೆ. ಯಞಞ್ ಪ್ರತ್ಯಯ ವಾದುದರಿಂದ ತದಂತಗ್ರಹಣ. **ಸೂತ್ರಾರ್ಥ**—ಗೋತ್ರಾರ್ಥದಲ್ಲಿ ಯಾವ ಯಞ್, ಅಞ್ ಪ್ರತ್ಯಯಗಳು ಬಂದಿವೆಯೋ ಅವೇ ಅಂತವಾದ ಪದಗಳ ಅವಯವಗಳಾದ ಯಞ್, ಅಞ್‌ಗಳಿಗೆ ಯಞನ್ತಾರ್ಥದಲ್ಲಿರುವ ಬಹುತ್ವತೋರುವಾಗ ಲುಕ್ ಬರು ತ್ತದೆ. ಗಾರ್ಗ್ಯಃ, ಗಾರ್ಗ್ಯೌ—ಗರ್ಗ + ಯ = ಗಾರ್ಗ್ಯ + ಜಸ್ ಎಂದಿರುವಾಗ

ಬಹುತ್ವತೋರುವುದರಿಂದ ಯಞಿಗೆ ಲುಕ್ ಬಂದರೆ ಯಞ್ ನಿಮಿತ್ತೀಕರಿಸಿ ಬಂದ ಕಾರ್ಯಗಳೂ ಹೋಗಿ ಗರ್ಗ ಎಂದೇ ಉಳಿಯುತ್ತದೆ. 'ಪ್ರಥಮಯೋಃ ಪೂರ್ವ ಸವರ್ಣಃ—' ಸೂತ್ರದಿಂದ ಪೂರ್ವಸವರ್ಣದೀರ್ಘ. ಗರ್ಗಾಃ | ಹೀಗೇ ವಾತ್ಸ್ಯಃ | ವಾತ್ಸ್ಯೌ | ವತ್ಸಾಃ || ಎಂದಾಗುತ್ತದೆ. ಬಹುವಚನಗಳಲ್ಲಿ ಯಞ್ ಲುಕ್ಕಾಗುವುದರಿಂದ ಮೂಲರೂಪವೇ ಇರುತ್ತದೆ.

ಯುವಾಸಂಜ್ಞೆ ಹೇಳುವ ಸೂತ್ರ.

೧೧೧೩. **ಜೀವತಿ ತು ವಂಶ್ಯೇ ಯುವಾ** || ೪-೧-೧೬೩ ||

**ವಂಶ್ಯೇ ಪಿತ್ರಾದೌ ಜೀವತಿ ಪೌತ್ರಾದೇರ್ಯದಪತ್ಯಂ ಚತುರ್ಥಾದಿ ತದ್ಯುವಸಂಜ್ಞಮೇವ ಸ್ಯಾತ್** ||

ನಾಲ್ಕು ಪದಗಳುಳ್ಳ ಸೂತ್ರ. ವಂಶವೆಂದರೆ ಮೂಲಪುರುಷನಿಂದ ಬಂದ ಪರಂಪರೆ. ವಂಶೇ ಭವಃ ವಂಶ್ಯಃ || ಹಿಂದಿನ ಸೂತ್ರದಿಂದ 'ಪೌತ್ರಪ್ರಭೃತಿ' ಪದವು ಅನುವೃತ್ತವಾಗಿ ಷಷ್ಠ್ಯಂತವಾಗಿ ವಿಪರಿಣತವಾಗುತ್ತದೆ. 'ತಸ್ಯಾಪತ್ಯಮ್' ಸೂತ್ರದಿಂದ 'ಅಪತ್ಯಮ್' ಅನುವೃತ್ತಿ. **ಸೂತ್ರಾರ್ಥ**—ವಂಶದಲ್ಲಿ ಹುಟ್ಟಿದ ಪಿತೃ ಮುಂತಾದವರು ಜೀವಿಸಿರುವಾಗ ಪೌತ್ರನ ಯಾವ ಮಗನಿರುವನೋ ಅಂದರೆ ನಾಲ್ಕನೇ ತಲೆಯವನು ಅವನು ಯುವಸಂಜ್ಞೆಯನ್ನು ಹೊಂದುತ್ತಾನೆ. ತು ಶಬ್ದ ಏವಕಾರಾರ್ಥ ಹೇಳುವುದರಿಂದ ಅವನಿಗೆ ಕೇವಲ ಯುವಸಂಜ್ಞೆಯಲ್ಲದೆ ಗೋತ್ರ ಸಂಜ್ಞಾ ಬರುವುದಿಲ್ಲ. ಪೌತ್ರ ಮುಂತಾದವರಿಗೆ ಗೋತ್ರಸಂಜ್ಞೆ ಹೇಳಿದುದರಿಂದ ಗೋತ್ರಸಂಜ್ಞೆಯೂ ಬರುತ್ತಿತ್ತು. ಈಗ ನಾಲ್ಕನೆಯವನಿಗೆ ಕೇವಲ ಯುವಸಂಜ್ಞೆ ಹೇಳಿದೆ.

ಯುವಾಪತ್ಯದಲ್ಲಿ ಪ್ರತ್ಯಯ ನಿಯಮ ಮಾಡುವ ಸೂತ್ರ.

೧೧೧೪. **ಗೋತ್ರಾದ್ಯೂನ್ಯಸ್ತ್ರಿಯಾಮ್** || ೪-೧-೯೪ ||

**ಯೂನ್ಯಪತ್ಯೇ ಗೋತ್ರಪ್ರತ್ಯಯಾನ್ತಾದೇವ ಪ್ರತ್ಯಯಃ ಸ್ಯಾತ್ | ಸ್ತ್ರಿಯಾಂ ತು ನ ಯುವಸಂಜ್ಞಾ** ||

ಗೋತ್ರಾತ್, ಯೂನಿ, ಅಸ್ತ್ರಿಯಾಮ್ || ತ್ರಿಪದ ಸೂತ್ರ. **ಸೂತ್ರಾರ್ಥ**—ಯುವಾಪತ್ಯಾರ್ಥವಿವಕ್ಷಾಮಾಡಿದಾಗ ಗೋತ್ರಪ್ರತ್ಯಯಾನ್ತವಾದ ಶಬ್ದದಮೇಲೆಯೇ ಪ್ರತ್ಯಯ ಬರುತ್ತದೆ. 'ಏಕೋ ಗೋತ್ರೇ' ಸೂತ್ರದಂತೆಯೇ ಇದೂ ನಿಯಮ ಸೂತ್ರ. ಗರ್ಗಸ್ಯ ಗೋತ್ರಾಪತ್ಯಮ್ ಎಂದು ವಿವಕ್ಷಾಮಾಡಿದಾಗ ಹಿಂದಿನ ಸೂತ್ರದಿಂದ ಯಞ್. ಗಾರ್ಗ್ಯಃ | 'ಗರ್ಗಸ್ಯ ಯುವಾಪತ್ಯಮ್' ಎಂದು ವಿವಕ್ಷಾಮಾಡಿ

ದಾಗ ಮುಂದೆ ಫಕ್ ಹೇಳುತ್ತಾನೆ. ಸ್ವತಂತ್ರ ಗರ್ಗ ಶಬ್ದದ ಮೇಲೇ ಬರುತ್ತಿದ್ದರೆ ಈಗ ಗಾರ್ಗ್ಯ ಶಬ್ದದಮೇಲೆಯೇ ಹೇಳಬೇಕೆಂದು ಈ ಸೂತ್ರ ತಿಳಿಸುತ್ತದೆ. ಸ್ತ್ರೀಲಿಂಗ ದಲ್ಲಿ ಯುವಸಂಜ್ಞೆ ಬರುವುದಿಲ್ಲ.

ಯುವಾಪತ್ಯದಲ್ಲಿ ಫಕ್ ಪ್ರತ್ಯಯವಿಧಾಯಕ ಸೂತ್ರ.

೧೧೧೫. ಯಞಿಞೋಶ್ಚ ॥ ೪-೧-೧೦೧ ॥

**ಗೋತ್ರೇ ಯೌ ಯಞಿಞೌ ತದಂತಾತ್ ಫಕ್ ಸ್ಯಾತ್ ॥**

ದ್ವಿಪದ ಸೂತ್ರ. 'ಗೋತ್ರೇ ಕುಂಜಾದಿಭ್ಯಃ—' ಸೂತ್ರದಿಂದ 'ಗೋತ್ರೇ', 'ನಡಾದಿಭ್ಯಃ ಫಕ್' ಸೂತ್ರದಿಂದ 'ಫಕ್' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಗೋತ್ರಾರ್ಥದಲ್ಲಿ ಯಾವ ಯಞ್, ಅಞ್ ಪ್ರತ್ಯಯಗಳು ಬಂದಿರುತ್ತವೆಯೋ ಆ ಯಞಂತ, ಅಞಂತಗಳ ಮೇಲೆ ಫಕ್ ಪ್ರತ್ಯಯ ಬರುತ್ತದೆ. ಅರ್ಥಾತ್ ಯುವಾಪತ್ಯಾರ್ಥದಲ್ಲಿ ಈ ಫಕ್ ಪ್ರತ್ಯಯ. ಗರ್ಗನ ಗೋತ್ರಾಪತ್ಯ ಗಾರ್ಗ್ಯಃ। ಯಞಂತವಾಗಿದೆ. ಗರ್ಗಸ್ಯ ಯುವಾಪತ್ಯಮ್ । ನಾಲ್ಕನೆಯವನು ಎಂಬರ್ಥದಲ್ಲಿ ಗಾರ್ಗ್ಯ ಶಬ್ದದ ಮೇಲೆ ಫಕ್. ಗಾರ್ಗ್ಯ+ಫಕ್ ಎಂದಿರುವಾಗ ಫಕಾರಕ್ಕೆ ಆಯನಾದೇಶ ಹೇಳುತ್ತಾನೆ.

ಫಾದಿಗಳಿಗೆ ಆಯನಾದಿ ಆದೇಶ ಹೇಳುವ ಸೂತ್ರ.

೧೧೧೬. ಆಯನೇಯೀನೀಯಿಯಃ ಫಢಖಛಘಾಂ ಪ್ರತ್ಯಯಾದೀನಾಮ್ ॥ ೭-೧-೨ ॥

**ಪ್ರತ್ಯಯಾದೇಃ ಫಸ್ಯ ಆಯನ್, ಢಸ್ಯ ಏಯ್, ಖಸ್ಯ ಈನ್, ಛಸ್ಯ ಈಯ್, ಘಸ್ಯ ಇಯ್ ಏತೇ ಸ್ಯುಃ । ಗರ್ಗಸ್ಯ ಯುವಾಪತ್ಯಂ ಗಾರ್ಗ್ಯಾಯಣಃ । ದಾಕ್ಷಾಯಣಃ ॥**

ತ್ರಿಪದ ಸೂತ್ರ. **ಸೂತ್ರಾರ್ಥ**—ಪ್ರತ್ಯಯದ ಆದಿಯಲ್ಲಿರುವ ಫಕಾರಕ್ಕೆ ಆಯನ್, ಢಕಾರಕ್ಕೆ ಏಯ್, ಖಕಾರಕ್ಕೆ ಈನ್, ಛಕಾರಕ್ಕೆ ಈಯ್, ಘಕಾರಕ್ಕೆ ಇಯ್ ಆದೇಶಗಳು ಬರುತ್ತವೆ. ಆಯನ್, ಏಯ್, ಈನ್, ಈಯ್, ಇಯ್(+ಜಸ್) ಎಂದು ಛೇದ. ಫಾದಿಗಳ ಮೇಲಿರುವ ಅಕಾರ ಉಚ್ಚಾರಣಾರ್ಥ. ಫ್, ಢ್, ಖ್, ಛ್, ಘ್‌ಗಳಿಗೆ ಆಯನಾದ್ಯಾದೇಶ. ಪ್ರಕೃತ ಫಕಾರ ಇರುವುದರಿಂದ ಫ್ ಎಂಬುದಕ್ಕೆ ಆಯನ್ ಬಂದರೆ ಗಾರ್ಗ್ಯ+ಆಯನ್+ಅ. 'ಯಸ್ಯೇತಿ ಚ' ಅಕಾರ ಲೋಪ. ಗಾರ್ಗ್ಯಾಯನ. 'ಅಟ್‌ಕುಪ್ವಾಙ್—' ಸೂತ್ರದಿಂದ ಣತ್ವ. ಗಾರ್ಗ್ಯಾಯಣಃ। ಹೀಗೆಯೇ ದಕ್ಷಸ್ಯ ಅಪತ್ಯಮ್ ಎಂಬರ್ಥದಲ್ಲಿ ಮುಂದೆ ಇಞ್ ಪ್ರತ್ಯಯ

ಹೇಳುತ್ತಾನೆ. ದಾಕ್ಷಿಃ ಎಂದಾಗುತ್ತದೆ. ದಕ್ಷಸ್ಯ ಯುವಾಪತ್ಯಮ್ ಅರ್ಥದಲ್ಲಿ ಫಕ್. ಆಯನಾದ್ಯಾದೇಶಕಾರ್ಯ. ದಾಕ್ಷಾಯಣಃ | ದಕ್ಷನ ನಾಲ್ಕನೆ ತಲೆಯವನು.

ಅಪತ್ಯಾರ್ಥದಲ್ಲಿ ಇಞ್ಪ್ರತ್ಯಯವಿಧಾಯಕ ಸೂತ್ರ.

**೧೦೧೭. ಅತ ಇಞ್ || ೪-೧-೯೫ || ಅಪತ್ಯೇಽರ್ಥೇ | ದಾಕ್ಷಿಃ ||**

ಅತಃ, ಇಞ್ || ದ್ವಿಪದ ಸೂತ್ರ. ಅಧಿಕಾರದಿಂದ ಲಬ್ಧವಾದ ಪ್ರಾತಿಪದಿಕಕ್ಕೆ ಅತಃ ವಿಶೇಷಣವಾದುದರಿಂದ ತದಂತಲಾಭ. 'ತಸ್ಯಾಪತ್ಯಮ್' ಅನುವೃತ್ತಿ. **ಸೂತ್ರಾರ್ಥ**—ಹ್ರಸ್ವಾಕಾರಾಂತವಾದ ಪ್ರಾತಿಪದಿಕವೇ ಪ್ರಕೃತಿಯಾಗಿರುವ ಷಷ್ಠ್ಯಂತದಮೇಲೆ ಅಪತ್ಯಾರ್ಥದಲ್ಲಿ ಇಞ್ ಪ್ರತ್ಯಯ ಬರುತ್ತದೆ. ಸಾಕ್ಷಾತ್ ಮಗ ಎಂಬರ್ಥದಲ್ಲಿ ಈ ಪ್ರತ್ಯಯ. ದಕ್ಷಸ್ಯ ಅಪತ್ಯಮ್. ದಕ್ಷ+ಙಸ್+ಇ. ದಕ್ಷ+ಇ. ಞಿತ್ತಾದುದರಿಂದ ಆದಿವೃದ್ಧಿ. 'ಯಸ್ಯೇತಿ ಚ' ಅಕಾರಲೋಪ. ದಾಕ್ಷಿಃ=ದಕ್ಷನ ಮಗ.

ಬಾಹ್ವಾದಿಗಳಿಗೆ ಇಞ್ ಹೇಳುವ ಸೂತ್ರ.

**೧೦೧೮. ಬಾಹ್ವಾದಿಭ್ಯಶ್ಚ || ೪-೧-೯೬ ||**

**ಬಾಹವಿಃ | ಔಡುಲೋಮಿಃ |**

**ವಾ || (ಲೋಮ್ನೋಽಪತ್ಯೇಷು ಬಹುಷ್ವಕಾರೋ ವಕ್ತವ್ಯಃ ||)**

**ಉಡುಲೋಮಾಃ | ಆಕೃತಿಗಣೋಽಯಮ್ ||**

ಬಾಹ್ವಾದಿಭ್ಯಃ, ಚ || ದ್ವಿಪದ ಸೂತ್ರ. **ಸೂತ್ರಾರ್ಥ**—ಬಾಹ್ವಾದಿ ಶಬ್ದಗಳ ಮೇಲೆ ಅಪತ್ಯಾರ್ಥದಲ್ಲಿ ಇಞ್ ಪ್ರತ್ಯಯ ಬರುತ್ತದೆ. ಬಾಹು ಒಬ್ಬ ಋಷಿ. ಬಾಹೋಃ ಅಪತ್ಯಮ್ | ಬಾಹು+ಙಸ್+ಇ. ಬಾಹು+ಇ. 'ಓರ್ಗುಣಃ' ಬಾಹೋ+ಇ. ಅವಾದೇಶ. ಬಾಹವಿಃ | ಉಡುಲೋಮನ್ ಶಬ್ದ ಬಾಹ್ವಾದಿಯಲ್ಲಿ ಪಠಿತವಾಗಿದೆ. ಉಡುಲೋಮ್ನಃ ಅಪತ್ಯಮ್ | ಉಡುಲೋಮನ್+ಇ. ಆದಿವೃದ್ಧಿ. 'ನಸ್ತದ್ಧಿತೇ' ಟಲೋಪ. ಔಡುಲೋಮ್+ಇ. ಔಡುಲೋಮಿಃ | ವಾರ್ತಿಕಕಾರರು ಇದಕ್ಕೆ ಬಹುವಚನದಲ್ಲಿ ಅಪ್ರತ್ಯಯ ಹೇಳುತ್ತಾರೆ. ಲೋಮನ್ ಶಬ್ದಾಂತಕ್ಕೆ ಅಪತ್ಯಾರ್ಥದಲ್ಲಿ ಬಹುತ್ವ ತೋರುವಾಗ ಅಕಾರರೂಪ ಪ್ರತ್ಯಯ ಹೇಳಬೇಕು. ಉಡುಲೋಮನ್ +ಅ. ಞಿತ್ ಣಿತ್ತಾಗದಿರುವುದರಿಂದ ವೃದ್ಧಿ ಇಲ್ಲ. 'ನಸ್ತದ್ಧಿತೇ' ಟಲೋಪ. ಉಡುಲೋಮಾಃ=ನಕ್ಷತ್ರದಂತೆ ರೋಮವುಳ್ಳವನ ಮಗ. ಬಹುವಚನದಲ್ಲಿ ಇಞಿಗೆ ಅಪವಾದವಾಗಿ ಅ ಬರುವುದರಿಂದ ಅಕಾರಾಂತ ಶಬ್ದವಾಗುತ್ತದೆ. ಬಾಹ್ವಾದಿಗಳು ಇಷ್ಟೇ ಎಂದು ಪರಿಗಣಿತವಾಗಿಲ್ಲ. ಆಕೃತಿಗಣ ಅಂದರೆ ಇದರಂತೇ ಇಞಂತವಾಗಿ ಶ್ರುತವಾದವುಗಳು ಈ ಗಣದಲ್ಲಿ ಸೇರಿವೆಯೆಂದು ತಿಳಿಯಬೇಕು.

ಬಿದಾದಿಗಳಿಗೆ ಅಞ್ ಹೇಳುವ ಸೂತ್ರ.

**೧೧೧೯. ಅನೃಷ್ಯಾನಂತರ್ಯೇ ಬಿದಾದಿಭ್ಯೋಽಞ್ ॥ ೪-೧-೧೦೪ ॥**

**ಏಭ್ಯೋಽಞ್ ಗೋತ್ರೇ । ಯೇ ತ್ವತ್ರಾನೃಷಯಸ್ತೇಭ್ಯೋಽಪತ್ಯೇ ಅನ್ಯತ್ರ ತು ಗೋತ್ರೇ । ಬಿದಸ್ಯ ಗೋತ್ರಂ ಬೈದಃ । ಬೈದೌ । ಬಿದಾಃ ॥ ಪುತ್ರಸ್ಯಾಪತ್ಯಂ ಪೌತ್ರಃ । ಪೌತ್ರೌ । ಪೌತ್ರಾಃ । ಏವಂ ದೌಹಿತ್ರಾದಯಃ ॥**

ಅನೃಷಿ, ಆನಂತರ್ಯೇ, ಬಿದಾದಿಭ್ಯಃ, ಅಞ್ ॥ ನಾಲ್ಕು ಪದಗಳುಳ್ಳ ಸೂತ್ರ. ಇಲ್ಲಿ 'ಬಿದಾದಿಭ್ಯಃ ಅಞ್' ಅನುವೃತ್ತವಾಗುತ್ತದೆ. **ಸೂತ್ರಾರ್ಥ**—ಬಿದಾದಿಗಳಿಗೆ ಗೋತ್ರಾಪತ್ಯಾರ್ಥವಿವಕ್ಷಾಮಾಡಿದಾಗ ಅಞ್ ಪ್ರತ್ಯಯ; ಈ ಬಿದಾದಿಗಳಲ್ಲಿ ಋಷಿ ವಾಚಕವಾಗದಿರುವ ಶಬ್ದಗಳಮೇಲೆ ಅನಂತರಾಪತ್ಯಾರ್ಥದಲ್ಲಿ ಅಞ್. ಇದರಿಂದ ಋಷಿವಾಚಕವಾದ ಬಿದಾದಿಗಳಿಗೆ ಗೋತ್ರಾಪತ್ಯಾರ್ಥದಲ್ಲಿ ಅಞ್ ಎಂದು ಸಿದ್ಧವಾಗುತ್ತದೆ. ಬಿದಸ್ಯ ಗೋತ್ರಮ್ । ಬಿದ+ಙಸ್+ಅಞ್. ಬಿದ+ಅ. ಞಿತ್ತಾದುದರಿಂದ ಆದಿವೃದ್ಧಿ. 'ಯಸ್ಯೇತಿ ಚ' ಅಕಾರಲೋಪ. ಬೈದಃ-ಬೈದೌ. ಬಹುವಚನದಲ್ಲಿ 'ಯಞಞೋಶ್ಚ' ಸೂತ್ರದಿಂದ ಅಞಿಗೆ ಲುಕ್ ಬರುವುದರಿಂದ ಬಿದಾಃ ಎಂದಾಗುತ್ತದೆ. ಬಿದಋಷಿಯ ಮಗ. ಅನೃಷಿವಾಚಕವಾದ ಪುತ್ರಶಬ್ದವು ಬಿದಾದಿಯಲ್ಲಿದೆ. ಆಗ ಅನಂತರಾಪತ್ಯದಲ್ಲಿ ಅಞ್. ಪುತ್ರಸ್ಯ ಅಪತ್ಯಮ್ । ಪುತ್ರ+ಅ. ಆದಿವೃದ್ಧಿ. ಅಕಾರಲೋಪ. ಪೌತ್ರಃ-ಪೌತ್ರೌ-ಪೌತ್ರಾಃ । ಗೋತ್ರಾರ್ಥದಲ್ಲಿ ಬಂದ ಅಞಿಗೆ ಮಾತ್ರ 'ಯಞಞೋಶ್ಚ' ಸೂತ್ರವು ಲುಕ್ ಹೇಳುವುದರಿಂದ ಇಲ್ಲಿ ಅನಂತರಾಪತ್ಯಾರ್ಥದಲ್ಲಿ ಅಞ್ ಬಂದಿರುವುದರಿಂದ ಲೋಪವಿಲ್ಲ. ಹೀಗೇ ದೌಹಿತ್ರ ಮುಂತಾದ ರೂಪಗಳನ್ನು ತಿಳಿಯಬೇಕು. ದುಹಿತುಃ ಅಪತ್ಯಮ್ । ದುಹಿತೃ+ಅ. ಆದಿವೃದ್ಧಿ. ಯಣ್. ದೌಹಿತ್ರಃ ।

ಶಿವಾದಿಗಳಿಗೆ ಅಣ್ ಹೇಳುವ ಸೂತ್ರ.

**೧೦೨೦. ಶಿವಾದಿಭ್ಯೋಽಣ್ ॥ ೪-೧-೧೧೨ ॥**

**ಅಪತ್ಯೇ । ಶೈವಃ । ಗಾಂಗಃ ॥**

ಶಿವಾದಿಭ್ಯಃ, ಅಣ್ ॥ ದ್ವಿಪದ ಸೂತ್ರ. ಇನ್ನುಮುಂದೆ ಗೋತ್ರಾಧಿಕಾರವಿಲ್ಲ. ಕೇವಲ ಅಪತ್ಯಾರ್ಥದಲ್ಲಿ ಪ್ರತ್ಯಯ. **ಸೂತ್ರಾರ್ಥ**—ಶಿವಾದಿಗಣಪಠಿತ ಶಬ್ದಗಳ ಮೇಲೆ ಅಪತ್ಯಾರ್ಥದಲ್ಲಿ ಅಣ್ ಪ್ರತ್ಯಯ ಬರುತ್ತದೆ. ಶಿವಸ್ಯ ಅಪತ್ಯಮ್ । ಶಿವ+ಙಸ್+ಅಣ್. ಶಿವ+ಅ. ಣಿತ್ತಾದುದರಿಂದ ಆದಿವೃದ್ಧಿ. 'ಯಸ್ಯೇತಿ ಚ' ಶೈವಃ । ಗಂಗಾಯಾಃ ಅಪತ್ಯಮ್ । ಗಂಗಾ+ಅ=ಗಾಂಗಃ=ಗಂಗೆಯ ಮಗ.

ಋಷ್ಯಾದಿಗಳಿಗೆ ಅಣ್ ಹೇಳುವ ಸೂತ್ರ.

**೧೦೨೧. ಋಷ್ಯನ್ಧಕವೃಷ್ಣಿಕುರುಭ್ಯಶ್ಚ ॥ ೪-೧-೧೧೪ ॥**

**ಋಷಿಭ್ಯಃ—ವಾಸಿಷ್ಠಃ। ವೈಶ್ವಾಮಿತ್ರಃ। ಅನ್ಧಕೇಭ್ಯಃ—ಶ್ವಾಫಲ್ಕಃ। ವೃಷ್ಣಿಭ್ಯಃ—ವಾಸುದೇವಃ। ಕುರುಭ್ಯಃ—ನಾಕುಲಃ। ಸಾಹದೇವಃ ॥**

ದ್ವಿಪದ ಸೂತ್ರ. **ಸೂತ್ರಾರ್ಥ**—ಋಷಿವಾಚಕ ಶಬ್ದಗಳ ಮೇಲೂ, ಅನ್ಧಕ, ವೃಷ್ಣಿ, ಕುರುವಂಶವಾಚಕ ಶಬ್ದಗಳ ಮೇಲೂ ಅಪತ್ಯಾರ್ಥದಲ್ಲಿ ಅಣ್ ಬರುತ್ತದೆ. ಲೀನವಾದ ಮಂತ್ರಗಳನ್ನು ತಪೋಬಲದಿಂದ ಕಂಡುಹಿಡಿದವರು ಋಷಿಗಳು. ಅಂಧಕಾದಿಗಳು ಚಂದ್ರವಂಶದಲ್ಲಿ ಹುಟ್ಟಿದ ಕ್ಷತ್ರಿಯರನ್ನು ಹೇಳುತ್ತವೆ. ವಸಿಷ್ಠಸ್ಯ ಅಪತ್ಯಮ್ । ವಸಿಷ್ಠ+ಅ. ಆದಿವೃದ್ಧಿ, ಅಲೋಪ. ವಾಸಿಷ್ಠಃ । ವಿಶ್ವಾಮಿತ್ರಸ್ಯ ಅಪತ್ಯಮ್ ವೈಶ್ವಾಮಿತ್ರಃ । ಅಂಧಕವಂಶದಲ್ಲಿ—ಶ್ವಫಲ್ಕಸ್ಯ ಅಪತ್ಯಮ್ ಶ್ವಾಫಲ್ಕಃ। (ಅಕ್ರೂರ). ವೃಷ್ಣಿವಂಶಕ್ಕೆ—ವಸುದೇವಸ್ಯ ಅಪತ್ಯಮ್ ವಾಸುದೇವಃ। (ಕೃಷ್ಣ). ಕುರುವಂಶಕ್ಕೆ—ನಕುಲಸ್ಯ ಅಪತ್ಯಮ್ ನಾಕುಲಃ। ಸಹದೇವಸ್ಯ ಅಪತ್ಯಮ್ ಸಾಹದೇವಃ ॥

ಮಾತೃ ಶಬ್ದಕ್ಕೆ ಅಣ್ ವಿಧಾಯಕ ಸೂತ್ರ.

**೧೦೨೨. ಮಾತುರುತ್ಸಂಖ್ಯಾಸಂಭದ್ರಪೂರ್ವಾಯಾಃ ॥ ೪-೧-೧೧೫ ॥**

**ಸಂಖ್ಯಾದಿಪೂರ್ವಸ್ಯ ಮಾತೃಶಬ್ದಸ್ಯೋದಾದೇಶಃ ಸ್ಯಾದಣ್ ಪ್ರತ್ಯಯಶ್ಚ । ದ್ವೈಮಾತುರಃ। ಷಾಣ್ಮಾತುರಃ। ಸಾಂಮಾತುರಃ। ಭಾದ್ರಮಾತುರಃ॥**

ಮಾತುಃ, ಉತ್, ಸಂಖ್ಯಾಸಂಭದ್ರಪೂರ್ವಾಯಾಃ ॥ ತ್ರಿಪದ ಸೂತ್ರ. **ಸೂತ್ರಾರ್ಥ**—ಸಂಖ್ಯಾವಾಚಕ ಶಬ್ದ, ಸಮ್, ಭದ್ರ ಶಬ್ದಗಳೇ ಪೂರ್ವದಲ್ಲಿರುವ ಮಾತೃ ಶಬ್ದಕ್ಕೆ ಉತ್ ಆದೇಶವೂ ಅಣ್ ಪ್ರತ್ಯಯವೂ ಬರುತ್ತವೆ. ದ್ವಯೋಃ ಮಾತ್ರೋಃ ಅಪತ್ಯಮ್ । 'ತದ್ಧಿತಾರ್ಥೋತ್ತರಪದಸಮಾಹಾರೇ ಚ' ಸೂತ್ರದಿಂದ ಸಮಾಸ. ದ್ವಿ+ಜಸ್+ಮಾತೃ+ಜಸ್+ಅಣ್. ದ್ವಿಮಾತೃ+ಅ. ಋಕಾರಕ್ಕೆ ಉತ್ ಆದೇಶ. ಋಕಾರದ ಸ್ಥಾನಕ್ಕೆ ಬರುವುದರಿಂದ 'ಉರಣ್ರಪರಃ' ಸೂತ್ರದಿಂದ ರ ಪರವಾಗಿ ಬಂದರೆ ದ್ವಿಮಾತುರ್+ಅ. ಆದಿವೃದ್ಧಿ. ದ್ವೈಮಾತುರಃ=ಗಣಪತಿ. ಷಣ್ಣಾಂ ಮಾತೄಣಾಂ ಅಪತ್ಯಮ್. ಷಣ್ಮಾತುರ್+ಅ. ಷಾಣ್ಮಾತುರಃ=ಷಣ್ಮುಖ. ಸಮೀಚೀನಾ ಮಾತಾ ಸಂಮಾತಾ । ಸಂಮಾತುಃ ಅಪತ್ಯಮ್ । ಸಂಮಾತುರ್+ಅ =ಸಾಂಮಾತುರಃ=ಒಳ್ಳೇ ತಾಯಿಯ ಮಗ. ಭದ್ರಾ ಚ ಸಾ ಮಾತಾ ಚ ಭದ್ರಮಾತಾ। ಭದ್ರಮಾತುಃ ಅಪತ್ಯಮ್ । ಭಾದ್ರಮಾತುರಃ।

ಢಕ್ ಪ್ರತ್ಯಯವಿಧಾಯಕ ಸೂತ್ರ.

**೧೦೨೩. ಸ್ತ್ರೀಭ್ಯೋ ಢಕ್ ॥ ೪-೧-೧೨೦ ॥**

**ಸ್ತ್ರೀಪ್ರತ್ಯಯಾನ್ತೇಭ್ಯೋ ಢಕ್ ॥ ವೈನತೇಯಃ ॥**

ದ್ವಿಪದ ಸೂತ್ರ. ಸ್ತ್ರೀಪದದಿಂದ ಟಾಬಾದಿಸ್ತ್ರೀಪ್ರತ್ಯಯಗಳು ವಿವಕ್ಷಿತವಾಗಿವೆ. **ಸೂತ್ರಾರ್ಥ**—ಸ್ತ್ರೀಪ್ರತ್ಯಯಾನ್ತವಾದ ಶಬ್ದಗಳಮೇಲೆ ಅಪತ್ಯಾರ್ಥದಲ್ಲಿ ಢಕ್ ಪ್ರತ್ಯಯ ಬರುತ್ತದೆ. ವಿನತಾ ಟಾಬಂತ ಶಬ್ದ. ವಿನತಾಯಾಃ ಅಪತ್ಯಮ್ । ವಿನತಾ+ಢ. 'ಆಯನೇಯೀ—' ಸೂತ್ರದಿಂದ ಢ್‌ಗೆ ಏಯ್ ಆದೇಶ. ವಿನತಾ+ಏಯ್+ಅ. ಕಿತ್ತಾದುದರಿಂದ 'ಕಿತಿ ಚ' ಸೂತ್ರದಿಂದ ಆದಿವೃದ್ಧಿ. 'ಯಸ್ಯೇತಿ ಚ' ವೈನತೇಯಃ=ಗರುಡ.

ಕನ್ಯಾ ಶಬ್ದಕ್ಕೆ ಅಣ್ ಮತ್ತು ಆದೇಶ ಹೇಳುವ ಸೂತ್ರ.

**೧೦೨೪. ಕನ್ಯಾಯಾಃ ಕನೀನ ಚ ॥ ೪-೧-೧೧೬ ॥**

**ಚಾದಣ್ । ಕಾನೀನೋ ವ್ಯಾಸಃ ಕರ್ಣಶ್ಚ ॥**

ತ್ರಿಪದ ಸೂತ್ರ. ಕನೀನ ಎಂಬಲ್ಲಿ ಪ್ರಥಮಾ ಲುಪ್ತವಾಗಿದೆ. **ಸೂತ್ರಾರ್ಥ**—ಕನ್ಯಾ ಶಬ್ದಕ್ಕೆ ಕನೀನಾದೇಶವೂ ಢಕ್ಕಿಗೆ ಅಪವಾದವಾಗಿ ಅಣ್ ಪ್ರತ್ಯಯವೂ ಬರುತ್ತದೆ. ಕನ್ಯಾಯಾಃ ಅಪತ್ಯಮ್ । ಮದುವೆಯಾಗದಿರುವ ಹುಡುಗಿಯ ಮಗ. ಕನ್ಯಾ ಶಬ್ದಕ್ಕೆ ಕನೀನ ಆದೇಶ. ಕನೀನ+ಅ. ಆದಿವೃದ್ಧಿ, ಅಲೋಪ. ಕಾನೀನಃ=ವ್ಯಾಸ ಅಥವಾ ಕರ್ಣ.

ಅಪತ್ಯಾರ್ಥದಲ್ಲಿ ಯತ್ ಹೇಳುವ ಸೂತ್ರ.

**೧೦೨೫. ರಾಜಶ್ವಶುರಾದ್ಯತ್ ॥ ೪-೧-೧೩೭ ॥**

**(ರಾಜ್ಞೋ ಜಾತಾವೇವೇತಿ ವಾಚ್ಯಮ್)**

ರಾಜಶ್ವಶುರಾತ್, ಯತ್ ॥ ದ್ವಿಪದ ಸೂತ್ರ. ರಾಜನ್ ಶಬ್ದದಮೇಲೂ ಶ್ವಶುರ ಶಬ್ದದ ಮೇಲೂ ಅಪತ್ಯಾರ್ಥದಲ್ಲಿ ಯತ್ ಪ್ರತ್ಯಯ ಬರುತ್ತದೆ. ಅಣ್, ಇಞ್ ಪ್ರತ್ಯಯಗಳಿಗೆ ಅಪವಾದ. ರಾಜನ್ ಶಬ್ದದ ಮೇಲೆ ಯತ್ ಬರುವುದಾದರೆ ಪ್ರಕೃತಿ ಪ್ರತ್ಯಯ ಸಮುದಾಯದಿಂದ ಜಾತಿ ತೋರುವಾಗ ಮಾತ್ರ ಹೇಳಬೇಕು. ಅಂದರೆ ಕ್ಷತ್ರಿಯನಿಂದ ಕ್ಷತ್ರಿಯಳಲ್ಲಿ ಹುಟ್ಟಿದ ಸಂತಾನಾರ್ಥ ತೋರುವಾಗ ಮಾತ್ರ ಯತ್. ವೈಶ್ಯಾದಿಸ್ತ್ರೀಯಲ್ಲಿ ಕ್ಷತ್ರಿಯನಿಂದ ಹುಟ್ಟಿದ ಸಂತಾನವಾದರೆ ಅಲ್ಲಿ ಯತ್ ಬರುವುದಿಲ್ಲ. **ರಾಜ್ಞಃ ಅಪತ್ಯಮ್** । ರಾಜನ್+ಙಸ್+ಯ. ರಾಜನ್+ಯ ಎಂದಿರುವಾಗ

'ನಸ್ತದ್ಧಿತೇ' ಸೂತ್ರದಿಂದ ಟಿಲೋಪ ಪ್ರಾಪ್ತವಾದರೆ ಅನಿಗೆ ಪ್ರಕೃತಿಭಾವ ಹೇಳುತ್ತಾನೆ.

ಅನಿಗೆ ಪ್ರಕೃತಿಭಾವ ಹೇಳುವ ಸೂತ್ರ.

೧೦೨೬. **ಯೇ ಚಾಭಾವಕರ್ಮಣೋಃ** ॥ ೬-೪-೧೬೮ ॥

**ಯಾದೌ ತದ್ಧಿತೇ ಪರೇಽನ್ ಪ್ರಕೃತ್ಯಾ ಸ್ಯಾನ್ನತು ಭಾವಕರ್ಮಣೋಃ। ರಾಜನ್ಯಃ। ಜಾತಾವೇವೇತಿ ಕಿಮ್ ?—**

ಯೇ, ಚ, ಅಭಾವಕರ್ಮಣೋಃ ॥ ತ್ರಿಪದ ಸೂತ್ರ. 'ಅನ್' ಪೂರ್ವ ಸೂತ್ರವೂ, 'ಪ್ರಕೃತ್ಯೈಕಾಚ್' ಸೂತ್ರದಿಂದ 'ಪ್ರಕೃತ್ಯಾ' ಪದವೂ ಅನುವೃತ್ತವಾಗುತ್ತವೆ. ಅಂಗಾಧಿಕಾರದಿಂದ ಪ್ರತ್ಯಯವು ಲಬ್ಧವಾಗುತ್ತದೆ. ಅದಕ್ಕೆ 'ಯೇ' ಎಂಬ ಸಪ್ತಮ್ಯಂತವರ್ಣವು ವಿಶೇಷಣವಾದುದರಿಂದ ತದಾದಿಲಾಭ. ಯಕಾರಾದಿಯಾದ ತದ್ಧಿತಪ್ರತ್ಯಯಃಪರದಲ್ಲಿರುವಾಗ ಅನ್ ಪ್ರಕೃತಿಭಾವವನ್ನು ಹೊಂದುತ್ತದೆ; ಭಾವಕರ್ಮಾರ್ಥ ತೋರುವಾಗ ಮಾತ್ರ ಈ ಪ್ರಕೃತಿಭಾವ ಬರುವುದಿಲ್ಲ. ರಾಜನ್ + ಯ. ಯಕಾರಾದಿಪ್ರತ್ಯಯವಿರುವುದರಿಂದ ಅನಿಗೆ ಪ್ರಕೃತಿಭಾವ. ರಾಜನ್ಯಃ= ಕ್ಷತ್ರಿಯ ಜಾತಿ. ಜಾತಿ ತೋರುವಾಗ ಮಾತ್ರ ಯತ್ ಎಂದುದೇಕೆ ? ವೈಶ್ಯ ಅಥವಾ ಶೂದ್ರ ಸ್ತ್ರೀಯಲ್ಲಿ ಕ್ಷತ್ರಿಯನಿಂದ ಹುಟ್ಟಿದವನು ಎಂದು ತೋರುವಾಗ ಕ್ಷತ್ರಿಯ ಜಾತಿ ತೋರದಿರುವುದರಿಂದ ಅಲ್ಲಿ ಅಪತ್ಯಾರ್ಥದಲ್ಲಿ ಅಣ್. ರಾಜನ್ + ಅ ಎಂದಿರುವಾಗ 'ನಸ್ತದ್ಧಿತೇ' ಸೂತ್ರದಿಂದ ಟಿಲೋಪ ಪ್ರಾಪ್ತವಾದರೆ ಪ್ರಕೃತಿಭಾವ ಹೇಳುತ್ತಾನೆ.

ಅನಿಗೆ ಪ್ರಕೃತಿಭಾವ ಹೇಳುವ ಸೂತ್ರ.

೧೦೨೭. **ಅನ್** ॥ ೬-೪-೧೬೭ ॥

**ಅನ್ ಪ್ರಕೃತ್ಯಾ ಸ್ಯಾದಣಿ ಪರೇ। ರಾಜನಃ। ಶ್ವಶುರ್ಯಃ ॥**

ಏಕಪದ ಸೂತ್ರ. 'ಇನಣ್ಯನಪತ್ಯೇ' ಸೂತ್ರದಿಂದ 'ಅಣಿ', 'ಪ್ರಕೃತ್ಯೈಕಾಚ್' ಸೂತ್ರದಿಂದ 'ಪ್ರಕೃತ್ಯಾ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಅಣ್ ಪ್ರತ್ಯಯಪರದಲ್ಲಿರುವಾಗ ಅನಿಗೆ ಪ್ರಕೃತಿಭಾವ ಬರುತ್ತದೆ. ಟಿಲೋಪಕ್ಕೆ ಅಪವಾದ. ರಾಜನಃ। ಶ್ವಶುರಸ್ಯ ಅಪತ್ಯಮ್। ಹಿಂದಿನ ಸೂತ್ರದಿಂದ **ಯತ್**. ಶ್ವಶುರ+ಯ. 'ಯಸ್ಯೇತಿ ಚ' ಅಲೋಪ. ಶ್ವಶುರ್ಯಃ=ಮಾವನ ಮಗ.

ಘಪ್ರತ್ಯಯವಿಧಾಯಕ ಸೂತ್ರ.

೧೦೨೮. **ಕ್ಷತ್ರಾದ್ ಘಃ** ॥ ೪-೧-೧೩೮ ॥

**ಕ್ಷತ್ರಿಯಃ। ಜಾತಾವಿತ್ಯೇವ। ಕ್ಷಾತ್ರಿರನ್ಯತ್ರ ॥**

ಕ್ಷತ್ರಾತ್, ಘಃ ॥ ದ್ವಿಪದ ಸೂತ್ರ. **ಸೂತ್ರಾರ್ಥ**—ಕ್ಷತ್ರ ಶಬ್ದದ ಮೇಲೆ ಅಪತ್ಯಾರ್ಥದಲ್ಲಿ ಘಪ್ರತ್ಯಯ ಬರುತ್ತದೆ. ಇಲ್ಲಿಯೂ ಪ್ರಕೃತಿಪ್ರತ್ಯಯಸಮುದಾಯ ದಿಂದ ಜಾತಿ ತೋರುವಾಗ ಮಾತ್ರ ಈ ಪ್ರತ್ಯಯ. ಜಾತಿ ತೋರದಿರುವಾಗ 'ಅತ ಇಞ್' ಸೂತ್ರದಿಂದ ಇಞ್‌ಪ್ರತ್ಯಯ. ಕ್ಷತ್ರಸ್ಯ ಅಪತ್ಯಮ್ । ಕ್ಷತ್ರ+ಙಸ್+ಘ. 'ಆಯನೇಯೀನಿ—' ಸೂತ್ರದಿಂದ ಘ್ ಎಂಬುದಕ್ಕೆ ಇಯ್ ಆದೇಶ. ಕ್ಷತ್ರ್+ ಇಯ್+ಅ. ಕ್ಷತ್ರಿಯಃ । ಕ್ಷತ್ರಿಯ ಜಾತಿಯಲ್ಲಿ ಹುಟ್ಟಿದವನು. ಅನ್ಯತ್ರ ಅಂದರೆ ಜಾತಿ ತೋರದಿರುವಾಗ ಇಞ್. ಕ್ಷತ್ರ+ಇ. ಞಿತ್ತಾದುದರಿಂದ ಆದಿವೃದ್ಧಿ. 'ಯಸ್ಯೇತಿ ಚ' ಅಕಾರಲೋಪ. ಕ್ಷಾತ್ರಿಃ ।

ಠಕ್ ಪ್ರತ್ಯಯವಿಧಾಯಕ ಸೂತ್ರ.

**೧೧೨೯. ರೇವತ್ಯಾದಿಭ್ಯಷ್ಠಕ್ ॥ ೪-೧-೧೪೬ ॥**

ರೇವತ್ಯಾದಿಭ್ಯಃ, ಠಕ್ ॥ ದ್ವಿಪದ ಸೂತ್ರ. **ಸೂತ್ರಾರ್ಥ**—ರೇವತ್ಯಾದಿಗಣ ಪಠಿತವಾದ ಪ್ರಾತಿಪದಿಕಪ್ರಕೃತಿಕಷಷ್ಠ್ಯಂತದ ಮೇಲೆ ಅಪತ್ಯಾರ್ಥದಲ್ಲಿ ಠಕ್ ಪ್ರತ್ಯಯ ಬರುತ್ತದೆ. 'ಹಲಂತ್ಯಮ್' ಸೂತ್ರದಿಂದ ಕಕಾರಕ್ಕೆ ಇತ್‌ಸಂಜ್ಞೆ ಬಂದು ಲೋಪವಾಗುತ್ತದೆ. ಠಕಾರದ ಅಕಾರ ಉಚ್ಚಾರಣಾರ್ಥವಾಗಿದೆ. ಹಿಂದಿನ ಸೂತ್ರ ಗಳಿಂದ ಢಕಾದಿಗಳು ಬರುತ್ತಿದ್ದರೆ ಅದಕ್ಕೆ ಅಪವಾದ. ರೇವತ್ಯಾಃ ಅಪತ್ಯಮ್ । ರೇವತೀ+ಠ ಎಂದಿರುವಾಗ ಠಕಾರಕ್ಕೆ ಇಕಾದೇಶ ಹೇಳುತ್ತಾನೆ.

ಠಕಾರಕ್ಕೆ ಇಕಾದೇಶ ಹೇಳುವ ಸೂತ್ರ.

**೧೧೩೦. ಠಸ್ಯೇಕಃ ॥ ೭-೩-೫೦ ॥**

**ಅಂಗಾತ್ ಪರಸ್ಯ ಠಸ್ಯೇಕಾದೇಶಃ ಸ್ಯಾತ್ । ರೈವತಿಕಃ ॥**

ಠಸ್ಯ, ಇಕಃ ॥ ದ್ವಿಪದ ಸೂತ್ರ. 'ಅಂಗಸ್ಯ' ಅಧಿಕಾರ. ಇಲ್ಲಿ ಪಂಚಮ್ಯಂತ ವಾಗಿ ಪರಿಣತವಾಗುತ್ತದೆ. **ಸೂತ್ರಾರ್ಥ**—ಅಂಗದ ಪರದಲ್ಲಿರುವ ಠಕಾರಕ್ಕೆ ಇಕ ಆದೇಶ ಬರುತ್ತದೆ. ಪ್ರಕೃತ ಠಕ್ಕೆ ಇಕಾದೇಶ ಬಂದರೆ ರೇವತೀ+ಇಕ ಎಂದಿರುವಾಗ ಪ್ರತ್ಯಯ ಕಿತ್ತಾದುದರಿಂದ ಆದಿವೃದ್ಧಿ. 'ಯಸ್ಯೇತಿ ಚ' ಈಕಾರಲೋಪ. ರೈವತಿಕಃ =ರೇವತಿಯ ಮಗ.

ಅಞ್‌ಪ್ರತ್ಯಯವಿಧಾಯಕ ಸೂತ್ರ.

**೧೧೩೧. ಜನಪದಶಬ್ದಾತ್ ಕ್ಷತ್ರಿಯಾದಞ್ ॥ ೪-೧-೧೬೮ ॥**

**ಜನಪದಕ್ಷತ್ರಿಯವಾಚಕಾಚ್ಛಬ್ದಾದಞ್ ಸ್ಯಾದಪತ್ಯೇ ॥ ಪಾಞ್ಚಾಲಃ । ವಾ ॥ (ಕ್ಷತ್ರಿಯಸಮಾನಶಬ್ದಾಜ್ಜನಪದಾತ್ತಸ್ಯ ರಾಜನ್ಯಪತ್ಯವತ್) ಪಂಚಾಲಾನಾಂ ರಾಜಾ ಪಾಂಚಾಲಃ ।**

**ವಾ || (ಪೂರೋರಣ್ ವಕ್ತವ್ಯಃ) ಪೌರವಃ |**
**(ಪಾಣ್ಡೋರ್ಡ್ಯಣ್) ಪಾಣ್ಡ್ಯಃ ||**

ತ್ರಿಪದ ಸೂತ್ರ. ಜನಪದ ಶಬ್ದಃ (ವಾಚಕಃ) ಯಸ್ಯ ಸಃ ಜನಪದಶಬ್ದಃ| ತಸ್ಮಾತ್. **ಸೂತ್ರಾರ್ಥ**—ಜನಪದ(ದೇಶ)ವಾಚಿಯಾಗಿ ಕ್ಷತ್ರಿಯವಾಚಕವಾದ ಯಾವ ಶಬ್ದವಿದೆಯೋ ಆ ಶಬ್ದವೇ ಪ್ರಕೃತಿಯಾಗಿರುವ ಷಷ್ಠ್ಯಂತದಮೇಲೆ ಅಪತ್ಯಾರ್ಥದಲ್ಲಿ ಅಞ್ ಪ್ರತ್ಯಯ ಬರುತ್ತದೆ. ಪಂಚಾಲ ಶಬ್ದ ದೇಶವಾಚಕವಾಗಿ ಕ್ಷತ್ರಿಯ ವಾಚಕವಾಗಿದೆ. ಪಂಚಾಲಸ್ಯ ಅಪತ್ಯಮ್ | ಪಂಚಾಲ+ಅ. ಞಿತ್ತಾದುದರಿಂದ ಆದಿವೃದ್ಧಿ. ಅಲೋಪ. ಪಾಂಚಾಲಃ | **ವಾರ್ತಿಕಾರ್ಥ**—ಕ್ಷತ್ರಿಯವಾಚಕವಾದ ಯಾವ ದೇಶವಾಚಕಶಬ್ದವಿದೆಯೋ ಅದರ ಮೇಲೆ ರಾಜನೆಂಬರ್ಥದಲ್ಲಿ ಅಪತ್ಯ ಪ್ರತ್ಯಯದಂತೆ ಪ್ರತ್ಯಯ ಬರುತ್ತದೆ. ಅಪತ್ಯಾರ್ಥದಲ್ಲಿ ಬಂದ ಪ್ರತ್ಯಯವೇ ರಾಜಾರ್ಥದಲ್ಲಿಯೂ ಬರುತ್ತದೆ ಎಂದರ್ಥ. ಹಿಂದಿನ ಪಂಚಾಲಶಬ್ದವೇ ಕ್ಷತ್ರಿಯವಾಚಕವೂ ದೇಶವಾಚಕವೂ ಆಗಿದೆ. ಆದುದರಿಂದ ಅಞ್. ಪಂಚಾಲಾನಾಂ ರಾಜಾ ಪಾಂಚಾಲಃ | ಹಿಂದಿನಂತೇ ಪ್ರಕ್ರಿಯೆ. ಅಂಗಾನಾಂ ರಾಜಾ ಆಂಗಃ | ಇತ್ಯಾದಿ. ಪೂರು ಶಬ್ದದಮೇಲೆ ಅಪತ್ಯ ಮತ್ತು ರಾಜ ಎಂಬರ್ಥದಲ್ಲಿ ಅಣ್ ಬರುತ್ತದೆ. ಅಣಿಗೂ ಅಞಿಗೂ ಸ್ವರದಲ್ಲಿ ವ್ಯತ್ಯಾಸ. ಪೂರೋಃ ಅಪತ್ಯಮ್ | ಪೂರು+ಅ. ಆದಿವೃದ್ಧಿ. ಪೌರು+ಅ. 'ಓರ್ಗುಣಃ'. ಪೌರೋ+ಅ. 'ಏಚೋಽಯವಾಯಾವಃ' ಪೌರವಃ| ಪಾಂಡುಶಬ್ದದಮೇಲೆ ಅಪತ್ಯ, ರಾಜ ಅರ್ಥದಲ್ಲಿ ಡ್ಯಣ್ ಪ್ರತ್ಯಯ ಬರುತ್ತದೆ. 'ಚುಟೂ' ಸೂತ್ರದಿಂದ ಡಕಾರವೂ 'ಹಲಂತ್ಯಮ್' ಸೂತ್ರದಿಂದ ಣಕಾರವೂ ಇತ್ತಾಗಿ ಯ ಮಾತ್ರ ಉಳಿಯುತ್ತದೆ. ಪಾಂಡೋಃ ಅಪತ್ಯಮ್, ಪಾಂಡೋಃ ರಾಜಾ ವಾ | ಪಾಂಡು+ಯ. ಡಿತ್ತಾದುದರಿಂದ ಟಿಲೋಪ. ಪಾಂಡ್+ಯ=ಪಾಂಡ್ಯಃ | ಪಾಂಡುವಿನ ಮಗ ಅಥವಾ ಪಾಂಡುದೇಶದ ರಾಜ. ಇಲ್ಲಿ ಪಾಂಡವರ ತಂದೆಯಾದ ಪಾಂಡುವಲ್ಲ.

ಣ್ಯಪ್ರತ್ಯಯ ಹೇಳುವ ಸೂತ್ರ.

**೧೧೩೨. ಕುರುನಾದಿಭ್ಯೋ ಣ್ಯಃ || ೪-೧-೧೭೨ ||**
**ಕೌರವ್ಯಃ | ನೈಷಧ್ಯಃ ||**

ದ್ವಿಪದ ಸೂತ್ರ. ಜನಪದಕ್ಷತ್ರಿಯವಾಚಕಗಳಾದ ಕುರು ಶಬ್ದದ ಮೇಲೂ ನಕಾರಾದಿ ಶಬ್ದದ ಮೇಲೂ ಅಪತ್ಯ ಮತ್ತು ರಾಜ ಅರ್ಥದಲ್ಲಿ ಣ್ಯಪ್ರತ್ಯಯ ಬರುತ್ತದೆ. ಕುರೋರಪತ್ಯಮ್. ಕುರು+ಯ. ಣಿತ್ತಾದುದರಿಂದ ಆದಿವೃದ್ಧಿ. 'ಓರ್ಗುಣಃ' ಸೂತ್ರದಿಂದ ಉಕಾರಕ್ಕೆ ಗುಣ. ಅವಾದೇಶ. ಕೌರವ್+ಯ=ಕೌರವ್ಯಃ | ಕುರುವಿನ ಮಗ ಅಥವಾ ರಾಜ. ನಿಷಧಾನಾಂ ರಾಜಾ. ನಿಷಧ+ಯ. ಆದಿವೃದ್ಧಿ, ಅಲೋಪ. ನೈಷಧ್ಯಃ | ನಿಷಧದೇಶದ ರಾಜ ಅಥವಾ ನಿಷಧನ ಮಗ.

ತದ್ರಾಜಸಂಜ್ಞಾವಿಧಾಯಕ ಸೂತ್ರ.

**೧೦೩೩. ತೇ ತದ್ರಾಜಾಃ ॥ ೪-೧-೧೭೪ ॥**

**ಅಞಾದಯಸ್ತದ್ರಾಜಸಂಜ್ಞಾಃ ಸ್ಯುಃ ॥**

ದ್ವಿಪದ ಸೂತ್ರ. ತೇ ಅವುಗಳು ಅಂದರೆ 'ಜನಪದಶಬ್ದಾತ್—' ಸೂತ್ರದಿಂದ ಆರಂಭಿಸಿ ಇಲ್ಲಿಯವರೆಗೆ ಹೇಳಿರುವ ಅಞಾದಿಪ್ರತ್ಯಯಗಳು ಪರಾಮೃಷ್ಟವಾಗುತ್ತವೆ. **ಸೂತ್ರಾರ್ಥ**—ಅಪತ್ಯ ಮತ್ತು ರಾಜ ಎಂಬರ್ಥದಲ್ಲಿ ವಿಹಿತವಾದ ಅಞಾದಿಪ್ರತ್ಯಯಗಳು ತದ್ರಾಜ ಎಂಬ ಸಂಜ್ಞೆಯನ್ನು ಹೊಂದುತ್ತವೆ. ಅದಕ್ಕೆ ಪ್ರಯೋಜನ ಹೇಳುತ್ತಾನೆ.

ತದ್ರಾಜಪ್ರತ್ಯಯಕ್ಕೆ ಲುಕ್ ಹೇಳುವ ಸೂತ್ರ.

**೧೦೩೪. ತದ್ರಾಜಸ್ಯ ಬಹುಷು ತೇನೈವಾಸ್ತ್ರಿಯಾಮ್ ॥ ೨-೪-೬೨ ॥**

**ಬಹುಷ್ವರ್ಥೇಷು ತದ್ರಾಜಸ್ಯ ಲುಕ್ ತದರ್ಥಕೃತೇ ಬಹುತ್ವೇ ನ ತು ಸ್ತ್ರಿಯಾಮ್ । ಇಕ್ಷ್ವಾಕವಃ । ಪಞ್ಚಾಲಾಃ ಇತ್ಯಾದಿ.**

ತದ್ರಾಜಸ್ಯ, ಬಹುಷು, ತೇನ, ಏವ, ಅಸ್ತ್ರಿಯಾಮ್ ॥ ಐದು ಪದಗಳುಳ್ಳ ಸೂತ್ರ. 'ಣ್ಯಕ್ಷತ್ರಿಯಾರ್ಷ—' ಸೂತ್ರದಿಂದ 'ಲುಕ್' ಅನುವೃತ್ತಿ. **ಸೂತ್ರಾರ್ಥ**—ಬಹುತ್ವ ಅರ್ಥತೋರುತ್ತಿರುವಾಗ ತದ್ರಾಜಸಂಜ್ಞೆಯುಳ್ಳ ಪ್ರತ್ಯಯಗಳಿಗೆ ಲುಕ್; ಆ ಬಹುತ್ವವು ಕೇವಲ ಅಞಾದಿಪ್ರತ್ಯಯಾಂತಾರ್ಥದಲ್ಲಿರುವ ಬಹುತ್ವವಾಗಿರಬೇಕು. 'ತೇನ' ಪದವಾದ ಮೇಲೆ 'ಬಹುತ್ವೇ ಕೃತೇ' ಎಂದು ಅಧ್ಯಾಹಾರ. ಬಹುವ್ರೀಹ್ಯಾದಿಗಳಲ್ಲಿ ಅನ್ಯಪದಾರ್ಥಪ್ರಧಾನವಾದುದರಿಂದ ಅನ್ಯಪದಾರ್ಥಗತಬಹುತ್ವ ತೋರಿದರೆ ಬರುವುದಿಲ್ಲ. ಈ ಲೋಪ ಸ್ತ್ರೀಲಿಂಗದಲ್ಲಿ ಬರುವುದಿಲ್ಲ. ಇಕ್ಷ್ವಾಕೂಣಾಂ ರಾಜಾ ಐಕ್ಷ್ವಾಕಃ ಎಂದು ಹಿಂದೆ ರೂಪವಾಗಿದೆ. ಐಕ್ಷ್ವಾಕಃ । ಐಕ್ಷ್ವಾಕೌ । ಐಕ್ಷ್ವಾಕ + ಜಸ್. ಇಲ್ಲಿ ಬಹುತ್ವ ತೋರುವಾಗ ಅಞಿಗೆ ಲುಕ್. ನಿಮಿತ್ತವಿಲ್ಲದಿರುವುದರಿಂದ ವೃದ್ಧ್ಯಾದಿಗಳಿಲ್ಲ. ಇಕ್ಷ್ವಾಕವಃ । ಪಾಂಚಾಲಃ ಎಂದು ಹಿಂದೆ ಅಪತ್ಯ ಅಥವಾ ರಾಜ ಎಂಬರ್ಥದಲ್ಲಿ ರೂಪವಾಗಿದೆ. ಬಹುವಚನದಲ್ಲಿ ಅಞ್ ಲುಕ್ಕಾಗುವುದರಿಂದ ಪಂಚಾಲಾಃ ಎಂದಾಗುತ್ತದೆ. ಹೀಗೇ ಆಂಗಃ-ಆಂಗೌ-ಅಂಗಾಃ ॥ ಇತ್ಯಾದಿ.

ತದ್ರಾಜಪ್ರತ್ಯಯಕ್ಕೆ ಲುಕ್ ಹೇಳುವ ಸೂತ್ರ.

**೧೦೩೫. ಕಮ್ಬೋಜಾಲ್ಲುಕ್ ॥ ೪-೧-೧೭೫ ॥**

**ಅಸ್ಮಾತ್ತದ್ರಾಜಸ್ಯ ಲುಕ್ । ಕಮ್ಬೋಜಃ । ಕಮ್ಬೋಜೌ । ವಾ ॥ (ಕಮ್ಬೋಜಾದಿಭ್ಯ ಇತಿ ವಕ್ತವ್ಯಮ್)**

**ಚೋಲಃ । ಶಕಃ । ಕೇರಲಃ । ಯವನಃ ॥**

ಇತ್ಯಪತ್ಯಾಧಿಕಾರಃ ॥ ೨ ॥

ಕಮ್ಬೋಜಾತ್, ಲುಕ್ ॥ ದ್ವಿಪದ ಸೂತ್ರ. 'ತೇ ತದ್ರಾಜಾಃ' ಸೂತ್ರದಿಂದ 'ತದ್ರಾಜಾಃ' ಪದವು ಅನುವೃತ್ತವಾಗಿ ಷಷ್ಠ್ಯನ್ತವಾಗಿ ವಿಪರಿಣತವಾಗುತ್ತದೆ. ಕಂಬೋಜ ಶಬ್ದದ ಮೇಲೆ ವಿಹಿತವಾದ ತದ್ರಾಜಪ್ರತ್ಯಯಕ್ಕೆ ಲುಕ್ ಬರುತ್ತದೆ. ಕಂಬೋಜಾನಾಂ ರಾಜಾ । (ಅಪತ್ಯಮ್) ಕಂಬೋಜ+ಅ. ಅಞಿಗೆ ಲುಕ್ ಬಂದರೆ ಕಂಬೋಜ ಎಂದೇ ಇರುತ್ತದೆ. ಕಂಬೋಜದೇಶದ ರಾಜ. ಬಹುತ್ವದಲ್ಲಿ ಹಿಂದಿನ ಸೂತ್ರದಿಂದಲೇ ಲುಕ್ ಸಿದ್ಧವಾದರೂ ಏಕವಚನ, ದ್ವಿವಚನದಲ್ಲಿ ಲೋಪಕ್ಕೋಸ್ಕರ ಈ ಸೂತ್ರ ಆರಬ್ಧವಾಗಿದೆ. ಸೂತ್ರದಲ್ಲಿ ಒಂದೇ ಶಬ್ದ ಹೇಳಿದೆ. ಆದರೆ ಇನ್ನೂ ಕೆಲವು ಶಬ್ದಗಳಲ್ಲಿ ಲುಕ್ ದೃಷ್ಟವಾಗಿರುವುದರಿಂದ ವಾರ್ತಿಕ ಆರಬ್ಧವಾಗಿದೆ. ಕಂಬೋಜಾದಿಶಬ್ದಗಳ ಪರದಲ್ಲಿರುವ ತದ್ರಾಜಪ್ರತ್ಯಯಕ್ಕೆ ಲುಕ್ ಹೇಳಬೇಕು. ಚೋಲಾದಿಗಳು ಕಂಬೋಜಾದಿಯಲ್ಲಿ ಸೇರಿವೆ. ಚೋಲಾನಾಂ ರಾಜಾ ಚೋಲಃ । ಶಕಾನಾಂ ರಾಜಾ ಶಕಃ । ಕೇರಲಾನಾಂ ರಾಜಾ ಕೇರಲಃ । ಯವನಾನಾಂ ರಾಜಾ ಯವನಃ । ಇಲ್ಲಿ ಅಞಿಗೆ ಲುಕ್ ಬಂದುದರಿಂದ ಅಞಿನ ಯಾವ ಕಾರ್ಯವೂ ಬಂದಿಲ್ಲ. ಈ ಪ್ರಕರಣದಲ್ಲಿ ಅಪತ್ಯಾರ್ಥದಲ್ಲಿ ಪ್ರತ್ಯಯಗಳನ್ನು ಹೇಳಿದುದರಿಂದ **ಇದಕ್ಕೆ ಅಪತ್ಯಾಧಿಕಾರವೆಂದು** ಹೆಸರು.

ಹೀಗೆ ಅಪತ್ಯಾಧಿಕಾರ **ಮುಗಿದಿದೆ.**

## ೨೫. ಅಥ ರಕ್ತಾದ್ಯರ್ಥಕಾಃ

ರಕ್ತಾರ್ಥದಲ್ಲಿ ಅಣ್ ಹೇಳುವ ಸೂತ್ರ.

೧೦೩೬. ತೇನ ರಕ್ತಂ ರಾಗಾತ್ ॥ ೪-೨-೧ ॥

**ಅಣ್ ಸ್ಯಾತ್ । ರಜ್ಯತೇಽನೇನೇತಿ ರಾಗಃ । ಕಷಾಯೇಣ ರಕ್ತಂ ವಸ್ತ್ರಂ ಕಾಷಾಯಮ್ ॥**

ತ್ರಿಪದ ಸೂತ್ರ. 'ಪ್ರಾಗ್‌ದೀವ್ಯತೋಽಣ್' ಅಧಿಕಾರದಿಂದ 'ಅಣ್' ಲಬ್ಧವಾಗುತ್ತದೆ. ರಜ್ಯತೇ ವರ್ಣಾಂತರಂ ಪ್ರಾಪ್ಯತೇ ಅನೇನ ಇತಿ ರಾಗಃ । ರಂಜನ ಸಾಧನವಾದ ದ್ರವ್ಯ. ಯಾವುದರಿಂದ ಒಂದು ವಸ್ತುವಿಗೆ ವರ್ಣಾಂತರ ಹೊಂದಿಸಲ್ಪಡುತ್ತದೋ ಅದು ರಾಗ. **ಸೂತ್ರಾರ್ಥ**—ರಂಜಕದ್ರವ್ಯವಾಚಕ ಶಬ್ದವೇ ಪ್ರಕೃತಿಯಾಗಿರುವ ತೃತೀಯಾಂತದ ಮೇಲೆ ರಕ್ತಂ ಅಂದರೆ ವರ್ಣಾಂತರ ಹೊಂದಿಸಲ್ಪಟ್ಟದ್ದು

ಎಂಬರ್ಥದಲ್ಲಿ ಅಣ್ ಪ್ರತ್ಯಯ ಬರುತ್ತದೆ. ಕಷಾಯೇಣ ರಕ್ತಮ್ ವಸ್ತ್ರಮ್. ಕಷಾಯ+ಅ. ಆದಿವೃದ್ಧಿ. ಅಕಾರಲೋಪ. ಕಾಷಾಯಮ್. ಕಷಾಯವೆಂದರೆ ಒಂದು ಧಾತುವಿಶೇಷ. ರಂಜನದ್ರವ್ಯ. ಇದರಿಂದ ಮೊದಲು ಬೆಳ್ಳಗಾದದ್ದು ಈಗ ಕೆಂಪಾಗಿದೆ ಎಂದರ್ಥ.

ಯುಕ್ತಾರ್ಥದಲ್ಲಿ ಅಣ್ ಹೇಳುವ ಸೂತ್ರ.

**೧೦೩೭. ನಕ್ಷತ್ರೇಣ ಯುಕ್ತಃ ಕಾಲಃ ॥ ೪-೨-೩ ॥ ಅಣ್ ಸ್ಯಾತ್ । ವಾ ॥ (ತಿಷ್ಯಪುಷ್ಯಯೋರ್ನಕ್ಷತ್ರಾಣಿ ಯಲೋಪ ಇತಿ ವಾಚ್ಯಮ್ ॥) ಪುಷ್ಯೇಣ ಯುಕ್ತಂ ಪೌಷಮಹಃ ॥**

ತ್ರಿಪದ ಸೂತ್ರ. 'ಅಣ್' ಅಧಿಕಾರದಿಂದ ಲಬ್ಧವಾಗುತ್ತದೆ. **ಸೂತ್ರಾರ್ಥ**—ನಕ್ಷತ್ರವಾಚಕ ಶಬ್ದವೇ ಪ್ರಕೃತಿಯಾಗಿರುವ ತೃತೀಯಾಂತದ ಮೇಲೆ 'ಯುಕ್ತಃ'=ಕೂಡಿದ್ದು ಎಂಬರ್ಥದಲ್ಲಿ ಅಣ್ ಪ್ರತ್ಯಯ ಬರುತ್ತದೆ; ಕೂಡಿರುವುದು ಕಾಲವಾಚಕವಾಗಿರಬೇಕು. ಪುಷ್ಯೇಣ ಯುಕ್ತಮ್. ಪುಷ್ಯನಕ್ಷತ್ರದಿಂದ ಕೂಡಿರುವುದು; ಹಗಲು. ಕಾಲಾರ್ಥ ತೋರುವುದರಿಂದ ಅಣ್. ಪುಷ್ಯ+ಅ ಎಂದಿರುವಾಗ ವಾರ್ತಿಕಕಾರರು ಯಲೋಪ ಹೇಳುತ್ತಾರೆ. ನಕ್ಷತ್ರಸಂಬಂಧಿಯಾದ ಅಣ್ ಪರದಲ್ಲಿರುವಾಗ ತಿಷ್ಯ, ಪುಷ್ಯ ಶಬ್ದಗಳ ಯಕಾರಕ್ಕೆ ಲೋಪ ಬರುತ್ತದೆ. ಪ್ರಕೃತ ನಕ್ಷತ್ರದಮೇಲೆ ಅಣ್ ವಿಹಿತವಾದುದರಿಂದ ಯಲೋಪಬಂದರೆ ಪುಷ್+ಅ. ಆದಿವೃದ್ಧಿ. ಪೌಷಮ್. ಪುಷ್ಯನಕ್ಷತ್ರದಿಂದ ಕೂಡಿದ ಹಗಲು.

ಹಿಂದೆ ಹೇಳಿದ ಅಣಿಗೆ ಲುಪ್ ಹೇಳುವ ಸೂತ್ರ.

**೧೦೩೮. ಲುಬವಿಶೇಷೇ ॥ ೪-೨-೪ ॥**

**ಪೂರ್ವೇಣ ವಿಹಿತಸ್ಯ ಲುಪ್ ಸ್ಯಾತ್ ಷಷ್ಟಿದಂಡಾತ್ಮಕಸ್ಯ ಕಾಲಸ್ಯಾವಾಂತರವಿಶೇಷಶ್ಚೇನ್ನ ಗಮ್ಯತೇ ॥ ಅದ್ಯ ಪುಷ್ಯಃ ॥**

ಲುಪ್, ಅವಿಶೇಷೇ ॥ ದ್ವಿಪದ ಸೂತ್ರ. 'ನಕ್ಷತ್ರೇಣ ಯುಕ್ತಃ ಕಾಲಃ' ಹಿಂದಿನ ಸೂತ್ರ. **ಸೂತ್ರಾರ್ಥ**—ಪೂರ್ವ ಸೂತ್ರದಿಂದ ವಿಹಿತವಾದ ಅಣ್ ಪ್ರತ್ಯಯಕ್ಕೆ ಕಾಲವಿಶೇಷ ತೋರದಿರುವಾಗ ಲುಪ್ ಬರುತ್ತದೆ. ಅರವತ್ತು ಘಳಿಗೆ ಚಂದ್ರನು ಒಂದೊಂದು ನಕ್ಷತ್ರದಿಂದ ಕೂಡಿರುತ್ತಾನೆ. ಈ ಅರವತ್ತು ಘಳಿಗೆಯಲ್ಲಿ ಅವಾಂತರ ವಿಶೇಷ ಅಂದರೆ ಹಗಲು ಅಥವಾ ರಾತ್ರಿವಿಶೇಷ ತೋರದಿರುವಾಗ ಲೋಪವೆಂದರ್ಥ. ಇಂದು ಪುಷ್ಯನಕ್ಷತ್ರದಿಂದ ಕೂಡಿದ ಕಾಲ. ಎಲ್ಲಿಯವರೆಗೆ ಕೂಡಿದೆಯೆಂಬ ನಿಶ್ಚಯವಿಲ್ಲ. ಆಗ ಪುಷ್ಯದ ಮೇಲೆ ವಿಹಿತವಾದ ಅಣಿಗೆ ಲೋಪ. ಪುಷ್ಯಃ ಎಂದೇ ಇರುತ್ತದೆ.

ಲುಪ್ ಶಬ್ದ ಹೇಳಿ ಲೋಪ ಹೇಳಿರುವುದರಿಂದ ಅದನ್ನು ನಿಮಿತ್ತೀಕರಿಸಿ ಅಂಗಕಾರ್ಯ ಬರುವುದಿಲ್ಲ.

ದೃಷ್ಟಾರ್ಥದಲ್ಲಿ ಅಣ್ ಹೇಳುವ ಸೂತ್ರ.

**೧೦೪೯. ದೃಷ್ಟಂ ಸಾಮ ॥ ೪-೨-೭ ॥**

**ತೇನೇತ್ಯೇವ । ವಸಿಷ್ಠೇನ ದೃಷ್ಟಂ ವಾಸಿಷ್ಠಂ ಸಾಮ ॥**

ದ್ವಿಪದ ಸೂತ್ರ. 'ತೇನ', 'ಅಣ್' ಅನುವೃತ್ತಿ. **ಸೂತ್ರಾರ್ಥ**—ಪ್ರಾತಿಪದಿಕವೇ ಪ್ರಕೃತಿಯಾಗಿರುವ ತೃತೀಯಾಂತದ ಮೇಲೆ ದೃಷ್ಟಂ=ಪ್ರತ್ಯಕ್ಷವಿಷಯವಾದ ಸಾಮ ಎಂಬರ್ಥದಲ್ಲಿ ಅಣ್ ಬರುತ್ತದೆ. ವಸಿಷ್ಠೇನ ದೃಷ್ಟಮ್ । ವಸಿಷ್ಠ+ಅ. ಆದಿವೃದ್ಧಿ, ಅಲೋಪ. ವಾಸಿಷ್ಠಂ ಸಾಮ. ವಸಿಷ್ಠಮಹರ್ಷಿಯಿಂದ ಪ್ರತ್ಯಕ್ಷೀಕೃತವಾದ ಸಾಮ. ಮಂತ್ರವಿಶೇಷ.

ದೃಷ್ಟಾರ್ಥದಲ್ಲಿ ಡ್ಯತ್, ಡ್ಯ ಹೇಳುವ ಸೂತ್ರ.

**೧೦೫೦. ವಾಮದೇವಾಡ್ಡ್ಯಡ್ಡ್ಯೌ ॥ ೪-೨-೯ ॥**

**ವಾಮದೇವೇನ ದೃಷ್ಟಂ ಸಾಮ । ವಾಮದೇವ್ಯಮ್ ॥**

ವಾಮದೇವಾತ್, ಡ್ಯಡ್ಡ್ಯೌ ॥ ವಾಮದೇವ ಶಬ್ದವೇ ಪ್ರಕೃತಿಯಾಗಿರುವ ತೃತೀಯಾಂತದ ಮೇಲೆ 'ದೃಷ್ಟಂ ಸಾಮ' ಎಂಬರ್ಥದಲ್ಲಿ ಡ್ಯತ್, ಡ್ಯ ಪ್ರತ್ಯಯಗಳು ಬರುತ್ತವೆ. 'ಚುಟೂ' ಸೂತ್ರದಿಂದ ಡಕಾರ ಇತ್. ಎರಡು ಪ್ರತ್ಯಯಗಳಲ್ಲಿಯೂ ಯಕಾರ ಉಳಿದರೂ ಡ್ಯತ್ ತಕಾರ ಇತ್ತಾದುದರಿಂದ ಸ್ವರದಲ್ಲಿ ವಿಶೇಷವಿದೆ. ವಾಮದೇವೇನ ದೃಷ್ಟಮ್ । ವಾಮದೇವ+ಯ. 'ಯಸ್ಯೇತಿ ಚ' ಅಕಾರಲೋಪ. ವಾಮದೇವ್+ಯ. ವಾಮದೇವ್ಯಮ್. ವಾಮದೇವಋಷಿಗಳಿಂದ ಪ್ರತ್ಯಕ್ಷೀಕರಿಸಿದ ಸಾಮಮಂತ್ರ.

ಪರಿವೃತಾರ್ಥದಲ್ಲಿ ಅಣ್ ಹೇಳುವ ಸೂತ್ರ.

**೧೦೫೧. ಪರಿವೃತೋ ರಥಃ ॥ ೪-೨-೧೦ ॥**

**ಅಸ್ಮಿನ್ನರ್ಥೇಽಣ್ ಪ್ರತ್ಯಯೋ ಭವತಿ । ವಸ್ತ್ರೇಣ ಪರಿವೃತೋ ವಾಸ್ತ್ರೋ ರಥಃ ॥**

ದ್ವಿಪದ ಸೂತ್ರ. 'ತೇನ', 'ಅಣ್' ಅನುವೃತ್ತಿ. **ಸೂತ್ರಾರ್ಥ**—ಪ್ರಾತಿಪದಿಕ ಪ್ರಕೃತಿಯಾಗಿರುವ ತೃತೀಯಾಂತದ ಮೇಲೆ ಪರಿವೃತ ಅಂದರೆ ಮುಚ್ಚಲ್ಪಟ್ಟದ್ದು ಎಂಬರ್ಥದಲ್ಲಿ ಅಣ್ ಪ್ರತ್ಯಯ. ಹಾಗೆ ಮುಚ್ಚಿರುವುದು ರಥವಾಗಿರಬೇಕು. ವಸ್ತ್ರೇಣ ಪರಿವೃತಃ । ವಸ್ತ್ರ+ಅ. ಆದಿವೃದ್ಧಿ, ಅಲೋಪ. ವಾಸ್ತ್ರಃ ರಥಃ । ವಸ್ತ್ರದಿಂದ ಮುಚ್ಚಿದ ರಥ.

ಉದ್ಧೃತಾರ್ಥದಲ್ಲಿ ಅಣ್ ಹೇಳುವ ಸೂತ್ರ.

೧೦೪೨. ತತ್ರೋದ್ಧೃತಮಮತ್ರೇಭ್ಯಃ ॥ ೪-೨-೧೪ ॥

ಶರಾವೇ ಉದ್ಧೃತಃ ಶಾರಾವ ಓದನಃ ॥

ತತ್ರ, ಉದ್ಧೃತಮ್, ಅಮತ್ರೇಭ್ಯಃ ॥ ತ್ರಿಪದ ಸೂತ್ರ. ತತ್ರ ಎಂಬುದು ಸಪ್ತಮ್ಯಂತಕ್ಕೆ ಅನುಕರಣ. ಪ್ರಥಮಾನಿರ್ದಿಷ್ಟವಾದುದರಿಂದ ಸಪ್ತಮ್ಯಂತದಮೇಲೆ ಪ್ರತ್ಯಯ ಎಂದು ತಿಳಿಯುತ್ತದೆ. **ಸೂತ್ರಾರ್ಥ**—ಅಮತ್ರ ಅಂದರೆ ಪಾತ್ರವಾಚಕ ಶಬ್ದಗಳೇ ಪ್ರಕೃತಿಯಾಗಿರುವ ಸಪ್ತಮ್ಯಂತಗಳಮೇಲೆ ಉದ್ಧೃತ (ಬೇರೆ ಎತ್ತಿ ಇಟ್ಟದ್ದು) ಎಂಬರ್ಥದಲ್ಲಿ ಅಣ್ ಪ್ರತ್ಯಯ ಬರುತ್ತದೆ. ಶರಾವೇ ಉದ್ಧೃತಃ । ಶರಾವ+ಅ. ಆದಿವೃದ್ಧಿ, ಅಲ್ಲೋಪ. ಶಾರಾವಃ । ಮಣ್ಣಿನ ಪಾತ್ರೆಗೆ ಶರಾವ ಎಂದು ಹೆಸರು. ಅದರಲ್ಲಿ ಎತ್ತಿ ಇಟ್ಟ ಅನ್ನ. ಶಾರಾವ.

ಸಂಸ್ಕೃತಾರ್ಥದಲ್ಲಿ ಅಣ್ ಹೇಳುವ ಸೂತ್ರ.

೧೦೪೩. ಸಂಸ್ಕೃತಂ ಭಕ್ಷಾಃ ॥ ೪-೨-೧೬ ॥

**ಸಪ್ತಮ್ಯಂತಾದಣ್ ಸ್ಯಾತ್ ಸಂಸ್ಕೃತೇಽರ್ಥೇ ಯತ್ ಸಂಸ್ಕೃತಂ ಭಕ್ಷಾಶ್ಚೇತ್ತೇ ಸ್ಯುಃ । ಭ್ರಾಷ್ಟ್ರೇಷು ಸಂಸ್ಕೃತಾ ಭ್ರಾಷ್ಟ್ರಾ ಯವಾಃ ॥**

ದ್ವಿಪದ ಸೂತ್ರ. 'ತತ್ರ' ಅನುವೃತ್ತಿ. **ಸೂತ್ರಾರ್ಥ**—ಪ್ರಾತಿಪದಿಕವೇ ಪ್ರಕೃತಿಯಾಗಿರುವ ಸಪ್ತಮ್ಯಂತದ ಮೇಲೆ ಸಂಸ್ಕೃತಂ (ಪಾಕಾದಿಗಳಿಂದ ಗುಣವಿಶೇಷ ಹೊಂದಿರುವುದು) ಅರ್ಥದಲ್ಲಿ ಅಣ್ ಪ್ರತ್ಯಯ. ಸಂಸ್ಕೃತವಾದುದು ಭಕ್ಷವಾದರೇ ಈ ಪ್ರತ್ಯಯ. ಇಲ್ಲವಾದರೆ ಅಣ್ ಬರುವುದಿಲ್ಲ. ಭ್ರಾಷ್ಟ್ರೇಷು ಸಂಸ್ಕೃತಾಃ । ಭ್ರಾಷ್ಟ್ರ+ಅ. 'ಯಸ್ಯೇತಿ ಚ' ಆದಿವೃದ್ಧಿ ಇದ್ದೇ ಇದೆ. ಭ್ರಾಷ್ಟ್ರಾಃ ಯವಾಃ । (ಭಕ್ಷ ಅಂದರೆ ತಿನ್ನಲ್ಪಡುವ ವಸ್ತು.) ಹುರಿದ ಭತ್ತ, ಪುರಿ (ಮಂಡಕ್ಕಿ).

ದೇವತಾರ್ಥದಲ್ಲಿ ಅಣ್ ಹೇಳುವ ಸೂತ್ರ.

೧೦೪೪. ಸಾಽಸ್ಯ ದೇವತಾ ॥ ೪-೨-೨೪ ॥

**ಇಂದ್ರೋ ದೇವತಾಽಸ್ಯೇತಿ ಐಂದ್ರಂ ಹವಿಃ । ಪಾಶುಪತಮ್ । ಬಾರ್ಹಸ್ಪತ್ಯಮ್ ॥**

ಸಾ, ಅಸ್ಯ, ದೇವತಾ ॥ ತ್ರಿಪದ ಸೂತ್ರ. ಸಾ ಎಂಬ ಪ್ರಥಮಾಂತ ಮೊದಲು ನಿರ್ದಿಷ್ಟವಾದುದರಿಂದ ಪ್ರಥಮಾಂತದಮೇಲೆ ಪ್ರತ್ಯಯಗಳು ಬರುತ್ತವೆಯೆಂದು ತಿಳಿಯಬೇಕು. ದೇವತಾ ವಿಶೇಷ್ಯಸ್ತ್ರೀಲಿಂಗವಾದುದರಿಂದ ಸಾ ಸ್ತ್ರೀಲಿಂಗ ಹೇಳಿದೆ.

**ಸೂತ್ರಾರ್ಥ—** ಇದಕ್ಕೆ ದೇವತಾ ಎಂಬರ್ಥದಲ್ಲಿ ಪ್ರಥಮಾಂತಶಬ್ದದಮೇಲೆ ಅಣಾದಿ ಪ್ರತ್ಯಯ ಬರುತ್ತವೆ. ಇಂದ್ರಃ ದೇವತಾ ಅಸ್ಯ। ಇಂದ್ರ+ಅ. ಆದಿವೃದ್ಧಿ, ಅಲೋಪ. ಐಂದ್ರಂ ಹವಿಃ। ದೇವತೆಗಳಿಗೆ ಅರ್ಪಿಸುವ ತುಪ್ಪ ಮುಂತಾದ ಪದಾರ್ಥಗಳಿಗೆ ಹವಿಸ್ಸೆಂದು ಹೆಸರು. ಇಂದ್ರನೇ ದೇವತೆಯಾಗಿರುವ ಹವಿಸ್ಸು ಐಂದ್ರ. ಪಶುಪತಿಃ ದೇವತಾ ಅಸ್ಯ। ಪಶುಪತಿಯೇ ದೇವತೆಯಾಗಿರುವ ಹವಿಸ್ಸು. ಸಾಮಾನ್ಯ ಅಣ್ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ 'ಅಶ್ವಪತ್ಯಾದಿಭ್ಯಶ್ಚ' (ಸೂ. ೧೦೦೧) ಸೂತ್ರದಿಂದ ಅಣ್ ಪ್ರತ್ಯಯ. ಪಶುಪತಿ+ಅ. ಆದಿವೃದ್ಧಿ, ಅಲೋಪ. ಪಾಶುಪತಮ್. ಬೃಹಸ್ಪತಿಃ ದೇವತಾ ಅಸ್ಯ। ಬೃಹಸ್ಪತಿಯೇ ದೇವತೆಯಾಗಿರುವ ಹವಿಸ್ಸು. ಇಲ್ಲಿ ಅಣಿಗೆ ಅಪವಾದವಾಗಿ 'ದಿತ್ಯದಿತ್ಯಾದಿತ್ಯ—' (ಸೂ. ೧೦೦೨) ಸೂತ್ರದಿಂದ ಣ್ಯಪ್ರತ್ಯಯ. ಬೃಹಸ್ಪತಿ+ಯ. ಣಿತ್ತಾದುದರಿಂದ ಆದಿವೃದ್ಧಿ. 'ಯಸ್ಯೇತಿ ಚ' ಇಕಾರಲೋಪ. ಬಾರ್ಹಸ್ಪತ್ಯಮ್।

ದೇವತಾರ್ಥದಲ್ಲಿ ಘನ್ ಹೇಳುವ ಸೂತ್ರ.

**೧೦೪೫. ಶುಕ್ರಾದ್ ಘನ್ ॥ ೪-೨-೨೬ ॥ ಶುಕ್ರಿಯಮ್ ॥**

ದ್ವಿಪದ ಸೂತ್ರ. ಹಿಂದಿನ ಸೂತ್ರ ಅನುವೃತ್ತವಾಗುತ್ತದೆ. **ಸೂತ್ರಾರ್ಥ—** ಶುಕ್ರ ಶಬ್ದವೇ ಪ್ರಕೃತಿಯಾಗಿರುವ ಪ್ರಥಮಾಂತದಮೇಲೆ ಇದಕ್ಕೆ ದೇವತೆಯೆಂಬರ್ಥದಲ್ಲಿ ಘನ್ ಪ್ರತ್ಯಯ ಬರುತ್ತದೆ. ಶುಕ್ರಃ ದೇವತಾ ಅಸ್ಯ। ಈ ಹವಿಸ್ಸಿಗೆ ಶುಕ್ರನು ದೇವತೆ. ಶುಕ್ರ+ಘ. 'ಆಯನೇಯೀ—' ಸೂತ್ರದಿಂದ ಘಕಾರಕ್ಕೆ ಇಯಾದೇಶ. ಶುಕ್ರ+ಇಯ್+ಅ. 'ಯಸ್ಯೇತಿ ಚ' ಶುಕ್ರಿಯಮ್। ಶುಕ್ರನೇ ದೇವತೆಯಾಗಿರುವ ಹವಿಸ್ಸು.

ದೇವತಾರ್ಥದಲ್ಲಿ ಟ್ಯಣ್ ಹೇಳುವ ಸೂತ್ರ.

**೧೦೪೬. ಸೋಮಾಟ್ಟ್ಯಣ್ ॥ ೪-೨-೩೦ ॥ ಸೌಮ್ಯಮ್ ॥**

ಸೋಮಾತ್, ಟ್ಯಣ್ ॥ ದ್ವಿಪದ ಸೂತ್ರ. **ಸೂತ್ರಾರ್ಥ—** ಸೋಮ ಶಬ್ದವೇ ಪ್ರಕೃತಿಯಾಗಿರುವ ಪ್ರಥಮಾಂತದಮೇಲೆ ಅಸ್ಯ ದೇವತಾ ಎಂಬರ್ಥದಲ್ಲಿ ಟ್ಯಣ್ ಪ್ರತ್ಯಯ ಬರುತ್ತದೆ. 'ಚುಟೂ' ಸೂತ್ರದಿಂದ ಟಕಾರ ಇತ್. 'ಹಲಂತ್ಯಮ್' ಸೂತ್ರದಿಂದ ಣಕಾರ ಇತ್. ಯ ಉಳಿಯುತ್ತದೆ. ಸೋಮಃ ದೇವತಾ ಅಸ್ಯ। ಸೋಮನು ಈ ಹವಿಸ್ಸಿಗೆ ದೇವತೆ. ಸೋಮ+ಯ. ಣಿತ್ತಾದುದರಿಂದ ಆದಿವೃದ್ಧಿ. ಅಕಾರಲೋಪ. ಸೌಮ್ಯಮ್. ಸೋಮದೇವತಾಕವಾದ ಹವಿಸ್ಸು.

ದೇವತಾರ್ಥದಲ್ಲಿ ಯತ್ ಪ್ರತ್ಯಯ ಹೇಳುವ ಸೂತ್ರ.

**೧೦೪೭. ವಾಯ್ವೃತುಪಿತ್ರುಷಸೋ ಯತ್ ॥ ೪-೨-೩೧ ॥**

**ವಾಯವ್ಯಮ್। ಋತವ್ಯಮ್ ॥**

ದ್ವಿಪದ ಸೂತ್ರ. ವಾಯು, ಋತು, ಪಿತೃ, ಉಷಸ್ ಶಬ್ದಗಳೇ ಪ್ರಕೃತಿಯಾಗಿರುವ ಪ್ರಥಮಾಂತದಮೇಲೆ ಅಸ್ಯ ದೇವತಾ ಎಂಬರ್ಥದಲ್ಲಿ ಯತ್‌ಪ್ರತ್ಯಯ ಬರುತ್ತದೆ. ವಾಯುಃ ದೇವತಾ ಅಸ್ಯ । ವಾಯು+ಯ. 'ಓರ್ಗುಣಃ' ವಾಯೋ+ಯ. 'ವಾಂತೋ ಯಿ ಪ್ರತ್ಯಯೇ' ಸೂತ್ರದಿಂದ ಅವಾದೇಶ. ವಾಯವ್ಯಮ್. ವಾಯು ದೇವತಾಕಮಂತ್ರಾದಿ. ಋತುರ್ದೇವತಾ ಅಸ್ಯ । ಋತವ್ಯಮ್. ಋತುದೇವತಾಕ ಮಂತ್ರಾದಿ. ಪಿತರಃ ದೇವತಾಃ ಅಸ್ಯ ಎಂದು ಅರ್ಥವಿವಕ್ಷಾಮಾಡಿದಾಗ ಪಿತೃ+ಯ ಎಂದಿರುವಾಗ ಋಕಾರಕ್ಕೆ ರೀಙಾದೇಶ ಹೇಳುತ್ತಾನೆ.

ಋಕಾರಕ್ಕೆ ರೀಙಾದೇಶ ಹೇಳುವ ಸೂತ್ರ.

**೧೦೪೮. ರೀಙ್ ಋತಃ ॥ ೭-೪-೨೭ ॥**

**ಅಕೃದ್ಯಕಾರೇ ಅಸಾರ್ವಧಾತುಕೇ ಯಕಾರೇ ಚ್ವೌ ಚ ಪರೇ ಋದಂತಾಂಗಸ್ಯ ರೀಙಾದೇಶಃ । ಯಸ್ಯೇತಿ ಚ । ಪಿತ್ರ್ಯಮ್ । ಉಷಸ್ಯಮ್ ॥**

ದ್ವಿಪದ ಸೂತ್ರ. 'ಅಂಗಸ್ಯ' ಅಧಿಕಾರ. 'ಋತಃ' ಅದಕ್ಕೆ ವಿಶೇಷಣ ವಾದುದರಿಂದ ತದಂತಲಾಭ. 'ಅಕೃತ್ಸಾರ್ವಧಾತುಕಯೋರ್ದೀರ್ಘಃ' ಸೂತ್ರದಿಂದ 'ಅಕೃತ್ಸಾರ್ವಧಾತುಕಯೋಃ' ಅನುವೃತ್ತಿ. 'ಚ್ವೌ ಚ' ಸೂತ್ರ ಅನುವೃತ್ತವಾಗುತ್ತದೆ. **ಸೂತ್ರಾರ್ಥ**—ಕೃತ್‌ಪ್ರತ್ಯಯಭಿನ್ನವಾದ ಯಕಾರವೂ ಸಾರ್ವಧಾತುಕಭಿನ್ನ ಯಕಾರವೂ ಪರದಲ್ಲಿರುವಾಗ ಹ್ರಸ್ವಋಕಾರಾಂತವಾದ ಅಂಗಕ್ಕೆ ರೀಙ್ ಆದೇಶ ಬರುತ್ತದೆ. ಪ್ರಕೃತ ತದ್ಧಿತ ಯಕಾರ ಪರದಲ್ಲಿರುವುದರಿಂದ ಪಿತೃ ಶಬ್ದದ ಋಕಾರಕ್ಕೆ ರೀಙಾದೇಶ. 'ಅಲೋಂತ್ಯಸ್ಯ' ಪರಿಭಾಷೆಯಿಂದ ಅಂತ್ಯ ಋಕಾರಕ್ಕೆ ಬಂದರೆ, ಪಿತ್+ರೀ+ಯ. 'ಯಸ್ಯೇತಿ ಚ' ಈಕಾರಲೋಪ. ಪಿತ್‌ರ್+ಯ. ಪಿತ್ರ್ಯಮ್. ಪಿತೃದೇವತಾಕವಾದ ಹವಿಸ್ಸು ಮುಂತಾದವು. ಉಷಾಃ ದೇವತಾ ಅಸ್ಯ । ಉಷಸ್ +ಯ. ಉಷಸ್ಯಮ್. ಉಷಃಕಾಲಾಭಿಮಾನಿದೇವತೆಯಾಗಿರುವ ಹವಿಸ್ಸು ಮುಂತಾದವು.

ಪಿತೃವ್ಯಾದಿ ಶಬ್ದನಿಪಾತಮಾಡುವ ಸೂತ್ರ.

**೧೦೪೯. ಪಿತೃವ್ಯಮಾತುಲಮಾತಾಮಹಪಿತಾಮಹಾಃ ॥ ೪-೨-೩೬ ॥**

**ಏತೇ ನಿಪಾತ್ಯಂತೇ । ಪಿತುರ್ಭ್ರಾತಾ ಪಿತೃವ್ಯಃ । ಮಾತುರ್ಭ್ರಾತಾ ಮಾತುಲಃ । ಮಾತುಃ ಪಿತಾ ಮಾತಾಮಹಃ । ಪಿತುಃ ಪಿತಾ ಪಿತಾಮಹಃ ॥**

ಏಕಪದ ಸೂತ್ರ. ಇದು ನಿಪಾತಮಾಡಿದ ಸೂತ್ರ. ಪಾಣಿನಿಗಳೇ ಸೂತ್ರಾಂತರದಿಂದ ಬಾರದ ಕಾರ್ಯಗಳನ್ನು ಮಾಡಿ ಸಿದ್ಧರೂಪಗಳನ್ನು ನಿರ್ದೇಶಿಸಿರುತ್ತಾರೆ. ಪಿತುರ್ಭ್ರಾತಾ । ತಂದೆಯ ಸಹೋದರ ಎಂಬರ್ಥದಲ್ಲಿ ಪಿತೃಶಬ್ದಕ್ಕೆ ವ್ಯನ್‌ಪ್ರತ್ಯಯ

ಬಂದಿದೆ. ಪಿತೃವ್ಯಃ । ಮಾತುಃ ಭ್ರಾತಾ । ತಾಯಿಯ ಸಹೋದರ ಎಂಬರ್ಥದಲ್ಲಿ ಮಾತೃ ಶಬ್ದಕ್ಕೆ ಡುಲಚ್ ಪ್ರತ್ಯಯ. ಡಿತ್ತಾದುದರಿಂದ ಟಿ(ಋ)ಲೋಪ. ಮಾತುಲಃ। ಸೋದರಮಾವ. ಮಾತುಃ ಪಿತಾ (ತಾಯಿಯ ತಂದೆ) ಎಂಬರ್ಥದಲ್ಲಿಯೂ ಪಿತುಃ ಪಿತಾ (ತಂದೆಯ ತಂದೆ) ಎಂಬರ್ಥದಲ್ಲಿಯೂ ಮಾತೃ, ಪಿತೃ ಶಬ್ದಗಳ ಮೇಲೆ ಡಾಮಹಚ್ ಪ್ರತ್ಯಯ. ಡಿತ್ತಾದುದರಿಂದ ಟಿಲೋಪ. ಮಾತಾಮಹಃ=ತಾಯಿಯ ತಂದೆ. ಪಿತಾಮಹಃ=ತಂದೆಯ ತಂದೆ.

ಸಮೂಹಾರ್ಥದಲ್ಲಿ ಅಣ್ ಹೇಳುವ ಸೂತ್ರ.

**೧೦೫೦. ತಸ್ಯ ಸಮೂಹಃ ॥ ೪-೨-೩೭ ॥**

**ಕಾಕಾನಾಂ ಸಮೂಹಃ ಕಾಕಮ್ ॥**

ದ್ವಿಪದ ಸೂತ್ರ. 'ತಸ್ಯ' ಎಂದು ಷಷ್ಠ್ಯಂತವು ಮೊದಲು ಹೇಳಿದುದರಿಂದ ಷಷ್ಠ್ಯಂತದಮೇಲೆ ಪ್ರತ್ಯಯವೆಂದು ತಿಳಿಯಬೇಕು. **ಸೂತ್ರಾರ್ಥ**—ಪ್ರಾತಿಪದಿಕವೇ ಪ್ರಕೃತಿಯಾಗಿರುವ ಷಷ್ಠ್ಯಂತದಮೇಲೆ ಸಮೂಹ ಎಂಬರ್ಥದಲ್ಲಿ ಅಣ್ ಪ್ರತ್ಯಯ ಬರುತ್ತದೆ. ವಿಶೇಷಪ್ರತ್ಯಯ ಹೇಳದಿರುವಾಗ 'ಪ್ರಾಗ್ದೀವ್ಯತೋಽಣ್' ಸೂತ್ರ ದಿಂದ 'ಅಣ್' ಅನುವೃತ್ತವಾಗುತ್ತದೆಂದು ಎಲ್ಲಾ ಸೂತ್ರಗಳಲ್ಲಿಯೂ ತಿಳಿಯಬೇಕು. ಕಾಕಾನಾಂ ಸಮೂಹಃ । (ಕಾಕ+ಜಸ್+ಅಣ್) ಕಾಕ+ಅ. 'ಯಸ್ಯೇತಿ ಚ' ಕಾಕಮ್=ಕಾಗೆಗಳ ಸಮುದಾಯ. ಬಾಕಮ್=ಬಕಪಕ್ಷಿಗಳ ಗುಂಪು.

ಭಿಕ್ಷಾದಿಗಳಿಗೆ ಅಣ್ ಹೇಳುವ ಸೂತ್ರ.

**೧೦೫೧. ಭಿಕ್ಷಾದಿಭ್ಯೋಽಣ್ ॥ ೪-೨-೩೮ ॥**

**ಭಿಕ್ಷಾಣಾಂ ಸಮೂಹೋ ಭೈಕ್ಷಮ್ । ಗರ್ಭಿಣೀನಾಂ ಸಮೂಹೋ ಗಾರ್ಭಿಣಮ್ । ಇಹ (ಭಸ್ಯಾಢೇ ತದ್ಧಿತೇ)—ಇತಿ ಪುಂವದ್ಭಾವೇ ಕೃತೇ ।**

ದ್ವಿಪದ ಸೂತ್ರ. **ಸೂತ್ರಾರ್ಥ**—ಭಿಕ್ಷಾದಿಶಬ್ದಗಳೇ ಪ್ರಕೃತಿಯಾಗಿರುವ ಷಷ್ಠ್ಯಂತದ ಮೇಲೆ ಸಮೂಹಾರ್ಥದಲ್ಲಿ ಅಣ್ ಪ್ರತ್ಯಯ ಬರುತ್ತದೆ. ಹಿಂದಿನ ಸೂತ್ರ ದಿಂದ ಪ್ರಾಪ್ತವಾದರೂ ಮುಂದೆ 'ಅಚಿತ್ತ—' ಸೂತ್ರದಿಂದ ಹೇಳುವ ಠಕ್‌ಗೆ ಅಪವಾದ ವಾಗಿ ಪುನಃ ಅಣ್ ಹೇಳಿದೆ. ಭಿಕ್ಷಾಣಾಂ ಸಮೂಹಃ । ಭಿಕ್ಷಾ+ಅ. ಆದಿವೃದ್ಧಿ, ಅಲೋಪ. ಭೈಕ್ಷಮ್. ಗರ್ಭಿಣೀನಾಂ ಸಮೂಹಃ । ಗರ್ಭಿಣೀ+ಅ. ಆದಿವೃದ್ಧಿ, ಈಕಾರಲೋಪ. ಗಾರ್ಭಿಣಮ್=ಗರ್ಭಿಣೀಸ್ತ್ರೀಯರ ಸಮುದಾಯ. ಈಗ ವಾರ್ತಿಕ ದಿಂದ ಪುಂವದ್ಭಾವ ಹೇಳುತ್ತಾನೆ. 'ಭಸ್ಯಾಢೇ—' ಢಭಿನ್ನವಾದ ತದ್ಧಿತಪ್ರತ್ಯಯ ಪರದಲ್ಲಿರುವಾಗ ಭಸಂಜ್ಞೆಯುಳ್ಳ ಅಂಗಕ್ಕೆ ಪುಂವದ್ಭಾವ ಬರುತ್ತದೆ. ಪ್ರಕೃತ ಅಣ್

ಪರವಾದುದರಿಂದ ಪುಂವದ್ಭಾವ ಬಂದರೆ ಗರ್ಭಿನ್ + ಅ ಎಂದಾಗುತ್ತದೆ. ಆಗ 'ನಸ್ತದ್ಧಿತೇ' ಸೂತ್ರದಿಂದ ಟಿಲೋಪ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಪ್ರಕೃತಿಭಾವ ಹೇಳುತ್ತಾನೆ.

ಇನಿಗೆ ಪ್ರಕೃತಿಭಾವ ಹೇಳುವ ಸೂತ್ರ.

**೧೧೫೨. ಇನಣ್ಯನಪತ್ಯೇ ॥ ೬-೪-೧೬೪ ॥**

**ಅನಪತ್ಯಾರ್ಥೇಽಣಿ ಪರೇ ಇನ್ ಪ್ರಕೃತ್ಯಾ ಸ್ಯಾತ್ । ತೇನ ನಸ್ತದ್ಧಿತೇ ಇತಿ ಟಿಲೋಪೋ ನ । ಯುವತೀನಾಂ ಸಮೂಹೋ ಯೌವನಮ್ ॥**

ಇನ್, ಅಣಿ, ಅನಪತ್ಯೇ ॥ ತ್ರಿಪದ ಸೂತ್ರ. 'ಪ್ರಕೃತ್ಯೈಕಾಚ್' ಸೂತ್ರದಿಂದ 'ಪ್ರಕೃತ್ಯಾ' ಅನುವೃತ್ತಿ. **ಸೂತ್ರಾರ್ಥ**—ಅಪತ್ಯಾರ್ಥವನ್ನು ಕೊಡದಿರುವ ಅಣ್ ಪ್ರತ್ಯಯ ಪರದಲ್ಲಿರುವಾಗ ಇನ್ ಪ್ರಕೃತಿಭಾವವನ್ನು ಹೊಂದುತ್ತದೆ. ಪ್ರಕೃತ ಅಣ್ ಸಮೂಹಾರ್ಥದಲ್ಲಿ ಬಂದಿರುವುದರಿಂದ ಅದು ಪರವಾದಾಗ ಇನಿಗೆ ಪ್ರಕೃತಿಭಾವ. ಗರ್ಭಿನ್ + ಅ. ಟಿಲೋಪ 'ನಸ್ತದ್ಧಿತೇ' ಸೂತ್ರದಿಂದ ಬರುತ್ತಿರುವಾಗ ಈ ಪ್ರಕೃತಿಭಾವ ಆರಬ್ಧವಾದುದರಿಂದ ಅದಕ್ಕೆ ಅಪವಾದ. ಆದಿವೃದ್ಧಿ. 'ಅಟ್ ಕುಪ್ವಾಙ್—' ಸೂತ್ರದಿಂದ ಣತ್ವ. ಗಾರ್ಭಿಣಮ್. ಯುವತೀನಾಂ ಸಮುದಾಯಃ । ಯುವತಿ + ಅ. 'ಭಸ್ಯಾಢೇ ತದ್ಧಿತೇ' ಸೂತ್ರದಿಂದ ಪುಂವದ್ಭಾವ. ಯುವನ್ ಶಬ್ದಕ್ಕೆ 'ಯೂನಸ್ತಿಃ' ಸೂತ್ರದಿಂದ ಸ್ತ್ರೀತ್ವದಲ್ಲಿ ತಿಪ್ರತ್ಯಯ ಬಂದು ಯುವತಿ ಶಬ್ದವಾಗಿದೆ. ಪುಂವದ್ಭಾವ ಬಂದರೆ ಯುವನ್ + ಅ ಎಂದಿರುವಾಗ ಆದಿವೃದ್ಧಿ. ಯೌವನ್ + ಅ. 'ನಸ್ತದ್ಧಿತೇ' ಸೂತ್ರದಿಂದ ಟಿಲೋಪಪ್ರಾಪ್ತವಾದರೆ 'ಅನ್' (ಸೂ. ೧೦೨೭) ಸೂತ್ರದಿಂದ ಪ್ರಕೃತಿಭಾವ. ಯೌವನಮ್ = ಯುವತಿಯರ ಸಮುದಾಯ.

ಸಮೂಹಾರ್ಥದಲ್ಲಿ ತಲ್ ಪ್ರತ್ಯಯ ಹೇಳುವ ಸೂತ್ರ.

**೧೧೫೩. ಗ್ರಾಮಜನಬಂಧುಭ್ಯಸ್ತಲ್ ॥ ೪-೨-೪೩ ॥**

**ತಲಂತಂ ಸ್ತ್ರಿಯಾಮ್ । ಗ್ರಾಮತಾ । ಜನತಾ । ಬನ್ಧುತಾ ।**
**ವಾ॥ (ಗಜಸಹಾಯಾಭ್ಯಾಂ ಚೇತಿ ವಕ್ತವ್ಯಮ್) ಗಜತಾ । ಸಹಾಯತಾ ।**
**ವಾ॥ (ಅಹ್ನಃ ಖಃ ಕ್ರತೌ ॥) ಅಹೀನಃ ॥**

ದ್ವಿಪದ ಸೂತ್ರ. **ಸೂತ್ರಾರ್ಥ**—ಗ್ರಾಮ, ಜನ, ಬಂಧು ಶಬ್ದಗಳೇ ಪ್ರಕೃತಿಯಾಗಿರುವ ಷಷ್ಠ್ಯಂತದ ಮೇಲೆ ಸಮೂಹಾರ್ಥದಲ್ಲಿ ತಲ್ ಪ್ರತ್ಯಯ ಬರುತ್ತದೆ. ಅಣಿಗೆ ಅಪವಾದ. ತಲಂತವಾದ ಶಬ್ದವು ಸ್ತ್ರೀಲಿಂಗದಲ್ಲಿರುತ್ತದೆಂದು ಭಾಷ್ಯದಲ್ಲಿ ಹೇಳಿದೆ. ಗ್ರಾಮಾಣಾಂ ಸಮೂಹಃ ಗ್ರಾಮತಾ । ಗ್ರಾಮಸಮುದಾಯ. ಜನಾನಾಂ

ಸಮುದಾಯಃ ಜನತಾ । ಬನ್ಧೂನಾಂ ಸಮುದಾಯಃ ಬಂಧುತಾ । ವಾರ್ತಿಕಕಾರರು ಇನ್ನೂ ಕೆಲವು ಶಬ್ದಗಳಿಗೆ ತಲ್ ಹೇಳುತ್ತಾರೆ. ಗಜ, ಸಹಾಯ ಶಬ್ದಗಳ ಮೇಲೂ ಸಮೂಹಾರ್ಥದಲ್ಲಿ ತಲ್ ಬರುತ್ತದೆಂದು ಹೇಳಬೇಕು. ಗಜಾನಾಂ ಸಮೂಹಃ ಗಜತಾ । ಸಹಾಯಾನಾಂ ಸಮೂಹಃ ಸಹಾಯತಾ ।

'ಅಹ್ನಃ—' ಯಜ್ಞವೆಂಬ ಅರ್ಥ ಕೊಡುವ ಅಹನ್ ಶಬ್ದಕ್ಕೆ ಸಮೂಹಾರ್ಥದಲ್ಲಿ ಖಪ್ರತ್ಯಯು ಬರುತ್ತದೆ. ಅಹ್ನಾಂ ಸಮೂಹಃ । ಅಹನ್ + ಖ. 'ಆಯನೇಯೀ—' ಸೂತ್ರದಿಂದ ಖಕಾರಕ್ಕೆ ಈನಾದೇಶ. 'ನಸ್ತದ್ಧಿತೇ' ಟ(ಅನ್) ಲೋಪ. ಅಹ್ + ಈನ್ + ಅ. ಅಹೀನಃ=ಅನೇಕ ಹಗಲಿನಲ್ಲಿ ಸಾಧ್ಯವಾದ ಸುತ್ಯಾಕಯಾಗ.

ಸಮೂಹಾರ್ಥದಲ್ಲಿ ಠಕ್ ಹೇಳುವ ಸೂತ್ರ.

**೧೧೫೪. ಅಚಿತ್ತಹಸ್ತಿಧೇನೋಷ್ಠಕ್ ॥ ೪-೨-೪೭ ॥**

ದ್ವಿಪದ ಸೂತ್ರ. ಅಚಿತ್ತಗಳು ಬುದ್ಧಿ ಇಲ್ಲದ ಪದಾರ್ಥಗಳು. **ಸೂತ್ರಾರ್ಥ—** ಅಪ್ರಾಣಿವಾಚಕವಾದ ಶಬ್ದಗಳೂ ಹಸ್ತಿ ಶಬ್ದವೂ, ಧೇನು ಶಬ್ದವೂ ಪ್ರಕೃತಿಯಾಗಿರುವ ಷಷ್ಠ್ಯಂತದ ಮೇಲೆ ಸಮೂಹಾರ್ಥದಲ್ಲಿ ಠಕ್ ಪ್ರತ್ಯಯ ಬರುತ್ತದೆ. ಸಕ್ತು ಅಚಿತ್ತವಾಚಕ. (ಅರಳುಹಿಟ್ಟು) ಸಕ್ತೂನಾಂ ಸಮೂಹಃ । ಸಕ್ತು + ಠ. 'ಠಸ್ಯೇಕಃ' ಸೂತ್ರದಿಂದ ಠಕ್ಕೆ ಇಕಾದೇಶ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಕಾದೇಶ ವಿಧಿಸುತ್ತಾನೆ.

ಠಕಿಗೆ ಕಾದೇಶ ವಿಧಿಸುವ ಸೂತ್ರ.

**೧೧೫೫. ಇಸುಸುಕ್ತಾನ್ತಾತ್ಕಃ ॥ ೭-೩-೫೧ ॥**

**ಇಸ್ ಉಸ್ ಉಕ್ ತಾನ್ತಾತ್ಪರಸ್ಯ ಠಸ್ಯ ಕಃ । ಸಾಕ್ತುಕಮ್ । ಹಾಸ್ತಿಕಮ್ । ಧೈನುಕಮ್ ॥**

ದ್ವಿಪದ ಸೂತ್ರ. ಇಸ್, ಉಸ್, ಉಕ್ ತಾಃ ಅನ್ತಾಃ ಯಸ್ಯ ತತ್. ತಸ್ಮಾತ್. 'ಅಂಗಸ್ಯ' ಅಧಿಕಾರ. 'ಠಸ್ಯೇಕಃ' ಸೂತ್ರದಿಂದ 'ಠಸ್ಯ' ಅನುವೃತ್ತಿ. **ಸೂತ್ರಾರ್ಥ—** ಇಸ್, ಉಸ್, ಉಕ್, ತ್ ಅಂತವಾದ ಅಂಗದ ಪರದಲ್ಲಿರುವ ಠಕಾರಕ್ಕೆ ಕ ಆದೇಶ ಬರುತ್ತದೆ. ಇಕಾದೇಶಕ್ಕೆ ಅಪವಾದ. ಉಕ್ ಪ್ರತ್ಯಾಹಾರ (ಉ, ಋ, ಌ). ಸಕ್ತು ಉಕಾರಾಂತವಾದುದರಿಂದ ಅದರ ಪರದಲ್ಲಿ ಠಕಿನ ಠ ಬಂದುದರಿಂದ ಅದಕ್ಕೆ ಕಾದೇಶ ಬಂದರೆ ಸಕ್ತು + ಕ. ಕಿತ್ತಾದುದರಿಂದ 'ಕಿತಿ ಚ' ಸೂತ್ರದಿಂದ ಆದಿವೃದ್ಧಿ. ಸಾಕ್ತುಕಮ್. ಹಸ್ತಿನಾಂ ಸಮೂಹಃ । ಹಸ್ತಿನ್ + ಠಕ್.

'ತಸ್ಯೇಕಃ' ತ್‌ವರ್ಣಕ್ಕೆ ಇಕಾದೇಶ. 'ನಸ್ತದ್ಧಿತೇ' ಟಿಲೋಪ. 'ಕಿತಿ ಚ' ಆದಿವೃದ್ಧಿ. ಹಾಸ್ತಿಕಮ್. ಧೇನೂನಾಂ ಸಮೂಹಃ । ಧೇನು+ಠ. ಉಕಿನ ಪರ ದಲ್ಲಿರುವುದರಿಂದ ಕಾದೇಶ. ಆದಿವೃದ್ಧಿ. ಧೈನುಕಮ್=ಹಸುಸಮೂಹ.

ಅಧೀತೇ, ವೇದ ಅರ್ಥಗಳಲ್ಲಿ ಅಣ್ ವಿಧಿಸುವ ಸೂತ್ರ.

**೧೦೫೬. ತದಧೀತೇ ತದ್ವೇದ ॥ ೪-೨-೫೯ ॥**

ತತ್, ಅಧೀತೇ, ತತ್, ವೇದ ॥ ನಾಲ್ಕು ಪದಗಳುಳ್ಳ ಸೂತ್ರ. ತತ್ ದ್ವಿತೀಯಾಂತಾನುಕರಣ. ಇನ್ನುಮುಂದೆ ದ್ವಿತೀಯಾಂತ ಶಬ್ದದ ಮೇಲೆ ಪ್ರತ್ಯಯ. **ಸೂತ್ರಾರ್ಥ**—ಅದನ್ನು ಓದುತ್ತಾನೆ, ಅದನ್ನು ತಿಳಿಯುತ್ತಾನೆ ಎಂಬರ್ಥದಲ್ಲಿ ಪ್ರಾತಿಪದಿಕವೇ ಪ್ರಕೃತಿಯಾಗಿರುವ ದ್ವಿತೀಯಾಂತದ ಮೇಲೆ ಅಣ್ ಆದಿ ಪ್ರತ್ಯಯಗಳು ಬರುತ್ತವೆ. ವ್ಯಾಕರಣಂ ಅಧೀತೇ ಯಾ ವೇದ । ವ್ಯಾಕರಣವನ್ನು ಓದುತ್ತಾನೆ ಅಥವಾ ತಿಳಿಯುತ್ತಾನೆ. ವ್ಯಾಕರಣ+ಅಣ್. ಇಲ್ಲಿ ಯಕಾರದ ಹಿಂದೆ ವೃದ್ಧಿಗೆ ಅಪವಾದವಾಗಿ ಐಜಾಗಮ ಹೇಳುತ್ತಾನೆ.

ವೃದ್ಧ್ಯಪವಾದವಾಗಿ ಐಚಾಗಮ ಹೇಳುವ ಸೂತ್ರ.

**೧೦೫೭. ನ ಯ್ವಾಭ್ಯಾಂ ಪದಾನ್ತಾಭ್ಯಾಂ ಪೂರ್ವೌ ತು ತಾಭ್ಯಾಮೈಚ್ ॥ ೭-೩-೩ ॥**

**ಪದಾನ್ತಾಭ್ಯಾಂ ಯಕಾರವಕಾರಾಭ್ಯಾಂ ಪರಸ್ಯ ನ ವೃದ್ಧಿಃ ಕಿಂ ತು ತಾಭ್ಯಾಂ ಪೂರ್ವೌ ಕ್ರಮಾದೈಜಾವಾಗಮೌ ಸ್ತಃ । ವ್ಯಾಕರಣಮಧೀತೇ ವೇದ ವಾ ವೈಯಾಕರಣಃ ॥**

ಏಳು ಪದಗಳುಳ್ಳ ಸೂತ್ರ. ಯ್ ಚ ವಶ್ಚ ಯ್ವೌ. ತಾಭ್ಯಾಮ್. ಪಂಚಮಿಯಾದುದರಿಂದ ಪರಕ್ಕೆ ಕಾರ್ಯ. 'ಮೃಜೇರ್ವೃದ್ಧಿಃ' ಸೂತ್ರದಿಂದ 'ವೃದ್ಧಿಃ' ಅನುವೃತ್ತಿ. ತು ಶಬ್ದ ವಿಶೇಷಾರ್ಥ ತಿಳಿಸುತ್ತದೆ. **ಸೂತ್ರಾರ್ಥ**—ಪದದ ಕೊನೆಯಲ್ಲಿರುವ ಯಕಾರ, ವಕಾರಗಳ ಪರಕ್ಕೆ ವೃದ್ಧಿ ಬರುವುದಿಲ್ಲ. (ತು) ಆದರೆ ಅವುಗಳ ಪೂರ್ವಕ್ಕೆ ಕ್ರಮವಾಗಿ ಐಚ್ (ಐ, ಔ) ಆಗಮ ಬರುತ್ತದೆ. ಯಕಾರದ ಹಿಂದೆ ಐಕಾರ, ವಕಾರದ ಹಿಂದೆ ಔಕಾರ. ವ್ಯಾಕರಣ ಎಂಬಲ್ಲಿ ವಿ+ಆಕರಣ ಎಂದಿರುವಾಗ ಯಣ್ ಬಂದಿದೆ. ವ್‌ಯ್+ಆಕರಣ. ವಿ ಒಂದು ಪದವಾದುದರಿಂದ ಅಂತ್ಯದ ಇಕಾರಸ್ಥಾನಿಕ ಯಕಾರ ಪದಾಂತವಾಗಿದೆ. ಇದರ ಪರಕ್ಕೆ ಅಣ್ ಪರವಾದುದರಿಂದ ವೃದ್ಧಿ ಬರಬೇಕು. ಪ್ರಕೃತ ಆಕಾರವಿರುವುದರಿಂದ ವೃದ್ಧಿಯಿಂದ ಪ್ರಯೋಜನವಿಲ್ಲವಾದರೂ ಇತರ ಸ್ಥಳದಲ್ಲಿ ವೃದ್ಧಿನಿಷೇಧಮಾಡಿದುದಕ್ಕೆ ಫಲವಿದೆ. ವ್‌ಯ್+ಆಕರಣ+ಅ. ಯಕಾರದ ಹಿಂದೆ ಐಕಾರಾಗಮ. ವೈಯ್+ಆಕರಣ+ಅ.

'ಯಸ್ಯೇತಿ ಚ' ಅಲೋಪ. ವೈಯಾಕರಣಃ=ವ್ಯಾಕರಣ ಓದುವವ ಅಥವಾ ತಿಳಿದವನು. ಇಲ್ಲಿ ಯಕಾರಕ್ಕೆ ಯಕಾರ ಒತ್ತುಕೊಡುವ ರೂಢಿ ತಪ್ಪು.

ಓದುವ ಅರ್ಥದಲ್ಲಿ ವುನ್ ವಿಧಿಸುವ ಸೂತ್ರ.

**೧೧೫೮. ಕ್ರಮಾದಿಭ್ಯೋ ವುನ್ ॥ ೪-೨-೬೧ ॥**

**ಕ್ರಮುಕಃ। ಪದಕಃ। ಶಿಕ್ಷಕಃ। ಮೀಮಾಂಸಕಃ ॥**

ಇತಿ ರಕ್ತಾದ್ಯರ್ಥಾಃ ॥ ೩ ॥

ದ್ವಿಪದ ಸೂತ್ರ. **ಸೂತ್ರಾರ್ಥ**—ಕ್ರಮ ಮುಂತಾದ ಪ್ರಾತಿಪದಿಕಗಳೇ ಪ್ರಕೃತಿಯಾಗಿರುವ ದ್ವಿತೀಯಾಂತದಮೇಲೆ ಅಧೀತೇ, ವೇದ ಅರ್ಥಗಳಲ್ಲಿ ವುನ್ ಬರುತ್ತದೆ. ನಕಾರ ಇತ್. 'ಯುವೋರನಾಕೌ' ಸೂತ್ರದಿಂದ ವುಕಾರಕ್ಕೆ ಅಕಾದೇಶ. ಕ್ರಮಂ ಅಧೀತೇ, ವೇದ। (ಕ್ರಮ+ಅಮ್+ವುನ್) ಕ್ರಮ+ವು. ಕ್ರಮ+ಅಕ. 'ಯಸ್ಯೇತಿ ಚ'. ಕ್ರಮುಕಃ। ಕ್ರಮ (ವೇದಪಾಠದ ರೀತಿ) ಓದುವವ ಅಥವಾ ತಿಳಿಯುವವನು. ಪದಂ ಅಧೀತೇ ಪದಕಃ। ಶಿಕ್ಷಾಂ ಅಧೀತೇ। ಶಿಕ್ಷಾ+ವು. ಶಿಕ್ಷಾ+ಅಕ. 'ಯಸ್ಯೇತಿ ಚ' ಆಕಾರಲೋಪ. ಶಿಕ್ಷಕಃ=ಶಿಕ್ಷಾಗ್ರಂಥವನ್ನು ಓದುವವನು. ಮೀಮಾಂಸಾಂ ಅಧೀತೇ। ಮೀಮಾಂಸಾ+ಅಕ. ಮೀಮಾಂಸಕಃ= ಮೀಮಾಂಸಾ ಶಾಸ್ತ್ರವನ್ನು ಓದುವವ ಅಥವಾ ತಿಳಿದವನು.

ರಂಜಿತವಾದದ್ದು ಮುಂತಾದ ಅರ್ಥದಲ್ಲಿ ವಿಹಿತ ಪ್ರತ್ಯಯಗಳು ಮುಗಿದಿವೆ.

## ೨೬. ಅಥ ಚಾತುರರ್ಥಿಕಾಃ

ಅದರಲ್ಲಿದೆ ಅರ್ಥದಲ್ಲಿ ಅಣ್ ಹೇಳುವ ಸೂತ್ರ.

**೧೧೫೯. ತದಸ್ಮಿನ್ನಸ್ತೀತಿ ದೇಶೇ ತನ್ನಾಮ್ನಿ ॥ ೪-೨-೬೭ ॥**

**ಉದುಮ್ಬರಾಃ ಸಂತ್ಯಸ್ಮಿನ್ದೇಶೇ ಔದುಂಬರೋ ದೇಶಃ ॥**

ಈ ಪ್ರಕರಣದಲ್ಲಿ ನಾಲ್ಕು ಅರ್ಥಗಳನ್ನು ಹೇಳುವುದರಿಂದ ಚಾತುರರ್ಥಿಕ ಪ್ರಕರಣವೆಂದು ಹೆಸರು ಬಂದಿದೆ. ತತ್, ಅಸ್ಮಿನ್, ಅಸ್ತಿ, ಇತಿ, ದೇಶೇ, ತತ್, ನಾಮ್ನಿ ॥ ಏಳು ಪದಗಳುಳ್ಳ ಸೂತ್ರ. ತತ್ ಪ್ರಥಮಾಂತ ಪ್ರಥಮೋಚ್ಚರಿತವಾದುದರಿಂದ ಪ್ರಥಮಾಂತದ ಮೇಲೆ ಪ್ರತ್ಯಯ. **ಸೂತ್ರಾರ್ಥ**—ಅದು ಇದರಲ್ಲಿ ಇದೆ ಎಂದರ್ಥತೋರುವಾಗ ಪ್ರಾತಿಪದಿಕ ಪ್ರಕೃತಿಕಪ್ರಥಮಾಂತದಮೇಲೆ ಅಣ್ ಪ್ರತ್ಯಯ

ಬರುತ್ತದೆ; ಪ್ರತ್ಯಯಾಂತದಿಂದ ಆ ಹೆಸರುಳ್ಳ ದೇಶವು ತೋರುತ್ತಿರಬೇಕು. ಉದುಂಬರಗಳು ಈ ದೇಶದಲ್ಲಿ ಇವೆ. ಉದುಂಬರಾಃ ಸಂತಿ ಅಸ್ಮಿನ್ ದೇಶೇ | ಉದುಂಬರ+ಅ. ಆದಿವೃದ್ಧಿ, ಅಲೋಪ. ಔದುಂಬರಃ=ಉದುಂಬರವುಳ್ಳ ದೇಶ. ಇದು ಮೊದಲನೆಯ ಅರ್ಥ.

ನಿರ್ವೃತ್ತಾರ್ಥದಲ್ಲಿ ಅಣ್ ಹೇಳುವ ಸೂತ್ರ.

**೧೦೬೦. ತೇನ ನಿರ್ವೃತ್ತಮ್ || ೪-೨-೬೮ ||**

**ಕುಶಾಂಬೇನ ನಿರ್ವೃತ್ತಾ ನಗರೀ ಕೌಶಾಂಬೀ ||**

ದ್ವಿಪದ ಸೂತ್ರ. ತೇನ ಪ್ರಥಮೋಚ್ಚರಿತವಾದುದರಿಂದ ತೃತೀಯಾಂತದ ಮೇಲೆ ಪ್ರತ್ಯಯ. **ಸೂತ್ರಾರ್ಥ**—ನಿರ್ವೃತ್ತವ್ (ಮಾಡಲ್ಪಟ್ಟದ್ದು) ಎಂಬರ್ಥ ತೋರುವಾಗ ಪ್ರಾತಿಪದಿಕಪ್ರಕೃತಿಕ ತೃತೀಯಾಂತದಮೇಲೆ ಅಣ್ ಪ್ರತ್ಯಯ. ಕುಶಾಂಬೇನ ನಿರ್ವೃತ್ತಾ | ಕುಶಾಂಬನಿಂದ ಮಾಡಲ್ಪಟ್ಟ ಪಟ್ಟಣ. ಕುಶಾಂಬ+ಅ. ಆದಿವೃದ್ಧಿ, ಅಲೋಪ. ಕೌಶಾಂಬ. ನಗರೀ ಸ್ತ್ರೀಲಿಂಗವಾದುದರಿಂದ ಸ್ತ್ರೀತ್ವದ್ಯೋತಕ ವಾಗಿ 'ಟಿಡ್ಢಾಣಞ್—' ಸೂತ್ರದಿಂದ ಙೀಪ್ ಬಂದಿದೆ. ಕೌಶಾಂಬ+ಈ. 'ಯಸ್ಯೇತಿ ಚ' ಕೌಶಾಂಬೀ. ಇದು ಎರಡನೇ ಅರ್ಥ.

ನಿವಾಸಾರ್ಥದಲ್ಲಿ ಅಣ್ ಹೇಳುವ ಸೂತ್ರ.

**೧೦೬೧. ತಸ್ಯ ನಿವಾಸಃ || ೪-೨-೬೯ ||**

**ಶಿಬೀನಾಂ ನಿವಾಸೋ ದೇಶಃ ಶೈಬಃ ||**

ದ್ವಿಪದ ಸೂತ್ರ. **ಸೂತ್ರಾರ್ಥ**—ನಿವಾಸ (ಆವಾಸಸ್ಥಾನ) ಎಂಬರ್ಥದಲ್ಲಿ ಪ್ರಾತಿಪದಿಕಪ್ರಕೃತಿಕ ಷಷ್ಠ್ಯಂತದಮೇಲೆ ಅಣ್‌ಪ್ರತ್ಯಯ. ಶಿಬೀನಾಂ ನಿವಾಸಃ | ಶಿಬಿ+ಅ. ಆದಿವೃದ್ಧಿ. ಇಕಾರಲೋಪ. ಶೈಬಃ=ಶಿಬಿಗಳ ಆವಾಸದೇಶ. ಇಲ್ಲಿ 'ತನ್ನಾಮ್ನಿ ದೇಶೇ' ಅನುವೃತ್ತಿ ಇರುವುದರಿಂದ ದೇಶಾರ್ಥ ತೋರಲೇಬೇಕು. ಇದು ಮೂರನೇ ಅರ್ಥ.

ಅದೂರಭವಾರ್ಥದಲ್ಲಿ ಅಣ್ ಹೇಳುವ ಸೂತ್ರ.

**೧೦೬೨. ಅದೂರಭವಶ್ಚ || ೪-೨-೭೦ ||**

**ವಿದಿಶಾಯಾ ಅದೂರಭವಂ ನಗರಂ ವೈದಿಶಮ್ ||**

ಅದೂರಭವಃ, ಚ || ದ್ವಿಪದ ಸೂತ್ರ. 'ತಸ್ಯ', 'ತನ್ನಾಮ್ನಿ', 'ದೇಶೇ' ಅನುವೃತ್ತಿ. **ಸೂತ್ರಾರ್ಥ**—ಅದೂರಭವ (ಹತ್ತಿರದಲ್ಲಿರುವುದು) ಎಂಬರ್ಥದಲ್ಲಿ

ಷಷ್ಠ್ಯಂತದಮೇಲೆ ಅಣ್ ಪ್ರತ್ಯಯು ಬರುತ್ತದೆ. ಪ್ರತ್ಯಯಾಂತದಿಂದ ಆ ಹೆಸರಿನ ದೇಶವು ತಿಳಿಯುತ್ತಿರಬೇಕು. ವಿದಿಶಾಯಾ ಅದೂರಭವನಮ್ । ವಿದಿಶಾ ಪಟ್ಟಣದ ಸಮೀಪದಲ್ಲಿರುವುದು. ವಿದಿಶಾ+ಅ. ಆದಿವೃದ್ಧಿ, ಅಲೋಪ. ವೈದಿಶಮ್. ಇದೊಂದು ಪಟ್ಟಣ. ಇದು ನಾಲ್ಕನೇ ಅರ್ಥ. ಹೀಗೆ ನಾಲ್ಕು ಅರ್ಥಗಳಿಗೆ ಚಾತುರರ್ಥಿಕವೆಂದು ಹೆಸರು. ಚತುರ್ಣಾಮರ್ಥಾನಾಂ ಸಮಾಹಾರಃ ಚತುರರ್ಥೀ । ಚತುರರ್ಥ್ಯಾಂ ಭವಃ ಚಾತುರರ್ಥಿಕಃ । ಈ ಚಾತುರರ್ಥಿಕಕ್ಕೆ ಅರ್ಥವಿಶೇಷದಲ್ಲಿ ಲೋಪ ಹೇಳುತ್ತಾನೆ.

ಜನಪದಾರ್ಥದಲ್ಲಿ ಲುಪ್ ಹೇಳುವ ಸೂತ್ರ.

**೧೦೩೩. ಜನಪದೇ ಲುಪ್ ॥ ೪-೨-೮೧ ॥**

**ಜನಪದೇ ವಾಚ್ಯೇ ಚಾತುರರ್ಥಿಕಸ್ಯ ಲುಪ್ ॥**

ದ್ವಿಪದ ಸೂತ್ರ. **ಸೂತ್ರಾರ್ಥ**—ಜನಪದರೂಪಾರ್ಥವು ತೋರುವಾಗ ಹಿಂದೆ ಹೇಳಿದ ಚಾತುರರ್ಥಿಕಪ್ರತ್ಯಯಕ್ಕೆ ಲುಪ್ ಬರುತ್ತದೆ. ದೊಡ್ಡ ದೇಶಕ್ಕೆ ಜನಪದವೆಂದು ಹೆಸರು. ಕಾರ್ಯವಿಶೇಷಕ್ಕೋಸ್ಕರ ಲುಪ್ ಶಬ್ದದಿಂದ ಲೋಪ ಹೇಳಿರುತ್ತಾನೆ.

ಲುಪಿನಲ್ಲಿ ಲಿಂಗವಚನನಿಯಾಮಕ ಸೂತ್ರ.

**೧೦೩೪. ಲುಪಿ ಯುಕ್ತವದ್ವ್ಯಕ್ತಿವಚನೇ ॥ ೧-೨-೫೧ ॥**

**ಲುಪಿ ಸತಿ ಪ್ರಕೃತಿವಲ್ಲಿಂಗವಚನೇ ಸ್ತಃ । ಪಂಚಾಲಾನಾಂ ನಿವಾಸೋ ಜನಪದಃ ಪಂಚಾಲಾಃ । ಕುರವಃ । ಅಂಗಾಃ । ವಂಗಾಃ । ಕಲಿಂಗಾಃ ॥**

ಲುಪಿ, ಯುಕ್ತವತ್, ವ್ಯಕ್ತಿವಚನೇ ॥ ತ್ರಿಪದ ಸೂತ್ರ. ಯುಕ್ತವೆಂದರೆ ಪ್ರಕೃತಿ. ವ್ಯಕ್ತಿಯೆಂದರೆ ಲಿಂಗ. ವಚನ=ಸಂಖ್ಯಾ. ಇದು ಪ್ರಾಚೀನರ ಸಂಜ್ಞೆ. **ಸೂತ್ರಾರ್ಥ**—ಲುಪ್ ಆದಾಗ ಲಿಂಗವಚನಗಳು ಪ್ರಕೃತಿಯಂತೇ ಆಗುತ್ತವೆ. ಲುಪ್ ಬರಬೇಕಾದರೆ ಮೊದಲು ಪ್ರಕೃತಿಗೆ ಯಾವ ಲಿಂಗವಚನಗಳಿವೆಯೋ ಅವೇ ಪ್ರತ್ಯಯ ಬಂದು ಲುಪ್ ಆದಾಗ ಇರುತ್ತವೆ. ಪ್ರತ್ಯಯಾರ್ಥದಿಂದ ತೋರುವ ವಿಶೇಷ್ಯವನ್ನನುಸರಿಸಿ ಬರುವುದಿಲ್ಲ. ಪಂಚಾಲಾನಾಂ ನಿವಾಸಃ ಜನಪದಃ । ಪಂಚಾಲರ ಆವಾಸಸ್ಥಾನವಾದ ಜನಪದ. 'ತಸ್ಯ ನಿವಾಸಃ' ಸೂತ್ರದಿಂದ ಅಣ್ ಬಂದರೆ ಜನಪದಾರ್ಥ ತೋರುವುದರಿಂದ ಅದಕ್ಕೆ ಲುಪ್. ಲುಪ್ ಬಂದಮೇಲೆ ಪ್ರಕೃತಿಯ ಲಿಂಗವಚನಗಳೇ ಬರುತ್ತವೆಯೆಂದುದರಿಂದ ಬಹುವಚನ ಪುಲ್ಲಿಂಗ ಬಂದಿವೆ. ಪಂಚಾಲಾಃ=ಪಂಚಾಲರ ಸಂಸ್ಥಾನ. ದೇಶ ಅತಿ ದೊಡ್ಡದು. ಅದರಿಂದ ಜನಪದ ಚಿಕ್ಕದಾಗಿದೆ. ಹಿಂದೂ ದೇಶ; ಮೈಸೂರು ಜನಪದ. ಜನಪದಕ್ಕಿಂತಲೂ ಚಿಕ್ಕದು

ನಗರಾದಿ. ಹೀಗೆಯೇ ಕುರೂಣಾಂ ನಿವಾಸಃ ಕುರವಃ । ಅಂಗಾನಾಂ ನಿವಾಸಃ ಅಂಗಾಃ । ವಂಗಾನಾಂ ನಿವಾಸಃ ವಂಗಾಃ । ಕಲಿಂಗಾನಾಂ ನಿವಾಸಃ ಕಲಿಂಗಾಃ । ಲುಪ್ ಬಂದುದರಿಂದ ಪ್ರಕೃತಿಯ ಲಿಂಗವಚನಗಳು ಬಂದಿವೆ.

ವರಣಾದಿಗಳ ಪ್ರತ್ಯಯಕ್ಕೆ ಲುಪ್ ಹೇಳುವ ಸೂತ್ರ.

೧೧೬೫. ವರಣಾದಿಭ್ಯಶ್ಚ ॥ ೪-೨-೮೨ ॥

**ಅಜನಪದಾರ್ಥ ಆರಂಭಃ । ವರಣಾನಾಮದೂರಭವಂ ನಗರಂ ವರಣಾಃ ॥**

ವರಣಾದಿಭ್ಯಃ, ಚ ॥ ದ್ವಿಪದ ಸೂತ್ರ. ಹಿಂದಿನ ಸೂತ್ರ ಅನುವೃತ್ತವಾಗುತ್ತದೆ. **ಸೂತ್ರಾರ್ಥ**—ವರಣಾದಿಗಳ ಪರದಲ್ಲಿರುವ ಚಾತುರರ್ಥಿಕಪ್ರತ್ಯಯಕ್ಕೆ ಲುಪ್ ಬರುತ್ತದೆ. ಜನಪದಾರ್ಥ ತೋರದಿದ್ದರೂ ಲೋಪ ಹೇಳಲು ಈ ಸೂತ್ರ ಆರಬ್ಧವಾಗಿದೆ. ವರಣಾನಾಂ ಅದೂರಭವಮ್ । ವರಣದೇಶಕ್ಕೆ ಸಮೀಪದಲ್ಲಿರುವುದು. ಪಟ್ಟಣ. ವರಣ ಶಬ್ದದಮೇಲೆ ಬಂದ ಅಣ್ ಲುಪ್ ಆಗಿ ಪ್ರಕೃತಿಯಂತೆ ಲಿಂಗವಚನ ಹೊಂದಿದೆ. ಜನಪದದ ಒಂದು ಭಾಗ ನಗರವಾದುದರಿಂದ ಹಿಂದಿನ ಸೂತ್ರದಿಂದ ಸಿದ್ಧವಾಗುವುದಿಲ್ಲ.

ಚತುರರ್ಥದಲ್ಲಿ ಡ್ಮತುಪ್ ಹೇಳುವ ಸೂತ್ರ.

೧೧೬೬. ಕುಮುದನಡವೇತಸೇಭ್ಯೋ ಡ್ಮತುಪ್ ॥ ೪-೨-೮೭ ॥

ದ್ವಿಪದ ಸೂತ್ರ. **ಸೂತ್ರಾರ್ಥ**—ಕುಮುದ, ನಡ, ವೇತಸ ಈ ಶಬ್ದಗಳಿಗೆ ಹಿಂದೆ ಹೇಳಿದ ನಾಲ್ಕು ಅರ್ಥಗಳಲ್ಲಿ ಡ್ಮತುಪ್ ಪ್ರತ್ಯಯ ಬರುತ್ತದೆ. (೧) ಅದು ಅದರಲ್ಲಿದೆ, (೨) ಅವನಿಂದ ಮಾಡಲ್ಪಟ್ಟದ್ದು, (೩) ಅವನ ಆವಾಸದೇಶ, (೪) ಅದರ ಸಮೀಪದಲ್ಲಿರುವುದು. ಇವು ಚತುರರ್ಥೀ. 'ಚುಟೂ' ಸೂತ್ರದಿಂದ ಡ್ಮತುಪಿನಲ್ಲಿ ಡಕಾರ ಇತ್. ಉಕಾರ ಉಚ್ಚಾರಣಾರ್ಥ. 'ಹಲಂತ್ಯಮ್' ಪಕಾರ ಇತ್. ಕುಮುದಾಃ ಸಂತಿ ಅಸ್ಮಿನ್ ದೇಶೇ । ಈ ದೇಶದಲ್ಲಿ ನೈದಿಲೆಗಳು (ತುಂಬಾ) ಇವೆ. ಎಂಬ ಮೊದಲನೇ ಅರ್ಥವಿವಕ್ಷಾಮಾಡಿದಾಗ ಡ್ಮತುಪ್. ಕುಮುದ+ಮತ್. ಡಿತ್ತಾದುದರಿಂದ ಟಿಲೋಪ. ಕುಮುದ್+ಮತ್ ಎಂದಿರುವಾಗ ಮಕಾರಕ್ಕೆ ವತ್ವ ಹೇಳುತ್ತಾನೆ.

ಮತುಪಿನ ಮಕಾರಕ್ಕೆ ವತ್ವ ಹೇಳುವ ಸೂತ್ರ.

೧೧೬೭. ಝಯಃ ॥ ೮-೨-೧೦ ॥

**ಝಯಂತಾನ್ಮತೋರ್ಮಸ್ಯ ವಃ । ಕುಮುದ್ವಾನ್ । ನಡ್ವಾನ್ ॥**

ಏಕಪದ ಸೂತ್ರ. **ಸೂತ್ರಾರ್ಥ**—ಝಯನ್ತವಾದ ಪದದ ಪರದಲ್ಲಿರುವ ಮತುಪಿನ ಮಕಾರಕ್ಕೆ ವಕಾರಾದೇಶ. 'ಮತೋರ್ವಃ' ಅನುವೃತ್ತವಾಗಿದೆ. ಕುಮುದ್ ಝಯಂತಪದ. ಇದರ ಪರದಲ್ಲಿರುವ ಮತುಪಿನ ಮಕಾರಕ್ಕೆ ವಕಾರ ಬಂದರೆ ಕುಮುದ್ವತ್ ಎಂದಾಗುತ್ತದೆ. ಪ್ರಥಮಾವಿಭಕ್ತಿಯಲ್ಲಿ ಸು ಪರವಾದಾಗ ಉಗಿತ್ತಾದುದರಿಂದ ನುಮ್. 'ಅತ್ವಸಂತಸ್ಯ—' ಸೂತ್ರದಿಂದ ಉಪಧಾದೀರ್ಘ. ಸುಲೋಪ. ಸಂಯೋಗಾಂತಲೋಪ. ಕುಮುದ್ವಾನ್. ನಡಾಃ ಸಂತಿ ಅಸ್ಮಿನ್ ದೇಶೇ। ನಡ+ಮತ್. ಪ್ರತ್ಯಯು ಡಿತ್ತಾದುದರಿಂದ ಟಿ(ಅ)ಲೋಪ. ನಡ್+ಮತ್. ಡಕಾರ ಝಯ್‌ನಲ್ಲಿ ಸೇರುವುದರಿಂದ 'ಝಯಃ' ಸೂತ್ರದಿಂದ ಮತುಪಿನ ಮಕಾರಕ್ಕೆ ವಕಾರಾದೇಶ. ನಡ್ವತ್. ಹಿಂದಿನಂತೆ ಸು ಪರವಾದಾಗ ನುಮಾದಿ. ನಡ್ವಾನ್. ನಡವೆಂಬ ಹುಲ್ಲಿನಿಂದ ಕೂಡಿದ ದೇಶ. ವೇತಸಾಃ ಸಂತಿ ಅಸ್ಮಿನ್ ದೇಶೇ। ವೇತಸ+ಮತ್. ಡಿತ್ತಾದುದರಿಂದ ಟಿಲೋಪ. ವೇತಸ್+ಮತ್. ಇಲ್ಲಿ ಸಕಾರ ಝಯ್‌ನಲ್ಲಿ ಸೇರದಿರುವುದರಿಂದ ಮಕಾರಕ್ಕೆ 'ಝಯಃ' ಸೂತ್ರದಿಂದ ವತ್ವ ಬರುವುದಿಲ್ಲ. ಆದುದರಿಂದ ವತ್ವ ಹೇಳುತ್ತಾನೆ.

ಮತುಪಿನ ಮಕಾರಕ್ಕೆ ವತ್ವ ಹೇಳುವ ಸೂತ್ರ.

**೧೧೬೮. ಮಾದುಪಧಾಯಾಶ್ಚ ಮತೋರ್ವೋಽಯವಾದಿಭ್ಯಃ॥ ೮-೨-೯॥**

**ಮವರ್ಣಾವರ್ಣಾನ್ತಾನ್ಮವರ್ಣಾವರ್ಣೋಪಧಾಚ್ಚ ಯವಾದಿವರ್ಜಿತಾತ್ಪರಸ್ಯ ಮತೋರ್ಮಸ್ಯ ವಃ। ವೇತಸ್ವಾನ್॥**

ಮಾತ್, ಉಪಧಾಯಾಃ, ಚ, ಮತೋಃ, ವಃ, ಅಯವಾದಿಭ್ಯಃ॥ ಆರು ಪದಗಳುಳ್ಳ ಸೂತ್ರ. ಮಾತ್ ಆವೃತ್ತಿಮಾಡಿಕೊಳ್ಳಬೇಕು. ಮ್ ಚ ಅಶ್ಚ ತಯೋಃ ಸಮಾಹಾರಃ ಮಮ್। ಮಕಾರ ಅಕಾರಗಳು. ಮತುಪ್ ಪ್ರತ್ಯಯಕ್ಕೆ ಇಲ್ಲಿ ಕಾರ್ಯ ಹೇಳುವುದರಿಂದ ಪ್ರತ್ಯಯದಿಂದ ಪ್ರಕೃತಿ ಅಂದರೆ ಪ್ರಾತಿಪದಿಕ ಆಕ್ಷಿಪ್ತವಾಗುತ್ತದೆ. ಮಾತ್ ಪ್ರಾತಿಪದಿಕಕ್ಕೆ ವಿಶೇಷಣವಾದುದರಿಂದ ತದಂತಲಾಭ. ಮಕಾರಾಂತ, ಅಕಾರಾಂತಪ್ರಾತಿಪದಿಕ. ಇನ್ನೊಂದು ಮಾತ್ ಎಂಬುದು ಉಪಧೆಯಲ್ಲಿ ಅನ್ವಯ ಹೊಂದುತ್ತದೆ. ಮಕಾರ, ಅಕಾರ ಉಪಧೆಯಾಗಿರುವ (ಅಂತ್ಯವರ್ಣದ ಪೂರ್ವವರ್ಣ ಉಪಧಾ) ಪ್ರಾತಿಪದಿಕ. **ಸೂತ್ರಾರ್ಥ**—ಮಕಾರ ಅಕಾರಾಂತವಾದ ಮತ್ತು ಮಕಾರ ಅಕಾರ ಉಪಧೆಯಾಗಿರುವ, ಯವ ಮುಂತಾದ ಪ್ರಾತಿಪದಿಕಭಿನ್ನವಾದ, ಪ್ರಾತಿಪದಿಕದ ಪರದಲ್ಲಿರುವ ಮತುಪಿನ ಮಕಾರಕ್ಕೆ ವಕಾರ ಬರುತ್ತದೆ. ವೇತಸ್+ಮತ್. ಇಲ್ಲಿ ಅಕಾರ ಉಪಧೆಯಾಗಿರುವ ಪ್ರಾತಿಪದಿಕದ ಪರದಲ್ಲಿ ಮತುಪ್ ಬಂದಿದೆ. ವ ಆದೇಶ ಬಂದರೆ ವೇತಸ್ವತ್ ಎಂದಾಗುತ್ತದೆ. ಹಿಂದಿನಂತೆ ಸುಪರವಾದಾಗ ನುಮ್, ಉಪಧಾದೀರ್ಘ, ಸಂಯೋಗಾಂತಲೋಪ. ವೇತಸ್ವಾನ್=ಝುಂಡುಹುಲ್ಲುಳ್ಳ ದೇಶ.

ಚತುರರ್ಥದಲ್ಲಿ ಡ್ವಲಚ್ ಹೇಳುವ ಸೂತ್ರ.

**೧೦೬೯. ನಡಶಾದಾಡ್ಡ್ವಲಚ್** ॥ ೪-೨-೮೮ ॥

**ನಡ್ವಲಃ। ಶಾದ್ವಲಃ॥**

ನಡಶಾದಾತ್, ಡ್ವಲಚ್ ॥ ದ್ವಿಪದ ಸೂತ್ರ. **ಸೂತ್ರಾರ್ಥ**—ನಡ, ಶಾದ ಶಬ್ದಗಳಮೇಲೆ ಹಿಂದೆ ಹೇಳಿದ ನಾಲ್ಕು ಅರ್ಥಗಳಲ್ಲಿ ಡ್ವಲಚ್ ಪ್ರತ್ಯಯ ಬರುತ್ತದೆ. ಡ್ವಲಚಿನಲ್ಲಿ ವಲ ಉಳಿಯುತ್ತದೆ. ನಡಾಃ ಸಂತಿ ಅಸ್ಮಿನ್ ದೇಶೇ। ನಡ=ಧಮನ. ಅವು ಈ ದೇಶದಲ್ಲಿ ಇವೆ. ನಡ+ವಲ. ಡಿತ್ತಾದುದರಿಂದ ಟಿಲೋಪ. ನಡ್ವಲಃ। ಹಿಂದಿನ ಸೂತ್ರದಿಂದ ಮತುಪೂ ಬಂದುದರಿಂದ ನಡ್ವಾನ್. ಎರಡು ರೂಪ. ಶಾದಾಃ ಸಂತಿ ಅಸ್ಮಿನ್ ದೇಶೇ। ಹುಲ್ಲು ಈ ದೇಶದಲ್ಲಿ ಹೆಚ್ಚಾಗಿದೆ. ಶಾದ+ವಲ. ಟಿಲೋಪ. ಶಾದ್ವಲಃ=ಹುಲ್ಲಿನಿಂದ ಹಚ್ಚಗಾದ ದೇಶ.

ಚತುರರ್ಥದಲ್ಲಿ ವಲಚ್ ಹೇಳುವ ಸೂತ್ರ.

**೧೦೭೦. ಶಿಖಾಯಾ ವಲಚ್** ॥ ೪-೨-೮೯ ॥ **ಶಿಖಾವಲಃ** ॥

ಇತಿ ಚಾತುರರ್ಥಿಕಾಃ ॥ ೪ ॥

ದ್ವಿಪದ ಸೂತ್ರ. ಶಿಖಾ ಶಬ್ದದ ಮೇಲೆ ಹಿಂದೆ ಹೇಳಿದ ನಾಲ್ಕು ಅರ್ಥಗಳಲ್ಲಿ ವಲಚ್ ಪ್ರತ್ಯಯ ಬರುತ್ತದೆ. ಶಿಖಾಃ ಸಂತಿ ಅಸ್ಮಿನ್ ದೇಶೇ। ಶಿಖಾ+ವಲ. ಡಿತ್ತಾಗದಿರುವುದರಿಂದ ಟಿಲೋಪ ಬರುವುದಿಲ್ಲ. ಶಿಖಾವಲಃ=ಶಿಖಾವುಳ್ಳ ದೇಶ. ಜುಟ್ಟುಳ್ಳದ್ದು ಎಂಬರ್ಥದಲ್ಲಿ 'ದಂತಶಿಖಾತ್ಸಂಜ್ಞಾಯಾಮ್' ಸೂತ್ರದಿಂದ ಮುಂದೆ ವಲಚ್ ಹೇಳುತ್ತಾನೆ. ಇಲ್ಲಿ ಆ ಹೆಸರುಳ್ಳ ದೇಶವೆಂಬರ್ಥದಲ್ಲಿ ಮಾತ್ರ ವಲಚ್.

ಚಾತುರರ್ಥಿಕಪ್ರಕರಣ ಮುಗಿದಿದೆ.

## ೨೭. ಅಥ ಶೈಷಿಕಾಃ

ಶೇಷಾರ್ಥದಲ್ಲಿ ಅಣಾದಿಗಳನ್ನು ಹೇಳುವ ಸೂತ್ರ.

**೧೦೭೧. ಶೇಷೇ** ॥ ೪-೨-೯೨ ॥

**ಅಪತ್ಯಾದಿ ಚತುರರ್ಥ್ಯನ್ತಾದನ್ಯೋಽರ್ಥಃ ಶೇಷಃ, ತತ್ರ ಅಣಾದಯಃ ಸ್ಯುಃ। ಚಕ್ಷುಷಾ ಗೃಹ್ಯತೇ ಚಾಕ್ಷುಷಂ ರೂಪಮ್। ಶ್ರಾವಣಃ ಶಬ್ದಃ। ಔಪನಿಷದಃ ಪುರುಷಃ। ದೃಷದಿ ಪಿಷ್ಟಾ ದಾರ್ಷದಾಃ ಸಕ್ತವಃ। ಚತುರ್ಭಿ-**

**ರುಹ್ಯಂ ಚಾತುರಂ ಶಕಟಮ್। ಚತುರ್ದಶ್ಯಾಂ ದೃಶ್ಯತೇ ಚಾತುರ್ದಶಂ ರಕ್ಷಃ। 'ತಸ್ಯ ವಿಕಾರಃ' ಇತ್ಯತಃ ಪ್ರಾಕ್ ಶೇಷಾಧಿಕಾರಃ॥**

ಏಕಪದ ಸೂತ್ರ. ಇದು ವಿಧಿಸೂತ್ರವೂ ಅಧಿಕಾರಸೂತ್ರವೂ ಆಗಿದೆ. ಹಿಂದೆ ಹೇಳಿ ಉಳಿದಿರುವುದು ಶೇಷ. ಅಪತ್ಯಂ ಆರಂಭವಾಗಿ ಚತುರರ್ಥದವರೆಗೆ ಪ್ರತ್ಯಯ ವಿಹಿತವಾಗಿದೆ. ಆಗ ಶೇಷವೆಂದರೆ ಅಪತ್ಯಾದ್ಯರ್ಥವನ್ನು ಬಿಟ್ಟು ಉಳಿದ ಅರ್ಥಗಳಲ್ಲಿ ಪ್ರತ್ಯಯ ಎಂದು ತಿಳಿಯುತ್ತದೆ. ಅದನ್ನೇ ವೃತ್ತಿಯಲ್ಲಿ ಹೇಳಿದೆ. ಅಪತ್ಯಾದಿ ಚತುರರ್ಥದವರೆಗೆ ಹೇಳಿದ ಅರ್ಥವನ್ನು ಬಿಟ್ಟು ಉಳಿದ ಅರ್ಥದಲ್ಲಿ ಅಣಾದಿಪ್ರತ್ಯಯಗಳು ಬರುತ್ತವೆ. ಅಧಿಕಾರವೆಂದುದರಿಂದ ಮುಂದಿನ ಸೂತ್ರಗಳಲ್ಲಿ ಈ ಸೂತ್ರ ಅನುವೃತ್ತವಾಗಿ ಅಲ್ಲಿ ವಿಹಿತವಾದ ಪ್ರತ್ಯಯಗಳು ಶೈಷಿಕವೆಂಬ ಹೆಸರನ್ನು ಪಡೆಯುತ್ತವೆ ಎಂದು ತಿಳಿಸುತ್ತದೆ. 'ತಸ್ಯ ವಿಕಾರಃ' ಸೂತ್ರದವರೆಗೆ 'ಶೇಷೇ' ಎಂಬುದಕ್ಕೆ ಅಧಿಕಾರ. ಅಲ್ಲಿಯವರೆಗೆ ವಿಹಿತವಾದ ಪ್ರತ್ಯಯಗಳು ಶೈಷಿಕಗಳು. ಇದಕ್ಕೆ ಪ್ರಯೋಜನ—ಒಂದು ಶೈಷಿಕಪ್ರತ್ಯಯಾಂತದಮೇಲೆ ಇನ್ನೊಂದು ಶೈಷಿಕಪ್ರತ್ಯಯ ಬರುವುದಿಲ್ಲ. ಶೇಷಾರ್ಥದಲ್ಲಿ ಉದಾಹರಣೆ—ಚಕ್ಷುಷಾ ಗೃಹ್ಯತೇ. ಚಕ್ಷುಷ್+ಟಾ+ಅಣ್. ಚಕ್ಷುಷ್+ಅ. ಆದಿವೃದ್ಧಿ. ಚಾಕ್ಷುಷಮ್. ಕಣ್ಣಿನಿಂದ ಗ್ರಹಿಸಲ್ಪಡುವುದು; ರೂಪ. ಗ್ರಹಣಾರ್ಥ ಹಿಂದೆ ಹೇಳಿಲ್ಲ. ಹೀಗೆಯೇ, ಶ್ರವಣೇನ ಗೃಹ್ಯತೇ। ಕಿವಿಯಿಂದ ಗ್ರಹಿಸಲ್ಪಡುವುದು. ಶ್ರವಣ+ಅ. ಆದಿವೃದ್ಧಿ. ಶ್ರಾವಣಃ=ಶಬ್ದ. ಉಪನಿಷದಿ ದೃಷ್ಟಃ। ಉಪನಿಷದ್+ಅ. ಆದಿವೃದ್ಧಿ. ಔಪನಿಷದಃ=ಉಪನಿಷತ್ತಿನಿಂದ ನೋಡಲ್ಪಟ್ಟ ಪರಮಾತ್ಮ. ದೃಷದಿ ಪಿಷ್ಟಾಃ। ದೃಷದ್+ಅ. ಆದಿವೃದ್ಧಿ (ಆರ್). ದಾರ್ಷದಾಃ=ಕಲ್ಲಿನಲ್ಲಿ ಬೀಸಲ್ಪಟ್ಟ ಹುರಿಹಿಟ್ಟು. ಚತುರ್ಭಿಃ ಉಹ್ಯಂ ಚಾತುರಂ ಶಕಟಮ್। ನಾಲ್ಕರಿಂದ (ಎತ್ತು ಇತ್ಯಾದಿ) ಎಳೆಯಲ್ಪಡುವುದು; ಗಾಡಿ. ಚತುರ್+ಭಿಸ್+ಅಣ್. ಚತುರ್+ಅ. ಆದಿವೃದ್ಧಿ. ಚಾತುರಮ್. ಚತುರ್ದಶ್ಯಾಂ ದೃಶ್ಯತೇ। ಚತುರ್ದಶೀ ತಿಥಿಯಲ್ಲಿ ತೋರುವ ರಾಕ್ಷಸ. ಚತುರ್ದಶೀ+ಅ. ಆದಿವೃದ್ಧಿ. 'ಯಸ್ಯೇತಿ ಚ' ಈಕಾರಲೋಪ. ಚಾತುರ್ದಶಮ್. ಶೇಷಾರ್ಥದಲ್ಲಿ ಪ್ರತ್ಯಯಗಳನ್ನು ವಿಧಾನಮಾಡುವುದರಿಂದ ಇದಕ್ಕೆ ಶೈಷಿಕಪ್ರಕರಣವೆಂದು ಹೆಸರು. ಇತರ ಪ್ರಕರಣಗಳಿಗಿಂತ ಈ ಪ್ರಕರಣದಲ್ಲಿ ಒಂದು ವಿಶೇಷವನ್ನು ಗಮನಿಸಬೇಕು. ಪ್ರಕೃತಿವಿಶೇಷ ಮತ್ತು ಪ್ರತ್ಯಯಗಳನ್ನು ಮೊದಲು ಹೇಳಿ ಸಮರ್ಥವಿಭಕ್ತಿ ಮತ್ತು ಅರ್ಥನಿರ್ದೇಶವನ್ನು ಮುಂದೆ ತಿಳಿಸುತ್ತಾನೆ. ಆಗ ಪ್ರತ್ಯಯವಿಧಾಯಕ ಸೂತ್ರಗಳಲ್ಲಿ ಮುಂದೆ ಹೇಳುವ ಶೇಷಾರ್ಥದಲ್ಲಿ ಆಯಾಯ ಪ್ರತ್ಯಯವೆಂದು ತಿಳಿಯಬೇಕು. ಇದನ್ನು ವೃತ್ತಿಯಲ್ಲಿ ವಿವರಿಸುತ್ತಾನೆ.

ಶೇಷಾರ್ಥದಲ್ಲಿ ಘ, ಖಪ್ರತ್ಯಯ ಹೇಳುವ ಸೂತ್ರ.

೧೦೭೨. ರಾಷ್ಟ್ರಾವಾರಪಾರಾದ್ ಘಖೌ ॥ ೪-೨-೯೩ ॥

ಆಭ್ಯಾಂ ಕ್ರಮಾದ್ ಘಖೌ ಸ್ತಃ ಶೇಷೇ । ರಾಷ್ಟ್ರೇ ಜಾತಾದಿಃ । ರಾಷ್ಟ್ರಿಯಃ । ಅವಾರಪಾರೀಣಃ ।

ವಾ ॥ (ಅವಾರಪಾರಾದ್ವಿಗೃಹೀತಾದಪಿ ವಿಪರೀತಾಚ್ಚೇತಿ ವಕ್ತವ್ಯಮ್)

ಅವಾರೀಣಃ । ಪಾರೀಣಃ । ಪಾರಾವಾರೀಣಃ ॥ ಇಹ ಪ್ರಕೃತಿವಿಶೇಷಾದ್ ಘಾದಯಷ್ಟ್ಯುಟ್ಯುಲಂತಾಃ ಪ್ರತ್ಯಯಾ ಉಚ್ಯಂತೇ ತೇಷಾಂ ಜಾತಾದಯೋಽರ್ಥವಿಶೇಷಾಃ ಸಮರ್ಥವಿಭಕ್ತಯಶ್ಚ ವಕ್ಷ್ಯಂತೇ ॥

ದ್ವಿಪದ ಸೂತ್ರ. **ಸೂತ್ರಾರ್ಥ**—ರಾಷ್ಟ್ರ, ಅವಾರಪಾರ ಶಬ್ದಗಳ ಮೇಲೆ ಶೇಷಾರ್ಥದಲ್ಲಿ ಕ್ರಮವಾಗಿ ಘ, ಖ ಪ್ರತ್ಯಯಗಳು ಬರುತ್ತವೆ. 'ಯಥಾಸಂಖ್ಯ—' ಪರಿಭಾಷೆಯಿಂದ ಕ್ರಮ ಲಬ್ಧವಾಗಿದೆ. ಜಾತಾದಿ ಶೇಷಾರ್ಥಗಳನ್ನು ಮುಂದೆ ಹೇಳುತ್ತಾನೆ. ರಾಷ್ಟ್ರೇ ಜಾತಃ । (ಆದಿಪದದಿಂದ ಮುಂದೆ ಹೇಳುವ ಎಲ್ಲಾ ಅರ್ಥಗಳಲ್ಲಿಯೂ ಹೀಗೇ ತಿಳಿಯಬೇಕು.) ರಾಷ್ಟ್ರ+ಙಿ+ಘ. 'ಆಯನೇಯೀ—' ಸೂತ್ರದಿಂದ ಘಕಾರಕ್ಕೆ ಇಯ್ ಆದೇಶ. ರಾಷ್ಟ್ರ+ಇಯ್+ಅ. 'ಯಸ್ಯೇತಿ ಚ' ಅಲೋಪ. ರಾಷ್ಟ್ರಿಯಃ=ರಾಷ್ಟ್ರದಲ್ಲಿ ಹುಟ್ಟಿದವನು. ಅವಾರಪಾರೇ ಜಾತಃ । ಅವಾರಪಾರ+ಖ. 'ಆಯನೇ—' ಸೂತ್ರದಿಂದ ಖಕಾರಕ್ಕೆ ಈನ್ ಆದೇಶ. ಅವಾರಪಾರ+ಈನ. 'ಯಸ್ಯೇತಿ ಚ' ಅಲೋಪ. 'ಅಟ್‌ಕುಪ್ವಾಙ್—' ಸೂತ್ರದಿಂದ ಣತ್ವ. ಅವಾರಪಾರೀಣಃ । ಅವಾರಪಾರ ಸಮಾಸಪದ. ಇಲ್ಲಿ ಸೇರಿದ ಎರಡು ಪದಗಳ ಮೇಲೂ ಖ ಬರಬೇಕೆಂದು ವಾರ್ತಿಕ ಆರಬ್ಧವಾಗಿದೆ. **ವಾರ್ತಿಕಾರ್ಥ**—ಅವಾರಪಾರ ಶಬ್ದದಲ್ಲಿ ಭಿನ್ನಭಿನ್ನವಾಗಿ ಇರುವಾಗಲೂ ವಿಪರೀತವಾಗಿರುವಾಗಲೂ ಖ ಬರುತ್ತದೆಯೆನ್ನಬೇಕು. ವಿಪರೀತ ಎಂದರೆ ವ್ಯತ್ಯಾಸೋಚ್ಚಾರಣೆ. ಅವಾರೇ ಜಾತಃ ಅವಾರೀಣಃ । ಪಾರೇ ಜಾತಃ ಪಾರೀಣಃ । ಪಾರಾವಾರೇ ಜಾತಃ ಪಾರಾವಾರೀಣಃ । ಸೂತ್ರದಲ್ಲಿ ಅರ್ಥನಿರ್ದೇಶ ಮಾಡದೆ ಪ್ರತ್ಯಯ ವಿಹಿತವಾದರೆ ಸ್ವಾರ್ಥದಲ್ಲಿ ಆ ಪ್ರತ್ಯಯ ಬಂದಿದೆಯೆಂದು 'ಅನಿರ್ದಿಷ್ಟಾರ್ಥಾಃ ಪ್ರತ್ಯಯಾಃ ಸ್ವಾರ್ಥೇ ಭವನ್ತಿ' ಎಂಬ ಪರಿಭಾಷೆಯಿಂದ (ಅರ್ಥನಿರ್ದೇಶವಿಲ್ಲದ ಪ್ರತ್ಯಯಗಳು ಸ್ವಾರ್ಥದಲ್ಲಿ ಬರುತ್ತವೆ.) ತಿಳಿಯುತ್ತದೆ. ಪ್ರಕೃತ ಅರ್ಥನಿರ್ದೇಶಮಾಡದೇ ಪ್ರತ್ಯಯವಿಧಾನಮಾಡಿದುದರಿಂದ ರಾಷ್ಟ್ರೇ ಜಾತಃ ಇತ್ಯಾದಿ ಅರ್ಥ ಹೇಳಿರುವುದು ಸಮಂಜಸವಾಗುವುದಿಲ್ಲ. ಸ್ವಾರ್ಥದಲ್ಲಿ ಹೇಳಬೇಕು ಎಂಬ ಶಂಕೆ ಬಂದರೆ ಅದಕ್ಕೆ ಸಮಾಧಾನ ಹೇಳುತ್ತಾನೆ. 'ಇಹ—' ಇತಿ. ಇಲ್ಲಿ ಆಯಾಯ ಪ್ರಕೃತಿವಿಶೇಷದ ಮೇಲೆ ಘ ಆರಂಭಿಸಿ ಟ್ಯುಟ್ಯುಲ್‌ವರೆಗೆ ಪ್ರತ್ಯಯಗಳು ಹೇಳಲ್ಪಡುತ್ತವೆ. ಅವುಗಳಿಗೆ ಜಾತ ಮುಂತಾದ ಅರ್ಥವಿಶೇಷಗಳನ್ನೂ ಸಮರ್ಥವಿಭಕ್ತಿಗಳನ್ನೂ ಮುಂದೆ ಹೇಳುತ್ತಾನೆ. ಇದನ್ನು ಹಿಂದೆ ವಿವರಿಸಿದೆ.

ಶೇಷಾರ್ಥದಲ್ಲಿ ಯ, ಖಞ್ ಪ್ರತ್ಯಯ ಹೇಳುವ ಸೂತ್ರ.

**೧೦೭೩. ಗ್ರಾಮಾದ್ಯಖಞೌ ॥ ೪-೨-೯೪ ॥ ಗ್ರಾಮ್ಯಃ । ಗ್ರಾಮೀಣಃ ॥**

ಗ್ರಾಮಾತ್, ಯಖಞೌ ॥ ದ್ವಿಪದ ಸೂತ್ರ. **ಸೂತ್ರಾರ್ಥ**—ಗ್ರಾಮ ಶಬ್ದದ ಮೇಲೆ ಜಾತಾದ್ಯರ್ಥದಲ್ಲಿ ಯ, ಖಞ್ ಪ್ರತ್ಯಯ ಬರುತ್ತವೆ. ಗ್ರಾಮೇ ಜಾತಃ= ಗ್ರಾಮದಲ್ಲಿ ಹುಟ್ಟಿದವನು. ಗ್ರಾಮ+ಯ. 'ಯಸ್ಯೇತಿ ಚ' ಅಕಾರಲೋಪ. ಗ್ರಾಮ್ಯಃ । ಗ್ರಾಮ+ಖ. 'ಆಯನೇಯೀ—' ಸೂತ್ರದಿಂದ ಖಕಾರಕ್ಕೆ ಈನಾದೇಶ. ಗ್ರಾಮ+ಈನ. 'ಯಸ್ಯೇತಿ ಚ' ಅಲೋಪ. 'ಅಟ್‌ಕುಪ್ವಾಙ್—' ಸೂತ್ರದಿಂದ ಣತ್ವ. ಗ್ರಾಮೀಣಃ=ಹಳ್ಳಿಯವನು.

ಶೇಷಾರ್ಥದಲ್ಲಿ ಢಕ್ ಹೇಳುವ ಸೂತ್ರ.

**೧೦೭೪. ನದ್ಯಾದಿಭ್ಯೋ ಢಕ್ ॥ ೪-೨-೯೭ ॥**

**ನಾದೇಯಮ್ । ಮಾಹೇಯಮ್ । ವಾರಾಣಸೇಯಮ್ ॥**

ದ್ವಿಪದ ಸೂತ್ರ. ನದ್ಯಾದಿಗಣಪಠಿತ ಶಬ್ದಗಳಿಗೆ ಜಾತಾದ್ಯರ್ಥದಲ್ಲಿ ಢಕ್ ಪ್ರತ್ಯಯ ಬರುತ್ತದೆ. ನದ್ಯಾಂ ಜಾತಾದಿಃ । ನದೀ+ಢ. 'ಆಯನೇ—' ಸೂತ್ರ ದಿಂದ ಢಕಾರಕ್ಕೆ ಏಯಾದೇಶ. ನದೀ+ಏಯ. 'ಯಸ್ಯೇತಿ ಚ' ಈಕಾರಲೋಪ. ಕಿತ್ತಾದುದರಿಂದ 'ಕಿತಿ ಚ' ಸೂತ್ರದಿಂದ ಆದಿವೃದ್ಧಿ. ನಾದೇಯಮ್. ಮಹ್ಯಾಂ ಜಾತಾದಿಃ । ಮಹೀ+ಢಕ್. ಹಿಂದಿನಂತೆ ಪ್ರಕ್ರಿಯೆ. ಮಾಹೇಯಮ್=ಭೂಮಿ ಯಲ್ಲಿ ಹುಟ್ಟಿದ್ದು. ವಾರಾಣಸ್ಯಾಂ ಜಾತಾದಿಃ । ವಾರಾಣಸೀ+ಢಕ್. ವಾರಾಣ ಸೇಯಮ್=ಕಾಶಿಯಲ್ಲಿ ಇರುವುದು. ನದ್ಯಾದಿ ಶಬ್ದಗಳನ್ನು ಗಣಪಾಠದಿಂದ ತಿಳಿಯಬೇಕು.

ಶೇಷಾರ್ಥದಲ್ಲಿ ತ್ಯಕ್ ಪ್ರತ್ಯಯ ಹೇಳುವ ಸೂತ್ರ.

**೧೦೭೫. ದಕ್ಷಿಣಾಪಶ್ಚಾತ್‌ಪುರಸಸ್ತ್ಯಕ್ ॥ ೪-೨-೯೮ ॥**

**ದಾಕ್ಷಿಣಾತ್ಯಃ । ಪಾಶ್ಚಾತ್ಯಃ । ಪೌರಸ್ತ್ಯಃ ॥**

ದ್ವಿಪದ ಸೂತ್ರ. **ಸೂತ್ರಾರ್ಥ**—ದಕ್ಷಿಣಾ, ಪಶ್ಚಾತ್, ಪುರಸ್ ಅವ್ಯಯಗಳ ಮೇಲೆ ಜಾತಾದ್ಯರ್ಥದಲ್ಲಿ ತ್ಯಕ್ ಪ್ರತ್ಯಯ ಬರುತ್ತದೆ. ಪಶ್ಚಾತ್, ಪುರಸ್ ಅವ್ಯಯ ಗಳೊಡನೆ ದಕ್ಷಿಣಶಬ್ದ ಹೇಳಿದುದರಿಂದ ಸಾಹಚರ್ಯಪರಿಭಾಷೆಯಿಂದ ಆಜಂತವಾದ ದಕ್ಷಿಣಾ ಎಂಬ ಅವ್ಯಯವನ್ನೇ ತೆಗೆದುಕೊಳ್ಳಬೇಕು. ದಕ್ಷಿಣಾ+ಜಾತಃ । ದಕ್ಷಿಣಾ+ ತ್ಯಕ್. ಕಿತ್ತಾದುದರಿಂದ ಆದಿವೃದ್ಧಿ. ದಾಕ್ಷಿಣಾತ್ಯಃ । ಪಶ್ಚಾತ್+ತ್ಯ=ಪಾಶ್ಚಾತ್ಯಃ । ಪುರಸ್+ತ್ಯ=ಪೌರಸ್ತ್ಯಃ ॥

ಶೇಷಾರ್ಥದಲ್ಲಿ ಯತ್ ಹೇಳುವ ಸೂತ್ರ.

**೧೧೭೭. ದ್ಯುಪ್ರಾಗಪಾಗುದಕ್ಪ್ರತೀಚೋ ಯತ್ ॥ ೪-೨-೧೦೧ ॥**

**ದಿವ್ಯಮ್ । ಪ್ರಾಚ್ಯಮ್ । ಅಪಾಚ್ಯಮ್ । ಉದೀಚ್ಯಮ್ । ಪ್ರತೀಚ್ಯಮ್ ॥**

ದ್ವಿಪದ ಸೂತ್ರ. ದಿವ್, ಪ್ರಾಞ್ಚ್, ಅಪಾಞ್ಚ್, ಉದಞ್ಚ್, ಪ್ರತ್ಯಞ್ಚ್ ಶಬ್ದಗಳಿಗೆ ಶೇಷಾರ್ಥದಲ್ಲಿ ಯತ್ ಪ್ರತ್ಯಯ ಬರುತ್ತದೆ. ಸೂತ್ರದಲ್ಲಿ ದಿವ್ ಶಬ್ದಕ್ಕೆ 'ದಿವ ಉತ್' ಸೂತ್ರದಿಂದ ಉತ್ವಮಾಡಿ ಹೇಳಿರುತ್ತಾನೆ. ದಿವಿ ಭವಮ್=ಸ್ವರ್ಗದಲ್ಲಿ ಇರುವುದು. ದಿವ್+ಙಿ+ಯತ್. ದಿವ್+ಯ=ದಿವ್ಯಮ್. ಪ್ರಾಚಿ ಭವಮ್. ಪ್ರಾಞ್ಚ್+ಯ. ಪ್ರಾಚ್ಯಮ್=ಪೂರ್ವದಿಕ್ಕಿನಲ್ಲಿರುವುದು. 'ಅನಿದಿತಾಂ—' ಸೂತ್ರದಿಂದ ನಲೋಪ. 'ಅಚಃ' ಸೂತ್ರದಿಂದ ಅಕಾರಲೋಪ. 'ಚೌ' ಸೂತ್ರದಿಂದ ದೀರ್ಘ. (ಪ್ರಾಞ್ಚ್ ಶಬ್ದಪ್ರಕ್ರಿಯೆ ನೋಡಿ) ಅಪಾಚಿ ಭವಮ್ ಅಪಾಚ್ಯಮ್. ಉದೀಚಿ ಭವಮ್ ಉದೀಚ್ಯಮ್. 'ಉದ ಈತ್' ಸೂತ್ರದಿಂದ ಈತ್ವ ಬಂದಿದೆ. ಪ್ರತೀಚಿ ಭವಮ್ ಪ್ರತೀಚ್ಯಮ್=ಪಶ್ಚಿಮ ದಿಕ್ಕಿನಲ್ಲಿರುವುದು.

ಶೇಷಾರ್ಥದಲ್ಲಿ ತ್ಯಪ್ ಹೇಳುವ ಸೂತ್ರ.

**೧೧೭೭. ಅವ್ಯಯಾತ್ತ್ಯಪ್ ॥ ೪-೨-೧೦೪ ॥**

**ವಾ ॥ (ಅಮೇಹಕ್ವತಸಿತ್ರೇಭ್ಯ ಏವ) ಅಮಾತ್ಯಃ । ಇಹತ್ಯಃ । ಕ್ವತ್ಯಃ । ತತಸ್ತ್ಯಃ । ತತ್ರತ್ಯಃ ॥**

**ವಾ ॥ (ತ್ಯಪ್ ನೇರ್ಧ್ರುವ ಇತಿ ವಕ್ತವ್ಯಮ್ ।) ನಿತ್ಯಃ ॥**

ಅವ್ಯಯಾತ್, ತ್ಯಪ್ ॥ ದ್ವಿಪದ ಸೂತ್ರ. ಅವ್ಯಯದ ಮೇಲೆ ಶೇಷಾರ್ಥದಲ್ಲಿ ತ್ಯಪ್ ಪ್ರತ್ಯಯ ಬರುತ್ತದೆ. ಸೂತ್ರದಿಂದ ಎಲ್ಲಾ ಅವ್ಯಯಗಳ ಮೇಲೂ ತ್ಯಪ್ ಪ್ರಾಪ್ತವಾದರೆ ವಾರ್ತಿಕಕಾರರು ನಿಯಮಮಾಡುತ್ತಾರೆ. ಅವ್ಯಯಗಳಿಗೆ ತ್ಯಪ್ ಬರುವುದಾದರೆ ಅಮಾ, ಇಹ, ಕ್ವ, ತಸ್, ತ್ರ ಎಂಬ ಐದು ಅವ್ಯಯಗಳ ಮೇಲೆ ಮಾತ್ರ. ಅವುಗಳಲ್ಲಿ ತಸ್, ತ್ರ ಪ್ರತ್ಯಯವಾದುದರಿಂದ ತಸಂತ, ತ್ರಲಂತ ಶಬ್ದಗಳನ್ನು ತೆಗೆದುಕೊಳ್ಳಬೇಕು. ಅಮಾ ತಿಷ್ಠತಿ ಅಮಾತ್ಯಃ=ಸಮೀಪದಲ್ಲಿರುವವನು=ಮಂತ್ರೀ. ಇಹ ತಿಷ್ಠತಿ ಇಹತ್ಯಃ=ಇಲ್ಲಿರುವವನು. ಕ್ವ ತಿಷ್ಠತಿ ಕ್ವತ್ಯಃ=ಎಲ್ಲಿರುವವನು? ತತಃ ತಿಷ್ಠತಿ। ತತಸ್+ತ್ಯ. ತತಸ್ತ್ಯಃ=ಆ ಕಡೆ ಇರುವವನು. ತತ್ರ ತಿಷ್ಠತಿ ತತ್ರತ್ಯಃ=ಅಲ್ಲಿರುವವನು.

**ತ್ಯಪ್ ನೇರಿತಿ**—ನಿ ಎಂಬ ಅವ್ಯಯದ ಮೇಲೆ ಧ್ರುವ ಅಂದರೆ ನಿತ್ಯ ಎಂಬರ್ಥದಲ್ಲಿ ತ್ಯಪ್ ಪ್ರತ್ಯಯ ಹೇಳಬೇಕು. ನಿ+ತ್ಯ=ನಿತ್ಯಃ=ಶಾಶ್ವತವಾದದ್ದು.

ಮುಂದೆ ವೃದ್ಧದ ಮೇಲೆ ಛಪ್ರತ್ಯಯ ಹೇಳುವುದರಿಂದ ವೃದ್ಧವೆಂದರೇನೆಂದು ತಿಳಿಸುತ್ತಾನೆ.

ವೃದ್ಧಸಂಜ್ಞೆ ಹೇಳುವ ಸೂತ್ರ.

**೧೧೭೪. ವೃದ್ಧಿರ್ಯಸ್ಯಾಚಾಮಾದಿಸ್ತದ್ವೃದ್ಧಮ್ ॥ ೧-೧-೭೩ ॥**

**ಯಸ್ಯ ಸಮುದಾಯಸ್ಯಾಚಾಂ ಮಧ್ಯೇ ಆದಿರ್ವೃದ್ಧಿಸ್ತದ್ವೃದ್ಧಸಂಜ್ಞಂ ಸ್ಯಾತ್ ॥**

ವೃದ್ಧಿಃ, ಯಸ್ಯ, ಅಚಾಂ, ಆದಿಃ, ತತ್, ವೃದ್ಧಮ್ ॥ ಅಚಾಂ ನಿರ್ಧಾರಣ ಷಷ್ಠೀ. ಅಚ್‌ಗಳ ಮಧ್ಯೆ ಎಂದರ್ಥ. ಬಹುವಚನವು ಅನೇಕತ್ವವನ್ನು ತಿಳಿಸುತ್ತದೆ. **ಸೂತ್ರಾರ್ಥ**—ಯಾವ ಸಮುದಾಯದ ಅಚ್‌ಗಳ ಮಧ್ಯೆ ಮೊದಲನೇ ಅಚ್ ವೃದ್ಧಿಯಾಗಿರುವುದೋ (ಆ, ಐ, ಔ) ಅದು 'ವೃದ್ಧ' ಸಂಜ್ಞೆಯನ್ನು ಹೊಂದುತ್ತದೆ. ಶಬ್ದದ ಮೊದಲನೇ ಅಚ್ ಆ, ಐ, ಔಗಳಲ್ಲಿ ಒಂದಾಗಿದ್ದರೆ ಆ ಶಬ್ದಕ್ಕೆ ವೃದ್ಧವೆಂದು ಹೆಸರು. ಶಾಲಾ। ಇಲ್ಲಿ ಎರಡು ಅಚ್ ಇವೆ. ಮೊದಲನೆಯ ಅಚ್ ಆರೂಪ ವೃದ್ಧಿಯಾದುದರಿಂದ ಇದು ವೃದ್ಧವಾಗುತ್ತದೆ. ಅನೇಕ ಅಚ್ ಇಲ್ಲದೆ ಮೊದಲನೇ ಒಂದೇ ಅಚ್ ವೃದ್ಧಿಯಾಗಿದ್ದರೂ (ಜ್ಞಾ ಇತ್ಯಾದಿಗಳಲ್ಲಿ ಇದ್ದಂತೆ) ಅದೂ ವ್ಯಪದೇಶಿವದ್ಭಾವದಿಂದ ವೃದ್ಧಸಂಜ್ಞೆ ಹೊಂದುತ್ತದೆ.

ತ್ಯದಾದಿಗಳಿಗೆ ವೃದ್ಧಸಂಜ್ಞೆ ಹೇಳುವ ಸೂತ್ರ.

**೧೧೭೫. ತ್ಯದಾದೀನಿ ಚ ॥ ೧-೧-೭೪ ॥**

**ವೃದ್ಧಸಂಜ್ಞಾನಿ ಸ್ಯುಃ ॥**

ದ್ವಿಪದ ಸೂತ್ರ. 'ವೃದ್ಧಮ್' ಅನುವೃತ್ತಿ. **ಸೂತ್ರಾರ್ಥ**—ತ್ಯದ್ ಮುಂತಾದ ಶಬ್ದಗಳೂ ವೃದ್ಧಸಂಜ್ಞೆಯನ್ನು ಹೊಂದುತ್ತವೆ. ತ್ಯದಾದಿಗಳು ಸರ್ವನಾಮಗಣದಲ್ಲಿ ಹೇಳಿವೆ. (ತ್ಯದ್, ತದ್, ಯದ್, ಏತದ್, ಇದಮ್, ಅದಸ್, ಏಕ, ದ್ವಿ, ಯುಷ್ಮದ್, ಅಸ್ಮದ್, ಭವತು, ಕಿಮ್.) ಹೀಗೆ ವೃದ್ಧಸಂಜ್ಞೆ ಹೇಳಿ ಅದಕ್ಕೆ ಉಪಯೋಗ ತೋರಿಸುತ್ತಾನೆ.

ಶೇಷಾರ್ಥದಲ್ಲಿ ಛಪ್ರತ್ಯಯ ಹೇಳುವ ಸೂತ್ರ.

**೧೧೭೬. ವೃದ್ಧಾಚ್ಛಃ ॥ ೪-೨-೧೧೪ ॥**

**ಶಾಲೀಯಃ। ಮಾಲೀಯಃ। ತದೀಯಃ।**

**ವಾ ॥ (ವಾ ನಾಮಧೇಯಸ್ಯ ವೃದ್ಧಸಂಜ್ಞಾ ವಕ್ತವ್ಯಾ)**

**ದೇವದತ್ತೀಯಃ, ದೈವದತ್ತಃ ॥**

ವೃದ್ಧಾತ್, ಛಃ ॥ ದ್ವಿಪದ ಸೂತ್ರ. ವೃದ್ಧಸಂಜ್ಞೆಯುಳ್ಳ ಶಬ್ದದ ಮೇಲೆ ಛಪ್ರತ್ಯಯ ಬರುತ್ತದೆ. ಶಾಲಾ, ಮಾಲಾ ಶಬ್ದಗಳಲ್ಲಿ ಆದಿಯ ಸ್ವರ ವೃದ್ಧಿಯಾದುದರಿಂದ ಅವು ವೃದ್ಧಗಳು. ಶಾಲಾಯಾಂ ಭವಃ। ಶಾಲಾ+ಛ. 'ಆಯನೇಯೀ—' ಸೂತ್ರದಿಂದ ಛಕಾರಕ್ಕೆ ಈಯಾದೇಶ. 'ಯಸ್ಯೇತಿ ಚ' ಆಕಾರಲೋಪ. ಶಾಲೀಯಃ =ಶಾಲೆಯಲ್ಲಿರುವುದು. ಮಾಲಾಯಾಂ ಭವಃ ಮಾಲೀಯಃ। ತಸ್ಯ ಅಯಮ್. ತದ್+ಛ. ತದೀಯಃ। ತ್ಯದಾದಿಯಲ್ಲಿ ಸೇರಿರುವುದರಿಂದ ತದ್ ವೃದ್ಧ. ಅವನ ಸಂಬಂಧಿ.

**ವಾರ್ತಿಕಾರ್ಥ**—ಹೆಸರನ್ನು ಹೇಳುವ ಶಬ್ದಗಳಿಗೆ ವಿಕಲ್ಪವಾಗಿ ವೃದ್ಧಸಂಜ್ಞೆ ಹೇಳಬೇಕು. ದೇವದತ್ತ ನಾಮಧೇಯವಾಚಕ. ದೇವದತ್ತಸ್ಯ ಅಯಮ್। ವೃದ್ಧಸಂಜ್ಞಾ ಬಂದಾಗ ಛಪ್ರತ್ಯಯ. ದೇವದತ್ತ+ಛ. ಈಯಾದೇಶ ಬಂದಾಗ 'ಯಸ್ಯೇತಿ ಚ' ಸೂತ್ರದಿಂದ ಅಕಾರಲೋಪ. ದೇವದತ್ತೀಯಃ। ವೃದ್ಧಸಂಜ್ಞಾ ಬಾರದಿರುವಾಗ 'ತಸ್ಯೇದಮ್' ಸೂತ್ರದಿಂದ ಅಣ್. ಆದಿವೃದ್ಧಿ, ಅಲೋಪ. ದೈವದತ್ತಃ=ದೇವದತ್ತನ ಸಂಬಂಧಿ.

ಗಹಾದಿಗಳಿಗೆ ಛ ಹೇಳುವ ಸೂತ್ರ.

**೧೦೮೧. ಗಹಾದಿಭ್ಯಶ್ಚ ॥ ೪-೨-೧೩೮ ॥ ಗಹೀಯಃ ॥**

ಗಹಾದಿಭ್ಯಃ, ಚ ॥ ದ್ವಿಪದ ಸೂತ್ರ. ಗಹಾದಿಗಣಪಠಿತಗಳಾದ ಶಬ್ದಗಳಿಗೆ ಜಾತಾದ್ಯರ್ಥಗಳಲ್ಲಿ ಛಪ್ರತ್ಯಯ ಬರುತ್ತದೆ. ಗಹೇ ಜಾತಃ। ಗಹವೆಂಬ ದೇಶದಲ್ಲಿ ಹುಟ್ಟಿದವ. ಗಹ+ಛ. ಈಯಾದೇಶ, ಅಲೋಪ. ಗಹೀಯಃ। ಗಣಪಾಠದಿಂದ ಇತರ ಶಬ್ದಗಳನ್ನೂ ತಿಳಿಯಬೇಕು.

ಯುಷ್ಮದಸ್ಮದ್‌ಗಳಿಗೆ ಖಞ್, ಛ ಹೇಳುವ ಸೂತ್ರ.

**೧೦೮೨. ಯುಷ್ಮದಸ್ಮದೋರನ್ಯತರಸ್ಯಾಂ ಖಞ್ ಚ ॥ ೪-೩-೧ ॥**

**ಚಾಚ್ಛಃ। ಪಕ್ಷೇಽಣ್। ಯುವಯೋರ್ಯುಷ್ಮಾಕಂ ವಾಯಂ ಯುಷ್ಮದೀಯಃ, ಅಸ್ಮದೀಯಃ ॥**

ಯುಷ್ಮದಸ್ಮದೋಃ, ಅನ್ಯತರಸ್ಯಾಂ, ಖಞ್, ಚ ॥ ನಾಲ್ಕು ಪದಗಳುಳ್ಳ ಸೂತ್ರ. ಯುಷ್ಮದಸ್ಮದೋಃ ಎಂಬಲ್ಲಿ ಪಂಚಮ್ಯರ್ಥದಲ್ಲಿ ಷಷ್ಠೀ ಬಂದಿದೆ. **ಸೂತ್ರಾರ್ಥ**—ಯುಷ್ಮದ್, ಅಸ್ಮದ್ ಶಬ್ದಗಳ ಮೇಲೆ ಜಾತಾದ್ಯರ್ಥಗಳಲ್ಲಿ ವಿಕಲ್ಪವಾಗಿ ಖಞ್ ಪ್ರತ್ಯಯ ಬರುತ್ತದೆ; ಚಕಾರದಿಂದ ಛಪ್ರತ್ಯಯವೂ ಬರುತ್ತದೆ. ಇವೆರಡೂ ವಿಕಲ್ಪವಾದುದರಿಂದ ಬಾರದಿದ್ದರೆ ಸಾಮಾನ್ಯಪ್ರಾಪ್ತವಾದ ಅಣ್.

ಮೂರು ಪ್ರತ್ಯಯಗಳನ್ನು ಹೇಳಿರುವುದರಿಂದ ಯಥಾಸಂಖ್ಯವಿಲ್ಲ. ಏಕವಚನದಲ್ಲಿ ಆದೇಶ ಹೇಳುವುದರಿಂದ ದ್ವಿಬಹುವಚನಗಳಲ್ಲಿ ಮಾತ್ರ ಉದಾಹರಣೆ ತೋರಿಸಿದೆ. ಯುವಯೋಃ ಅಯಮ್ । ಯುಷ್ಮದ್ + ಜಸ್ + ಛ. ಸುಲೋಪ. 'ಆಯನೇಯೀ—' ಸೂತ್ರದಿಂದ ಛಕಾರಕ್ಕೆ ಈಯಾದೇಶ. ಯುಷ್ಮದೀಯಃ = ನಿಮ್ಮಿಬ್ಬರ ಸಂಬಂಧಿ. ಹೀಗೆಯೇ ಆವಯೋಃ ಅಯಮ್ । ಅಸ್ಮದ್ + ಛ. ಅಸ್ಮದೀಯಃ । ಖಞ್, ಅಣ್ ಪರವಾದಾಗ ಪ್ರಕೃತಿಗೆ ಆದೇಶ ಹೇಳುತ್ತಾನೆ.

ಖಞ್, ಅಣ್ ಪರವಾದಾಗ ಆದೇಶ ಹೇಳುವ ಸೂತ್ರ.

**೧೦೮೩. ತಸ್ಮಿನ್ನಣಿ ಚ ಯುಷ್ಮಾಕಾಸ್ಮಾಕೌ ॥ ೪-೩-೨ ॥**

**ಯುಷ್ಮದಸ್ಮದೋರೇತಾವಾದೇಶೌ ಸ್ತಃ ಖಞ್ಯಣಿ ಚ । ಯೌಷ್ಮಾಕೀಣಃ । ಆಸ್ಮಾಕೀನಃ । ಯೌಷ್ಮಾಕಃ । ಆಸ್ಮಾಕಃ ॥**

ನಾಲ್ಕು ಪದಗಳುಳ್ಳ ಸೂತ್ರ. ತಚ್ಛಬ್ದವು ಹಿಂದೆ ಹೇಳಿದ ಖಞ್ ಪ್ರತ್ಯಯವನ್ನು ಪರಾಮರ್ಶಿಸುತ್ತದೆ. **ಸೂತ್ರಾರ್ಥ**—ಖಞ್, ಅಣ್ ಪ್ರತ್ಯಯ ಪರವಾದಾಗ ಯುಷ್ಮದ್, ಅಸ್ಮದ್ ಶಬ್ದಗಳಿಗೆ (ಅನುವೃತ್ತಿಯಿಂದ ಲಬ್ಧವಾಗಿದೆ) ಯುಷ್ಮಾಕ, ಅಸ್ಮಾಕ ಆದೇಶಗಳು ಬರುತ್ತವೆ. ಹಿಂದಿನಂತೆಯೇ ಅರ್ಥ. ಯುಷ್ಮಾಕಂ ಅಯಮ್ । ಯುಷ್ಮದ್ + ಖಞ್. ಯುಷ್ಮದ್‌ಗೆ ಯುಷ್ಮಾಕ ಆದೇಶ. ಖಕಾರಕ್ಕೆ ಈನಾದೇಶ ಯುಷ್ಮಾಕ + ಈನ. ಞಿತ್ತಾದುದರಿಂದ ಆದಿವೃದ್ಧಿ. 'ಯಸ್ಯೇತಿ ಚ' ಅಕಾರಲೋಪ. 'ಅಟ್‌ಕುಪ್ವಾಙ್—' ಸೂತ್ರದಿಂದ ಣತ್ವ. ಯೌಷ್ಮಾಕೀಣಃ । ಅಸ್ಮಾಕಂ ಅಯಮ್ । ಆಸ್ಮಾಕೀನಃ = ಕ್ರಮವಾಗಿ ನಿಮ್ಮವ, ನಮ್ಮವ ಎಂದರ್ಥ. ಅಣ್ ಬಂದಾಗ ಆದಿವೃದ್ಧಿ, ಅಲೋಪ. ಯೌಷ್ಮಾಕಃ, ಆಸ್ಮಾಕಃ ॥

ಖಞ್ ಅಣಿನಲ್ಲಿ ಯುಷ್ಮದಸ್ಮದ್‌ಗಳಿಗೆ ಆದೇಶ ಹೇಳುವ ಸೂತ್ರ.

**೧೦೮೪. ತವಕಮಮಕಾವೇಕವಚನೇ ॥ ೪-೩-೩ ॥**

**ಏಕಾರ್ಥವಾಚಿನೋರ್ಯುಷ್ಮದಸ್ಮದೋಸ್ತವಕಮಮಕೌ ಸ್ತಃ ಖಞಿ ಅಣಿ ಚ । ತಾವಕೀನಃ । ತಾವಕಃ । ಮಾಮಕೀನಃ । ಮಾಮಕಃ । ಛೇ ತು ।**

ತವಕಮಮಕೌ, ಏಕವಚನೇ ॥ ದ್ವಿಪದ ಸೂತ್ರ. 'ಏಕವಚನೇ' ಯುಷ್ಮದ್ ಅಸ್ಮದ್‌ಗಳಿಗೆ ವಿಶೇಷಣವಾದುದರಿಂದ ಏಕತ್ವಸಂಖ್ಯಾವಿಶಿಷ್ಟಾರ್ಥಪ್ರತಿಪಾದಕಗಳಾದ ಯುಷ್ಮದ್, ಅಸ್ಮದ್ ಎಂದರ್ಥವಾಗುತ್ತದೆ. **ಸೂತ್ರಾರ್ಥ**—ಏಕಾರ್ಥವನ್ನು ಹೇಳುವ ಯುಷ್ಮದ್, ಅಸ್ಮದ್ ಶಬ್ದಗಳಿಗೆ ಖಞ್, ಅಣ್ ಪ್ರತ್ಯಯ ಪರದಲ್ಲಿರುವಾಗ ತವಕ, ಮಮಕ ಆದೇಶಗಳು ಬರುತ್ತವೆ. ತವ ಅಯಮ್. ಯುಷ್ಮದ್ + ಖ.

ತವಕಾದೇಶ ಬಂದರೆ ಆದಿವೃದ್ಧಿ. ಅಲೋಪ. ತಾವಕೀನಃ | ಅಣ್ ಬಂದರೆ, ತಾವಕಃ | ಹೀಗೆಯೇ ಮಮ ಅಯುಮ್. ಅಸ್ಮದ್ + ಖ. ಹಿಂದಿನಂತೇ ಪ್ರಕ್ರಿಯೆ. ಮಾಮಕೀನಃ | ಅಣ್. ಮಾಮಕಃ | ಛಪ್ರತ್ಯಯ ಪರವಾದಾಗ ಯುಷ್ಮದಸ್ಮದ್‌ಗಳಿಗೆ ವಿಶೇಷಾದೇಶ ಹೇಳುತ್ತಾನೆ.

ಪ್ರತ್ಯಯ ಪರವಾದಾಗ ಯುಷ್ಮದ್ ಅಸ್ಮದ್‌ಗಳಿಗೆ ಆದೇಶ ಹೇಳುವ ಸೂತ್ರ.

೧೦೮೫. **ಪ್ರತ್ಯಯೋತ್ತರಪದಯೋಶ್ಚ** || ೭-೨-೯೮ ||

**ಮಪರ್ಯಂತಯೋರೇತಯೋರೇಕಾರ್ಥವಾಚಿನೋಸ್ತ್ವಮೌ ಸ್ತಃ ಪ್ರತ್ಯಯೇ ಉತ್ತರಪದೇ ಚ ಪರತಃ | ತ್ವದೀಯಃ | ಮದೀಯಃ | ತ್ವತ್ಪುತ್ರಃ | ಮತ್ಪುತ್ರಃ ||**

ಪ್ರತ್ಯಯೋತ್ತರಪದಯೋಃ, ಚ || ದ್ವಿಪದ ಸೂತ್ರ. 'ಮಪರ್ಯಂತಸ್ಯ' ಅಧಿಕಾರ. 'ತ್ವಮಾವೇಕವಚನೇ' ಸೂತ್ರವೂ, 'ಯುಷ್ಮದಸ್ಮದೋರನಾದೇಶೇ' ಸೂತ್ರದಿಂದ 'ಯುಷ್ಮದಸ್ಮದೋಃ' ಪದವೂ ಅನುವೃತ್ತವಾಗುತ್ತದೆ. 'ಏಕವಚನೇ' ಪ್ರಕೃತಿಗೇ ವಿಶೇಷಣ. ಪ್ರತ್ಯಯಶ್ಚ ಉತ್ತರಪದಂ ಚ ಪ್ರತ್ಯಯೋತ್ತರಪದೇ. ತಯೋಃ | **ಸೂತ್ರಾರ್ಥ**—ಏಕತ್ವವಿಶಿಷ್ಟಾರ್ಥಪ್ರತಿಪಾದಕಗಳಾದ ಯುಷ್ಮದ್, ಅಸ್ಮದ್ ಶಬ್ದಗಳ ಮಪರ್ಯಂತಕ್ಕೆ (ಯುಷ್ಮ್, ಅಸ್ಮ್) ತ್ವ, ಮ ಆದೇಶಗಳು, ಪ್ರತ್ಯಯ ಅಥವಾ ಉತ್ತರಪದ ಪರವಾದಾಗ ಬರುತ್ತವೆ. ಪ್ರಕೃತ ಛಪ್ರತ್ಯಯ ಪರವಾದುದರಿಂದ ಮಪರ್ಯಂತಕ್ಕೆ ತ್ವ ಆದೇಶ ಬಂದರೆ ತ್ವ + ಅದ್ + ಈಯ = ತ್ವದೀಯಃ ಎಂದಾಗುತ್ತದೆ. ಮಮ ಅಯುಮ್. ಮ ಆದೇಶ ಬಂದರೆ ಮ + ಅದ್ + ಈಯ = ಮದೀಯಃ | ಎರಡು ರೂಪಗಳಲ್ಲಿಯೂ 'ಅತೋ ಗುಣೇ' ಸೂತ್ರದಿಂದ ಪರರೂಪ ಬಂದಿದೆ. ಸೂತ್ರದಲ್ಲಿ ಉತ್ತರಪದ ಪರವಾದಾಗಲೂ ಆದೇಶ ಹೇಳಿರುವುದರಿಂದ ಅದಕ್ಕೆ ಉದಾಹರಣೆ ತೋರಿಸುತ್ತಾನೆ. ತವ + ಪುತ್ರಃ | ಷಷ್ಠೀ ತತ್ಪುರುಷ. ಯುಷ್ಮದ್ + ಙಸ್ + ಪುತ್ರ + ಸು. ಮಪರ್ಯಂತಕ್ಕೆ ತ್ವಾದೇಶ. ತ್ವ + ಅದ್ + ಪುತ್ರ. ಪರರೂಪ. 'ಖರಿ ಚ' ಚರ್ತ್ವ. ತ್ವತ್ಪುತ್ರಃ | ಹೀಗೆಯೇ ಮಮ + ಪುತ್ರಃ = ಮತ್ಪುತ್ರಃ ಎಂದಾಗುತ್ತದೆ.

ಶೇಷಾರ್ಥದಲ್ಲಿ ಮಪ್ರತ್ಯಯ ಹೇಳುವ ಸೂತ್ರ.

೧೦೮೬. **ಮಧ್ಯಾನ್ಮಃ** || ೪-೩-೮ || **ಮಧ್ಯಮಃ** ||

ಮಧ್ಯಾತ್, ಮಃ || ಮಧ್ಯ ಶಬ್ದದಮೇಲೆ ಜಾತಾದ್ಯರ್ಥದಲ್ಲಿ ಮಪ್ರತ್ಯಯ ಬರುತ್ತದೆ. ಮಧ್ಯೇ ಭವಃ | ಮಧ್ಯದಲ್ಲಿ ಇರುವವನು. ಮಧ್ಯ + ಙಿ + ಮ = ಮಧ್ಯಮಃ |

ಶೇಷಾರ್ಥದಲ್ಲಿ ಠಞ್ ಹೇಳುವ ಸೂತ್ರ.

**೧೦೮೭. ಕಾಲಾಟ್ಠಞ್ ॥ ೪-೩-೧೧ ॥**

**ಕಾಲವಾಚಿಭ್ಯಷ್ಠಞ್ ಸ್ಯಾತ್ । ಕಾಲಿಕಮ್ । ಮಾಸಿಕಮ್ । ಸಾಂವತ್ಸರಿಕಮ್ ।**

**ವಾ ॥ (ಅವ್ಯಯಾನಾಂ ಭಮಾತ್ರೇ ಟಿಲೋಪಃ)**

**ಸಾಯಮ್ಪ್ರಾತಿಕಃ । ಪೌನಃಪುನಿಕಃ ॥**

ಕಾಲಾತ್, ಠಞ್ ॥ ದ್ವಿಪದ ಸೂತ್ರ. ಇಲ್ಲಿ ಕಾಲಪದದಿಂದ ಸ್ವರೂಪವಲ್ಲದೆ ಕಾಲವಿಶೇಷವಾಚಕಗಳಾದ ಎಲ್ಲಾ ಪದಗಳನ್ನೂ ತೆಗೆದುಕೊಳ್ಳಬೇಕೆಂದು ಭಾಷ್ಯದಲ್ಲಿ ಹೇಳಿದೆ. **ಸೂತ್ರಾರ್ಥ**—ಕಾಲವಾಚಕಶಬ್ದಗಳ ಮೇಲೆ ಜಾತಾದ್ಯರ್ಥದಲ್ಲಿ ಠಞ್ ಪ್ರತ್ಯಯು ಬರುತ್ತದೆ. ಕಾಲೇ ಜಾತಮ್ । ಕಾಲ + ಠಞ್. 'ಠಸ್ಯೇಕಃ' ಸೂತ್ರದಿಂದ ಇಕಾದೇಶ. 'ಯಸ್ಯೇತಿ ಚ' ಕಾಲಿಕಮ್. ಮಾಸೇ ಜಾತಮ್. ಮಾಸಿಕಮ್= ತಿಂಗಳಲ್ಲಿ ಆದದ್ದು. ಸಂವತ್ಸರೇ ಜಾತಮ್. ಆದಿವೃದ್ಧಿ. ಸಾಂವತ್ಸರಿಕಮ್=ವರ್ಷದಲ್ಲಿ ಆಗುವುದು. ಸಾಯಂಪ್ರಾತರ್ ಕಾಲವಾಚಕಪದ. ಇದಕ್ಕೂ ಜಾತಾದ್ಯರ್ಥದಲ್ಲಿ ಠಞ್ ಬಂದಾಗ ವಾರ್ತಿಕಕಾರರು ಟಿಲೋಪ ಹೇಳುತ್ತಾರೆ. ಅವ್ಯಯಗಳಿಗೆ ಕೇವಲ ಭಸಂಜ್ಞಾ ಇರುವಾಗಲೇ ಟಿಲೋಪ ಬರುತ್ತದೆ. ಸಾಯಂಪ್ರಾತರ್ + ಇಕ ಎಂದಿರುವಾಗ 'ಯಚಿ ಭಮ್' ಸೂತ್ರದಿಂದ ಭಸಂಜ್ಞಾ ಇರುವುದರಿಂದ ಟಿಲೋಪ (ಅರ್) ಬಂದರೆ ಸಾಯಂಪ್ರಾತ್ + ಇಕ=ಸಾಯಂಪ್ರಾತಿಕಃ=ಬೆಳಗ್ಗೆ ಸಾಯಂಕಾಲ ಆಗುವುದು. ಪುನಃಪುನಃ ಜಾತಃ । ಪುನಃಪುನರ್ + ಠ. ಪುನಃಪುನರ್ + ಇಕ. ಹಿಂದಿನಂತೆ ಟಿಲೋಪ. ಞಿತ್ತಾದುದರಿಂದ ಆದಿವೃದ್ಧಿ. ಪೌನಃಪುನಿಕಃ=ಮತ್ತೆ ಮತ್ತೆ ಆಗುವುದು.

ಜಾತಾದ್ಯರ್ಥದಲ್ಲಿ ಏಣ್ಯ ಪ್ರತ್ಯಯು ಹೇಳುವ ಸೂತ್ರ.

೧೦೮೮. **ಪ್ರಾವೃಷ ಏಣ್ಯಃ ॥ ೪-೩-೧೭ ॥ ಪ್ರಾವೃಷೇಣ್ಯಃ ॥**

ದ್ವಿಪದ ಸೂತ್ರ. ಪ್ರಾವೃಟ್ ಶಬ್ದಕ್ಕೆ ಜಾತಾದ್ಯರ್ಥದಲ್ಲಿ ಏಣ್ಯ ಪ್ರತ್ಯಯ ಬರುತ್ತದೆ. ಇದೂ ಕಾಲವಾಚಕವಾದುದರಿಂದ ಠಞ್ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಹೇಳಿದೆ. ಪ್ರಾವೃಷಿ ಭವಃ । ಪ್ರಾವೃಷ್ + ಙಿ + ಏಣ್ಯ. ಸುಲೋಪ. ಪ್ರಾವೃಷೇಣ್ಯಃ=ಮಳೆಗಾಲದಲ್ಲಿರುವುದು. ಮಳೆಗಾಲದಲ್ಲಿ ಹುಟ್ಟಿದ್ದು ಎಂಬರ್ಥದಲ್ಲಿ ಏಣ್ಯಕ್ಕೆ ಅಪವಾದವಾಗಿ ಠಪ್ ಪ್ರತ್ಯಯು ಮುಂದೆ ಹೇಳುತ್ತಾನೆ.

ಶೇಷಾರ್ಥದಲ್ಲಿ ಟ್ಯು, ಟ್ಯುಲ್ ಪ್ರತ್ಯಯ ಹೇಳುವ ಸೂತ್ರ.

೧೦೪೯. ಸಾಯಂಚಿರಂಪ್ರಾಹ್ಣೇಪ್ರಗೇಽವ್ಯಯೇಭ್ಯಷ್ಟ್ಯುಟ್ಯುಲೌ ತುಟ್ ಚ ॥ ೪-೩-೨೩ ॥

ಸಾಯಮಿತ್ಯಾದಿಭ್ಯಶ್ಚತುರ್ಭ್ಯೋಽವ್ಯಯೇಭ್ಯಶ್ಚ ಕಾಲವಾಚಿಭ್ಯಃ ಟ್ಯುಟ್ಯುಲೌ ಸ್ತಸ್ತಯೋಸ್ತುಟ್ ಚ । ಸಾಯಂತನಮ್ । ಚಿರಂತನಮ್ । ಪ್ರಾಹ್ಣೇಪ್ರಗೇ ಅನಯೋರೇದಂತತ್ವಂ ನಿಪಾತ್ಯತೇ । ಪ್ರಾಹ್ಣೇತನಮ್ । ಪ್ರಗೇತನಮ್ । ದೋಷಾತನಮ್ ॥

ಸಾಯಂಚಿರಂಪ್ರಾಹ್ಣೇಪ್ರಗೇಽವ್ಯಯೇಭ್ಯಃ, ಟ್ಯುಟ್ಯುಲೌ, ತುಟ್, ಚ ॥ ನಾಲ್ಕು ಪದಗಳುಳ್ಳ ಸೂತ್ರ. ಸೂತ್ರಾರ್ಥ—ಕಾಲವಾಚಕಗಳಾದ ಸಾಯಂ, ಚಿರಂ, ಪ್ರಾಹ್ಣೇ, ಪ್ರಗೇ ಈ ನಾಲ್ಕು ಶಬ್ದಗಳಿಗೂ, ಅವ್ಯಯಗಳಿಗೂ ಜಾತಾದ್ಯರ್ಥದಲ್ಲಿ ಟ್ಯು, ಟ್ಯುಲ್ ಪ್ರತ್ಯಯಗಳೂ ಅವುಗಳಿಗೆ ತುಟ್ ಆಗಮವೂ ಬರುತ್ತವೆ. ಟ್ಯು, ಟ್ಯುಲ್‌ಗಳಲ್ಲಿ 'ಚುಟೂ' ಸೂತ್ರದಿಂದ ಟಕಾರ ಇತ್ತಾಗಿ ಲೋಪವಾದಾಗ ಯು ಒಂದೇ ಉಳಿದರೂ ಸ್ವರದಲ್ಲಿ ವ್ಯತ್ಯಾಸವಿದೆ. ಸಾಯೇ ಭವಮ್ । ಚಿರೇ ಭವಮ್ । ಸಾಯ+ಯು. 'ಯುವೋರನಾಕೌ' ಸೂತ್ರದಿಂದ ಯುವಿಗೆ ಅನಾದೇಶ. ಸಾಯ +ಅನ. ಅನಕ್ಕೆ ತುಟಾಗಮ. ಟಿತ್ತಾದುದರಿಂದ ಆದ್ಯವಯವವಾಗಿ ಬರುತ್ತದೆ. ಸಾಯ+ತನ. ಹೀಗೆ ಚಿರ+ತನ ಎಂದು ರೂಪವಾದಾಗ ಸಾಯ, ಚಿರ ಶಬ್ದಗಳಿಗೆ ಮಾಂತತ್ವವು ನಿಪಾತಿತವಾಗಿದೆ. ಸಾಯಂತನಮ್ । ಚಿರಂತನಮ್ । ಸಾಯಮ್, ಚಿರಮ್ ಎಂಬ ಮಾಂತ ಅವ್ಯಯಗಳಿಗೆ ಸೂತ್ರದಲ್ಲಿರುವ ಅವ್ಯಯಪದದಿಂದಲೇ ಸಿದ್ಧವಾಗುವುದರಿಂದ ಸೂತ್ರದಲ್ಲಿ ಸಾಯ, ಚಿರವೆಂಬ ಅದಂತಪದಗಳನ್ನು ತೆಗೆದು ಕೊಳ್ಳಬೇಕು. ಪ್ರಾಹ್ಣೇ ಜಾತಮ್ । ಪ್ರಗೇ ಜಾತಮ್ । ಪ್ರಾಹ್ಣ+ತನ. ಪ್ರಗ+ತನ. ಇಲ್ಲಿ ಸೂತ್ರದಿಂದ ಏದಂತತ್ವವು ನಿಪಾತಿತವಾಗಿದೆ. ಪ್ರಾಹ್ಣೇತನಮ್=ಪೂರ್ವಾಹ್ಣದಲ್ಲಿ ಹುಟ್ಟಿರುವುದು. ಪ್ರಗೇತನಮ್=ಪ್ರಾತಃಕಾಲದಲ್ಲಿ ಹುಟ್ಟಿರುವುದು. ಅವ್ಯಯಕ್ಕೆ ಉದಾ.—ದೋಷಾ ಜಾತಮ್ । ದೋಷಾ+ಯು. ದೋಷಾ+ತ್ +ಅನ. ದೋಷಾತನಮ್=ರಾತ್ರಿ ಹುಟ್ಟಿರುವುದು. ದೋಷಾ ರಾತ್ರ್ಯರ್ಥಕ ಆಕಾರಾಂತ ಅವ್ಯಯ. ಹೀಗೆ ಆಯಾಯ ಪ್ರಕೃತಿವಿಶೇಷದ ಮೇಲೆ ಆಯಾಯ ಪ್ರತ್ಯಯಗಳನ್ನು ಮೊದಲು ಹೇಳಿ ಇನ್ನುಮುಂದೆ ಅರ್ಥವನ್ನು ವಿವರಿಸುತ್ತಾನೆ. ಮೊದಲು ಪ್ರತ್ಯಯ ಹೇಳಿ ಆಮೇಲೆ ಅರ್ಥ ಹೇಳಿರುವುದರಿಂದ ಮುಂದೆ ಹೇಳುವ ಎಲ್ಲಾ ಅರ್ಥಗಳಲ್ಲಿಯೂ ಹಿಂದೆ ಹೇಳಿದ ಎಲ್ಲಾ ಪ್ರತ್ಯಯಗಳು ಬರುತ್ತವೆಯೆಂದು ವಿಶೇಷಾರ್ಥ ಬೋಧಿತವಾಗುತ್ತದೆ.

ಜಾತಾರ್ಥದಲ್ಲಿ ಪ್ರತ್ಯಯ ಹೇಳುವ ಸೂತ್ರ.

೧೮೯೦. ತತ್ರ ಜಾತಃ ॥ ೪-೩-೨೫ ॥

**ಸಪ್ತಮೀಸಮರ್ಥಾಜ್ಜಾತ ಇತ್ಯರ್ಥೇಽಣಾದಯೋ ಘಾದಯಶ್ಚ ಸ್ಯುಃ। ಸ್ರುಘ್ನೇ ಜಾತಃ ಸ್ರೌಘ್ನಃ। ಉತ್ಸೇ ಜಾತಃ ಔತ್ಸಃ। ರಾಷ್ಟ್ರೇ ಜಾತೋ ರಾಷ್ಟ್ರಿಯಃ। ಅವಾರಪಾರೇ ಜಾತಃ—ಅವಾರಪಾರೀಣಃ ; ಇತ್ಯಾದಿ ॥**

ದ್ವಿಪದ ಸೂತ್ರ. ತತ್ರ ಸಪ್ತಮ್ಯಂತದ ಅನುಕರಣ. ಇದು ಪ್ರಥಮೋಚ್ಚರಿತ ವಾದುದರಿಂದ ಸಪ್ತಮ್ಯಂತದ ಮೇಲೆ ಅಣಾದಿಪ್ರತ್ಯಯವೆಂದು ತಿಳಿಯುತ್ತದೆ. ವಿಶೇಷ ಪ್ರತ್ಯಯ ಹೇಳದಿರುವಲ್ಲಿ ಅಧಿಕಾರದಿಂದ ಲಬ್ಧವಾದ ಅಣ್ ಪ್ರತ್ಯಯವೆಂದು ತಿಳಿಯಬೇಕು. **ಸೂತ್ರಾರ್ಥ**—ಪ್ರಾತಿಪದಿಕಪ್ರಕೃತಿಕ ಸಪ್ತಮ್ಯಂತವಾದ ಶಬ್ದದ ಮೇಲೆ ಜಾತ ಎಂಬರ್ಥದಲ್ಲಿ ಅಣಾದಿಪ್ರತ್ಯಯಗಳೂ ಹಿಂದೆ ಹೇಳಿದ ಘಾದಿಪ್ರತ್ಯಯ ಗಳೂ ಬರುತ್ತವೆ. ಸ್ರುಘ್ನೇ ಜಾತಃ। ಸ್ರುಘ್ನ+ಙಿ+ಅಣ್. ಸುಲೋಪ. ಆದಿ ವೃದ್ಧಿ, ಅಲೋಪ. ಸ್ರೌಘ್ನಃ=ಸ್ರುಘ್ನವೆಂಬ (ಪಾಟ್ನಾ) ದೇಶದಲ್ಲಿ ಹುಟ್ಟಿದವನು. ಹೀಗೇ ಔತ್ಸಃ=ಉತ್ಸದೇಶದಲ್ಲಿ ಹುಟ್ಟಿದವನು. ಹಿಂದೆ ಹೇಳಿದ ಪ್ರತ್ಯಯಗಳಿಗೆ ಉದಾಹರಣೆ: ರಾಷ್ಟ್ರೇ ಜಾತಃ। 'ರಾಷ್ಟ್ರಾವಾರ—' ಸೂತ್ರದಿಂದ ಘಪ್ರತ್ಯಯ. ರಾಷ್ಟ್ರಿಯಃ। ಪ್ರಕ್ರಿಯೆ ಹಿಂದೆ ವಿವೃತವಾಗಿದೆ. ಅವಾರಪಾರೇ ಜಾತಃ ಅವಾರ ಪಾರೀಣಃ। ಖಞ್ ಪ್ರತ್ಯಯ ಬಂದಿದೆ. ಹೀಗೇ ಇತರ ಪ್ರತ್ಯಯಗಳನ್ನೂ ತಿಳಿಯ ಬೇಕು.

ಜಾತಾರ್ಥದಲ್ಲಿ ಠಪ್ ಹೇಳುವ ಸೂತ್ರ.

೧೮೯೧. ಪ್ರಾವೃಷಷ್ಠಪ್ ॥ ೪-೩-೨೬ ॥

**ಏಣ್ಯಾಪವಾದಃ। ಪ್ರಾವೃಷಿಕಃ ॥**

ಪ್ರಾವೃಷಃ, ಠಪ್ ॥ ದ್ವಿಪದ ಸೂತ್ರ. ಜಾತಾರ್ಥದಲ್ಲಿ ಪ್ರಾವೃಟ್ ಶಬ್ದ ಪ್ರಕೃತಿಕ ಸಪ್ತಮ್ಯಂತದ ಮೇಲೆ ಠಪ್ ಪ್ರತ್ಯಯ ಬರುತ್ತದೆ. 'ಠಸ್ಯೇಕಃ' ಸೂತ್ರ ದಿಂದ ಅದಕ್ಕೆ ಇಕಾದೇಶ. ಪ್ರಾವೃಷಿ ಜಾತಃ=ಮಳೆಗಾಲದಲ್ಲಿ ಹುಟ್ಟಿರುವುದು. ಪ್ರಾವೃಷ್+ಇಕ. ಪ್ರಾವೃಷಿಕಃ। ಹಿಂದೆ ಪ್ರಾವೃಷ್ ಶಬ್ದಕ್ಕೆ ಏಣ್ಯ ಪ್ರತ್ಯಯ ಹೇಳಿದ್ದರೂ ಜಾತಾರ್ಥದಲ್ಲಿ ಅದನ್ನು ಬಾಧಿಸಿ ಠಪ್ ಮಾತ್ರ ಬರುತ್ತದೆ.

ಪ್ರಾಯಭವಾರ್ಥದಲ್ಲಿ ಅಣಾದಿಗಳನ್ನು ಹೇಳುವ ಸೂತ್ರ.

೧೮೯೨. ಪ್ರಾಯಭವಃ ॥ ೪-೩-೩೯ ॥

**ತತ್ರೇತ್ಯೇವ। ಸ್ರುಘ್ನೇ ಪ್ರಾಯೇಣ ಬಾಹುಲ್ಯೇನ ಭವತಿ ಸ್ರೌಘ್ನಃ ॥**

ಏಕಪದ ಸೂತ್ರ. 'ತತ್ರ' ಅನುವೃತ್ತಿ. ಸಪ್ತಮ್ಯಂತ ಸಮರ್ಥ ಶಬ್ದದ ಮೇಲೆ ಪ್ರಾಯಭವ (ಹೆಚ್ಚಾಗಿ ಇರುವುದು) ಎಂಬರ್ಥದಲ್ಲಿ ಅಣಾದಿಗಳೂ ಘಾದಿಗಳೂ ಬರುತ್ತವೆ. ಸ್ರುಘ್ನೇ ಪ್ರಾಯೇಣ ಬಾಹುಲ್ಯೇನ ಭವತಿ। ಸ್ರುಘ್ನದೇಶದಲ್ಲಿ ಹೆಚ್ಚಾಗಿ ಇರುತ್ತಾನೆ. ಸ್ರುಘ್ನ+ಅಣ್. ಆದಿವೃದ್ಧ್ಯಾದಿ. ಸ್ರೌಘ್ನಃ।

ಸಂಭೂತಾರ್ಥದಲ್ಲಿ ಅಣಾದಿಗಳನ್ನು ಹೇಳುವ ಸೂತ್ರ.

**೧೧೯೩. ಸಮ್ಭೂತೇ ॥ ೪-೩-೪೧ ॥**

**ಸ್ರುಘ್ನೇ ಸಂಭವತಿ ಸ್ರೌಘ್ನಃ ॥**

ಏಕಪದ ಸೂತ್ರ. ಸಮ್ ಉಪಸರ್ಗಪೂರ್ವಕ ಭೂಧಾತುವಿಗೆ ಭವಾರ್ಥದಲ್ಲಿ ಕ್ತಪ್ರತ್ಯಯ ಬಂದು ಸಂಭೂತ ಶಬ್ದವಾಗಿದೆ. ಸಂಭಾವನೆ ಅಥವಾ ಸೇರುವಿಕೆ ಅರ್ಥ. **ಸೂತ್ರಾರ್ಥ**—ಸಪ್ತಮ್ಯಂತದ ಮೇಲೆ ಸಂಭಾವನಾರ್ಥದಲ್ಲಿ ಅಣಾದಿಪ್ರತ್ಯಯಗಳು ಬರುತ್ತವೆ. ಲಾಘವಕ್ಕೋಸ್ಕರ ಒಂದೇ ಶಬ್ದವನ್ನು ತೆಗೆದುಕೊಂಡು ರೂಪವೈಚಿತ್ರ್ಯ ತೋರಿಸುತ್ತಾನೆ. ಸ್ರುಘ್ನೇ ಸಂಭೂತಃ। ಅಣ್. ಸ್ರೌಘ್ನಃ। ಸಾಮಾನ್ಯ ಹೆಚ್ಚು ಪಕ್ಷ ಸ್ರುಘ್ನ ದೇಶದಲ್ಲಿರುವವನು.

ಸಂಭೂತಾರ್ಥದಲ್ಲಿ ಢಞ್ ಹೇಳುವ ಸೂತ್ರ.

**೧೧೯೪. ಕೋಶಾಡ್ಢಞ್ ॥ ೪-೩-೪೨ ॥ ಕೌಶೇಯಂ ವಸ್ತ್ರಮ್ ॥**

ಕೋಶಾತ್, ಢಞ್ ॥ ದ್ವಿಪದ ಸೂತ್ರ. ಕೋಶ ಶಬ್ದವೇ ಪ್ರಕೃತಿಯಾಗಿರುವ ಸಪ್ತಮ್ಯಂತದಮೇಲೆ ಸಂಭೂತಾರ್ಥದಲ್ಲಿ ಢಞ್ ಪ್ರತ್ಯಯ ಬರುತ್ತದೆ. ಕೋಶೇ ಭವಮ್। ಕೋಶ+ಢ. 'ಆಯನೇಯೀ—' ಸೂತ್ರದಿಂದ ಢಕಾರಕ್ಕೆ ಏಯಾದೇಶ. ಞಿತ್ತಾದುದರಿಂದ ಆದಿವೃದ್ಧಿ. ಕೌಶ+ಏಯ. 'ಯಸ್ಯೇತಿ ಚ' ಕೌಶೇಯಮ್= ರೇಷ್ಮೆವಸ್ತ್ರ.

ಭವಾರ್ಥದಲ್ಲಿ ಅಣಾದಿಗಳನ್ನು ಹೇಳುವ ಸೂತ್ರ.

**೧೧೯೫. ತತ್ರ ಭವಃ ॥ ೪-೩-೫೩ ॥**

**ಸ್ರುಘ್ನೇ ಭವಃ ಸ್ರೌಘ್ನಃ। ಔತ್ಸಃ। ರಾಷ್ಟ್ರಿಯಃ ॥**

ದ್ವಿಪದ ಸೂತ್ರ. ಸಪ್ತಮ್ಯಂತ ಸಮರ್ಥ ಶಬ್ದದಮೇಲೆ ಭವಃ (ಇರುವುದು, ಆಗುವುದು) ಎಂಬರ್ಥದಲ್ಲಿ ಅಣಾದಿಗಳೂ ಘಾದಿಗಳೂ ಬರುತ್ತವೆ. ಜಾತವೆಂದರೆ ಉತ್ಪನ್ನವಾದುದೆಂದೂ ಭವವೆಂದರೆ ಇರುವುದೆಂದೂ ಭಿನ್ನಾರ್ಥವಿರುವುದರಿಂದ ಪೌನರುಕ್ತ್ಯವಿಲ್ಲ. ಅರ್ಥವ್ಯತ್ಯಾಸವಲ್ಲದೆ ಪ್ರತ್ಯಯಗಳು ಹಿಂದಿನವುಗಳೇ ಆದುದರಿಂದ ರೂಪವ್ಯತ್ಯಾಸವಿಲ್ಲ. ಸ್ರುಘ್ನೇ ಭವಃ, ಉತ್ಸೇ ಭವಃ, ರಾಷ್ಟ್ರೇ ಭವಃ—ಸ್ರೌಘ್ನಃ, ಔತ್ಸಃ, ರಾಷ್ಟ್ರಿಯಃ ॥

ಭವಾರ್ಥದಲ್ಲಿ ಯತ್ ಪ್ರತ್ಯಯ ಹೇಳುವ ಸೂತ್ರ.

**೧೯೬. ದಿಗಾದಿಭ್ಯೋ ಯತ್ ॥ ೪-೩-೫೪ ॥ ದಿಶ್ಯಮ್ । ವರ್ಗ್ಯಮ್ ॥**

ದ್ವಿಪದ ಸೂತ್ರ. ದಿಗಾದಿಶಬ್ದಗಳೇ ಪ್ರಕೃತಿಯಾಗಿರುವ ಸಪ್ತಮ್ಯಂತದ ಮೇಲೆ ಭವಾರ್ಥದಲ್ಲಿ ಯತ್ ಪ್ರತ್ಯಯ ಬರುತ್ತದೆ. ದಿಶಿ ಭವಮ್ । ದಿಶ್ + ಙಿ + ಯತ್. ದಿಶ್ಯಮ್ = ದಿಕ್ಕಿನಲ್ಲಿರುವುದು. ವರ್ಗಶಬ್ದ ದಿಗಾದಿಯಲ್ಲಿ ಪಠಿತವಾಗಿದೆ. ವರ್ಗೇ ಭವಮ್ । ವರ್ಗ + ಯ. 'ಯಸ್ಯೇತಿ ಚ' ಅಲೋಪ. ವರ್ಗ್ಯಮ್ = ವರ್ಗದಲ್ಲಿರುವುದು.

ಅವಯವದ ಮೇಲೆ ಯತ್ ಹೇಳುವ ಸೂತ್ರ.

**೧೯೭. ಶರೀರಾವಯವಾಚ್ಚ ॥ ೪-೩-೫೫ ॥**

**ದನ್ತ್ಯಮ್ । ಕಣ್ಠ್ಯಮ್ ।**

**ವಾ ॥ (ಅಧ್ಯಾತ್ಮಾದೇಷ್ಠಞಿಷ್ಯತೇ) ಅಧ್ಯಾತ್ಮಂ ಭವಮಾಧ್ಯಾತ್ಮಿಕಮ್ ॥**

ಶರೀರಾವಯವಾತ್, ಚ ॥ ದ್ವಿಪದ ಸೂತ್ರ. ಶರೀರದ ಅವಯವವಾಚಕಗಳಾದ ಸಪ್ತಮ್ಯಂತ ಶಬ್ದದ ಮೇಲೆ ಭವಾರ್ಥದಲ್ಲಿ ಯತ್ ಪ್ರತ್ಯಯ ಬರುತ್ತದೆ. ಚಕಾರದಿಂದ 'ಯತ್' ಹಿಂದಿನ ಸೂತ್ರದಿಂದ ಸಮುಚ್ಚಿತವಾಗುತ್ತದೆ. ದಂತೇ ಭವಮ್ । ದನ್ತ + ಯ. 'ಯಸ್ಯೇತಿ ಚ' ಅಲೋಪ. ದನ್ತ್ಯಮ್ = ಹಲ್ಲಿನಲ್ಲಿ ಹುಟ್ಟಿದ್ದು. ಕಂಠೇ ಭವಮ್ ಕಂಠ್ಯಮ್ = ಕಂಠದಲ್ಲಿರುವುದು.

ಅಧ್ಯಾತ್ಮಾದಿಗಣಪಠಿತ ಶಬ್ದಗಳಿಗೆ ಭವಾರ್ಥದಲ್ಲಿ ಠಞ್ ಪ್ರತ್ಯಯ ಬರುತ್ತದೆ. ಅಧ್ಯಾತ್ಮಂ ಭವಮ್ । ಅಧ್ಯಾತ್ಮ + ಠ. ಠಕ್ಕೆ ಇಕಾದೇಶ. ಞಿತ್ತಾದುದರಿಂದ ಆದಿವೃದ್ಧಿ. ಅಲೋಪ. ಆಧ್ಯಾತ್ಮಿಕಮ್ = ಆತ್ಮನಲ್ಲಿರುವುದು. ಆತ್ಮನಿ ಇತಿ ಅಧ್ಯಾತ್ಮಮ್ । ವಿಭಕ್ತ್ಯರ್ಥದಲ್ಲಿ ಅವ್ಯಯೀಭಾವಸಮಾಸ ಬಂದಿದೆ. ಅಧ್ಯಾತ್ಮಾದಿಗಣದಲ್ಲಿ ಹೇಳಿದ ಕೆಲವು ಪದಗಳಿಗೆ ಠಞ್ ಬಂದಾಗ ಉಭಯಪದವೃದ್ಧಿ ಹೇಳುತ್ತಾನೆ.

ಉಭಯಪದವೃದ್ಧಿ ಹೇಳುವ ಸೂತ್ರ.

**೧೯೮. ಅನುಶತಿಕಾದೀನಾಂ ಚ ॥ ೭-೩-೨೦ ॥**

**ಏಷಾಮುಭಯಪದವೃದ್ಧಿರ್ಞಿತಿ ಣಿತಿ ಕಿತಿ ಚ । ಆಧಿದೈವಿಕಮ್ । ಆಧಿಭೌತಿಕಮ್ । ಐಹಲೌಕಿಕಮ್ । ಪಾರಲೌಕಿಕಮ್ । ಆಕೃತಿಗಣೋऽಯಮ್ ॥**

ದ್ವಿಪದ ಸೂತ್ರ. 'ಮೃಜೇರ್ವೃದ್ಧಿಃ' ಸೂತ್ರದಿಂದ 'ವೃದ್ಧಿಃ', 'ಹೃದ್ಭಗಸಿಂಧ್ವಂತೇ—' ಸೂತ್ರದಿಂದ 'ಪೂರ್ವಪದಸ್ಯ ಚ' ಅನುವೃತ್ತಿ. 'ತದ್ಧಿತೇಷು ಅಚಾಮಾದೇಃ' ಸೂತ್ರ ಅನುವೃತ್ತವಾಗುತ್ತದೆ. 'ಉತ್ತರಪದಸ್ಯ' ಅಧಿಕಾರ.

'ಞ್ಣಿತಿ', 'ಕಿತಿ' ನಿಮಿತ್ತವೂ ಹಿಂದಿನಿಂದ ಅನುವೃತ್ತವಾಗುತ್ತದೆ. **ಸೂತ್ರಾರ್ಥ**—ಅನುಶತಿಕಾದಿಗಣಪಠಿತಗಳಾದ ಪದಗಳಿಗೆ ಞಿತ್, ಣಿತ್, ಕಿತ್ತಾದ ಪ್ರತ್ಯಯಗಳು ಪರದಲ್ಲಿರುವಾಗ ಪೂರ್ವೋತ್ತರಪದಗಳ ಆದಿಯ ಅಚಿಗೆ ವೃದ್ಧಿ ಬರುತ್ತದೆ. ಅಲ್ಲಿ ಸಮಾಸಪದಗಳೇ ಪಠಿತವಾದುದರಿಂದ ಎರಡು ಪದಗಳ ಆದಿಗೆ ವೃದ್ಧಿ. ದೇವೇಷು ಅಧಿದೇವಮ್। ಅವ್ಯಯೀಭಾವಸಮಾಸ. ಅಧಿದೇವಂ ಭವಮ್. ಅಧಿದೇವ+ಠ. ಆದಿ ಅಕಾರಕ್ಕೆ ಒಂದಕ್ಕೇ ವೃದ್ಧಿ ಪ್ರಾಪ್ತವಾದರೆ ಇದು ಅನುಶತಿಕಾದಿಗಣದಲ್ಲಿ ಸೇರಿರುವುದರಿಂದ ಎರಡು ಪದಗಳ ಆದಿಗೂ ವೃದ್ಧಿ. (ಅಧಿ, ದೇವ ಎರಡು ಪದಗಳು). ಆಧಿದೈವ+ಇಕ. 'ಯಸ್ಯೇತಿ ಚ' ಆಧಿದೈವಿಕಮ್. ಹೀಗೆಯೇ ಭೂತೇಷು ಅಧಿಭೂತಮ್। ಅಧಿಭೂತಂ ಭವಮ್। ಆಧಿಭೌತ+ಇಕ. ಅಲೋಪ. ಆಧಿಭೌತಿಕಮ್=ಭೂತಸಂಬಂಧವಾದುದು. ಇಹಲೋಕೇ ಭವಮ್. ಇಹಲೋಕ+ಇಕ. ಐಹಲೌಕಿಕಮ್. ಪರಲೋಕೇ ಭವಮ್. ಪರಲೋಕ+ಇಕ. ಪಾರಲೌಕಿಕಮ್. ಅನುಶತಿಕಾದಿ ಆಕೃತಿಗಣ. ಇದರಂತೆ ಉಭಯಪದವೃದ್ಧಿಹೊಂದಿರುವ ಪದಗಳೂ ಈ ಗಣದಲ್ಲಿ ಪಠಿತವಾಗಿವೆಯೆಂದು ಊಹಿಸಬೇಕು. ಈ ಶಬ್ದಗಳಿಗೆ ಅಧ್ಯಾತ್ಮಾದಿ ಗಣದಲ್ಲಿ ಸೇರಿರುವುದರಿಂದ ಠಞ್ ಪ್ರತ್ಯಯವೂ, ಅನುಶತಿಕಾದಿಗಣದಲ್ಲಿ ಸೇರಿರುವುದರಿಂದ ಉಭಯಪದವೃದ್ಧಿಯೂ ಬರುತ್ತದೆಂದು ತಿಳಿಯಬೇಕು.

ಭವಾರ್ಥದಲ್ಲಿ ಛಪ್ರತ್ಯಯ ಹೇಳುವ ಸೂತ್ರ.

**೧೪೯೯. ಜಿಹ್ವಾಮೂಲಾಙ್ಗುಲೇಶ್ಛಃ ॥ ೪-೩-೬೨ ॥**

**ಜಿಹ್ವಾಮೂಲೀಯಮ್। ಅಂಗುಲೀಯಮ್ ॥**

ಜಿಹ್ವಾಮೂಲಾಂಗುಲೇಃ, ಛಃ ॥ ದ್ವಿಪದ ಸೂತ್ರ. ಸಪ್ತಮ್ಯಂತಗಳಾದ ಜಿಹ್ವಾಮೂಲ, ಅಂಗುಲಿ ಶಬ್ದಗಳಮೇಲೆ ಭವಾರ್ಥದಲ್ಲಿ ಛಪ್ರತ್ಯಯ. ಇವು ಶರೀರದ ಅವಯವಗಳಾದುದರಿಂದ 'ಶರೀರಾವಯವಾಚ್ಚ' ಸೂತ್ರದಿಂದ ಯತ್ ಪ್ರಾಪ್ತವಾದರೆ ಅದಕ್ಕೆ ಅಪವಾದ. ಜಿಹ್ವಾಮೂಲೇ ಭವಃ। ಜಿಹ್ವಾಮೂಲ+ಛ. 'ಆಯನೇ—' ಸೂತ್ರದಿಂದ ಈಯಾದೇಶ. 'ಯಸ್ಯೇತಿ ಚ' ಜಿಹ್ವಾಮೂಲೀಯಮ್=ನಾಲಿಗೆಯ ಬುಡದಲ್ಲಿ ಹುಟ್ಟುವುದು. ಅಂಗುಲೌ ಭವಮ್. ಅಂಗುಲಿ+ಛ. ಅಂಗುಲೀಯಮ್=ಉಂಗುರಾದಿ.

ವರ್ಗಾಂತಕ್ಕೆ ಛಪ್ರತ್ಯಯ ಹೇಳುವ ಸೂತ್ರ.

**೧೧೦೦. ವರ್ಗಾನ್ತಾಚ್ಚ ॥ ೪-೩-೬೩ ॥ ಕವರ್ಗೀಯಮ್ ॥**

ವರ್ಗಾಂತಾತ್, ಚ ॥ ದ್ವಿಪದ ಸೂತ್ರ. ಹಿಂದಿನಿಂದ 'ಛಃ' ಅನುವೃತ್ತಿ. ವರ್ಗ ಶಬ್ದ ಅಂತವಾದ ಸಪ್ತಮ್ಯಂತದಮೇಲೆ ಭವಾರ್ಥದಲ್ಲಿ ಛಪ್ರತ್ಯಯ ಬರುತ್ತದೆ.

ಕವರ್ಗೇ ಭವಮ್ । ಕವರ್ಗ+ಛ. ಛಕಾರಕ್ಕೆ ಈಯಾದೇಶ. ಅಲೋಪ. ಕವರ್ಗೀಯಮ್=ಕವರ್ಗದಲ್ಲಿರುವುದು. ಭವಾರ್ಥ ಮುಗಿದಿದೆ.

ಆಗತಾರ್ಥದಲ್ಲಿ ಅಣ್ ಹೇಳುವ ಸೂತ್ರ.

**೧೧೦೧. ತತ ಆಗತಃ ॥ ೪-೩-೭೪ ॥ ಸ್ರುಘ್ನಾದಾಗತಃ ಸ್ರೌಘ್ನಃ ॥**

ದ್ವಿಪದ ಸೂತ್ರ. 'ತತಃ' ಪಂಚಮ್ಯಂತಕ್ಕೆ ಅನುಕರಣವಾದುದರಿಂದ ಇನ್ನು ಮುಂದೆ ಪಂಚಮ್ಯಂತ ಸಮರ್ಥದ ಮೇಲೆ ಪ್ರತ್ಯಯವೆಂದು ತಿಳಿಯಬೇಕು. **ಸೂತ್ರಾರ್ಥ**—ಪ್ರಾತಿಪದಿಕಪ್ರಕೃತಿಕ ಪಂಚಮ್ಯಂತದ ಮೇಲೆ ಆಗತಃ ಬಂದದ್ದು ಎಂಬರ್ಥದಲ್ಲಿ ಅಣಾದಿಘಾದಿಪ್ರತ್ಯಯಗಳು ಬರುತ್ತವೆ. ಸ್ರುಘ್ನಾತ್ ಆಗತಃ । ಅಣ್. ಸ್ರೌಘ್ನಃ=ಸ್ರುಘ್ನದೇಶದಿಂದ ಬಂದವನು.

ಆಗತಾರ್ಥದಲ್ಲಿ ಠಕ್ ಹೇಳುವ ಸೂತ್ರ.

**೧೧೦೨. ಠಗಾಯಸ್ಥಾನೇಭ್ಯಃ ॥ ೪-೩-೭೫ ॥**

**ಶುಲ್ಕಶಾಲಾಯಾ ಆಗತಃ ಶೌಲ್ಕಶಾಲಿಕಃ ॥**

ದ್ವಿಪದ ಸೂತ್ರ. ಸುಂಕಕ್ಕೆ ಆಯವೆಂದು ಹೆಸರು. ಅದು ವಸೂಲುಮಾಡುವ ಸ್ಥಳ ಆಯಸ್ಥಾನ (ಟೋಲ್‌ಗೇಟ್ ಇತ್ಯಾದಿ). **ಸೂತ್ರಾರ್ಥ**—ಆಯಸ್ಥಾನ ವಾಚಕ ಪಂಚಮ್ಯಂತದ ಮೇಲೆ ಆಗತಾರ್ಥದಲ್ಲಿ ಠಕ್ ಪ್ರತ್ಯಯ ಬರುತ್ತದೆ. ಶುಲ್ಕಶಾಲಾಯಾಃ ಆಗತಃ=ಸುಂಕದ ಕಟ್ಟೆಯಿಂದ ಬಂದದ್ದು. ಶುಲ್ಕಶಾಲಾ+ಠ. 'ಠಸ್ಯೇಕಃ' ಸೂತ್ರದಿಂದ ಠಕ್ಕೆ ಇಕಾದೇಶ. ಕಿತ್ತಾದುದರಿಂದ ಆದಿವೃದ್ಧಿ. ಆಕಾರ ಲೋಪ. ಶೌಲ್ಕಶಾಲಿಕಃ ।

ಆಗತಾರ್ಥದಲ್ಲಿ ವುಞ್ ಹೇಳುವ ಸೂತ್ರ.

**೧೧೦೩. ವಿದ್ಯಾಯೋನಿಸಂಬಂಧೇಭ್ಯೋ ವುಞ್ ॥ ೪-೩-೭೭ ॥**

**ಔಪಾಧ್ಯಾಯಕಃ । ಪೈತಾಮಹಕಃ ॥**

ದ್ವಿಪದ ಸೂತ್ರ. ವಿದ್ಯಾಯೋನಿರೂಪದ್ವಂದ್ವದ ಮೇಲೆ ಸಂಬಂಧಪದವಿರುವುದರಿಂದ ಅದಕ್ಕೆ ಪ್ರತ್ಯೇಕಾನ್ವಯ. **ಸೂತ್ರಾರ್ಥ**—ವಿದ್ಯಾಕೃತಸಂಬಂಧವಾಚಕ, ಯೋನಿಕೃತಸಂಬಂಧವಾಚಕ ಪಂಚಮ್ಯಂತದ ಮೇಲೆ ಆಗತಾರ್ಥದಲ್ಲಿ ವುಞ್ ಪ್ರತ್ಯಯ ಬರುತ್ತದೆ. 'ಯುವೋರನಾಕೌ' ಸೂತ್ರದಿಂದ ಅದಕ್ಕೆ ಅಕಾದೇಶ. ವಿದ್ಯಾದಿಂದುಂಟಾದ ಸಂಬಂಧಕ್ಕೆ—ಉಪಾಧ್ಯಾಯಾತ್ ಆಗತಃ । ಉಪಾಧ್ಯಾಯ+ವುಞ್. ಞಿತ್ತಾದುದರಿಂದ ಆದಿವೃದ್ಧಿ. 'ಯಸ್ಯೇತಿ ಚ' ಅಲೋಪ. ಔಪಾ

ಧ್ಯಾಯಕಃ | ಯೋನಿಯಿಂದುಂಟಾದ ಸಂಬಂಧಕ್ಕೆ—ಪಿತಾಮಹಾತ್ ಆಗತಃ | ಪಿತಾಮಹ+ವುಞ್. ಹಿಂದಿನಂತೆ ಆದಿವೃದ್ಧಿ, ಅಲೋಪ. ಪೈತಾಮಹಕಃ |

ಆಗತಾರ್ಥದಲ್ಲಿ ರೂಪ್ಯ ಪ್ರತ್ಯಯ ಹೇಳುವ ಸೂತ್ರ.

**೧೧೧೪. ಹೇತುಮನುಷ್ಯೇಭ್ಯೋಽನ್ಯತರಸ್ಯಾಂ ರೂಪ್ಯಃ || ೪-೩-೮೧ ||**

**ಸಮಾದಾಗತಂ ಸಮರೂಪ್ಯಮ್ | ಪಕ್ಷೇ—ಗಹಾದಿತ್ವಾಚ್ಛಃ | ಸಮೀಯಮ್ | ವಿಷಮೀಯಮ್ | ದೇವದತ್ತರೂಪ್ಯಮ್ | ದೈವದತ್ತಮ್ ||**

ತ್ರಿಪದ ಸೂತ್ರ. ಹೇತುವಾಚಕ, ಮನುಷ್ಯವಾಚಕ ಪಂಚಮ್ಯಂತದಮೇಲೆ ಆಗತಾರ್ಥದಲ್ಲಿ (ಬಂದವನು) ವಿಕಲ್ಪವಾಗಿ ರೂಪ್ಯ ಪ್ರತ್ಯಯ ಬರುತ್ತದೆ. ಹೇತು ವಾಚಕಕ್ಕೆ—ಸಮಾತ್ ಆಗತಮ್ | ಸಮವಾದ ಕಾರಣದಿಂದ ಬಂದದ್ದು. ಸಮ+ರೂಪ್ಯ=ಸಮರೂಪ್ಯಮ್. ವಿಷಮಾತ್ ಆಗತಮ್ ವಿಷಮರೂಪ್ಯಮ್=ವೈಷಮ್ಯದಿಂದ ಪ್ರಾಪ್ತವಾದದ್ದು. ರೂಪ್ಯ ಪ್ರತ್ಯಯ ಬಾರದಿದ್ದರೆ ಈ ಶಬ್ದಗಳು ಗಹಾದಿಗಣದಲ್ಲಿ ಸೇರಿರುವುದರಿಂದ 'ಗಹಾದಿಭ್ಯಶ್ಚ' (ಸೂ. ೧೧೮೧) ಸೂತ್ರದಿಂದ ಆಗತಾರ್ಥದಲ್ಲಿಯೇ ಛಪ್ರತ್ಯಯ ಬಂದು ಸಮೀಯಮ್, ವಿಷಮೀಯಮ್ ಎಂದು ರೂಪವಾಗುತ್ತದೆ. ಮನುಷ್ಯವಾಚಕಕ್ಕೆ—ದೇವದತ್ತಾದಾಗತಮ್ | ದೇವದತ್ತರೂಪ್ಯಮ್ | ದೇವದತ್ತನಿಂದ ಬಂದದ್ದು. ರೂಪ್ಯ ಪ್ರತ್ಯಯ ಬಾರದಿದ್ದರೆ ಸಾಮಾನ್ಯ ಸೂತ್ರದಿಂದ ('ತತ ಆಗತಃ') ಅಣ್. ದೈವದತ್ತಮ್.

ಆಗತಾರ್ಥದಲ್ಲಿ ಮಯಟ್ ಹೇಳುವ ಸೂತ್ರ.

**೧೧೧೫. ಮಯಟ್ ಚ || ೪-೩-೮೨ ||**

**ಸಮಮಯಮ್ | ದೇವದತ್ತಮಯಮ್ ||**

ದ್ವಿಪದ ಸೂತ್ರ. ಹೇತು ಮನುಷ್ಯವಾಚಕ ಪಂಚಮ್ಯಂತದ ಮೇಲೆ ಆಗತಾರ್ಥದಲ್ಲಿ ಮಯಟ್ ಪ್ರತ್ಯಯವೂ ಬರುತ್ತದೆ. ಸಮಾತ್ ಆಗತಮ್. ಸಮ+ಮಯ=ಸಮಮಯಮ್. ದೇವದತ್ತಾತ್ ಆಗತಮ್=ದೇವದತ್ತಮಯಮ್. ನಿಮಿತ್ತವಿಲ್ಲದಿರುವುದರಿಂದ ವೃದ್ಧ್ಯಾದಿಗಳು ಬರುವುದಿಲ್ಲ. ಆಗತಾರ್ಥ ಮುಗಿದಿದೆ.

ಪ್ರಭವತ್ಯರ್ಥದಲ್ಲಿ ಪ್ರತ್ಯಯ ಹೇಳುವ ಸೂತ್ರ.

**೧೧೧೬. ಪ್ರಭವತಿ || ೪-೩-೮೩ ||**

**ಹಿಮವತಃ ಪ್ರಭವತಿ ಹೈಮವತೀ ಗಂಗಾ ||**

ಏಕಪದ ಸೂತ್ರ. 'ತತಃ' ಅನುವೃತ್ತಿ. **ಸೂತ್ರಾರ್ಥ**—ಪಂಚಮ್ಯಂತ ಸಮರ್ಥದ ಮೇಲೆ ಪ್ರಭವತಿ ಅಂದರೆ ಪ್ರಥಮಪ್ರಕಾಶವೆಂಬರ್ಥದಲ್ಲಿ ಅಣಾದಿಘಾದಿ ಪ್ರತ್ಯಯಗಳು ಬರುತ್ತವೆ. ಪ್ರಭವತಿ=ಮೊದಲು ಇಲ್ಲಿ ವ್ಯಕ್ತವಾಗುತ್ತದೆ. ಪ್ರಥಮ ಪ್ರಕಾಶ ಕರ್ತ್ರರ್ಥದಲ್ಲಿ ಪ್ರತ್ಯಯ. ಹಿಮವತಃ ಪ್ರಭವತಿ। ಹಿಮವತ್+ಙಸಿ+ಅಣ್. ಸುಲೋಪ. ಹಿಮವತ್+ಅ. ಆದಿವೃದ್ಧಿ. ಹೈಮವತ। ಸ್ತ್ರೀತ್ವದಲ್ಲಿ ಅಣಂತ ವಾದುದರಿಂದ 'ಟಿಡ್ಢಾಣಞ್—' ಸೂತ್ರದಿಂದ ಙೀಪ್. ಹೈಮವತ+ಈ. 'ಯಸ್ಯೇತಿ ಚ' ಅಲೋಪ. ಹೈಮವತೀ=ಹಿಮವತ್ಪರ್ವತದಲ್ಲಿ ಮೊದಲು ಪ್ರಕಾಶಿತ ವಾದದ್ದು; ಗಂಗಾನದಿ.

ಗಚ್ಛತಿ ಅರ್ಥದಲ್ಲಿ ಪ್ರತ್ಯಯ ಹೇಳುವ ಸೂತ್ರ.

**೧೧೧೭. ತದ್ಗಚ್ಛತಿ ಪಥಿದೂತಯೋಃ ॥ ೪-೩-೮೫ ॥**

**ಸ್ರುಘ್ನಂ ಗಚ್ಛತಿ ಸ್ರೌಘ್ನಃ ಪನ್ಥಾ ದೂತೋ ವಾ ॥**

ತತ್, ಗಚ್ಛತಿ, ಪಥಿದೂತಯೋಃ॥ ತ್ರಿಪದ ಸೂತ್ರ. 'ತತ್' ದ್ವಿತೀಯಾಂತ ಸಮರ್ಥವಿಭಕ್ತಿ. **ಸೂತ್ರಾರ್ಥ**—ಪ್ರಾತಿಪದಿಕವೇ ಪ್ರಕೃತಿಯಾಗಿರುವ ದ್ವಿತೀಯಾಂತ ಶಬ್ದದ ಮೇಲೆ, ಗಚ್ಛತಿ=ಹೋಗುತ್ತಾನೆ ಎಂಬರ್ಥದಲ್ಲಿ ಅಣಾದಿಪ್ರತ್ಯಯಗಳೂ ಘಾದಿಪ್ರತ್ಯಯಗಳೂ ಬರುತ್ತವೆ. ಹೋಗುವುದು ದಾರಿಯಾಗಲೀ, ದೂತನಾಗಲೀ ಆಗಬೇಕು. ಖಡ್ಗ ಕತ್ತರಿಸುತ್ತದೆ ಎಂಬಂತೆ ದಾರಿ ಕರಣವಾದರೂ ಕರ್ತೃತ್ವವಿವಕ್ಷಾ ಮಾಡಿರುತ್ತಾನೆ. ಹೀಗೆಯೇ ಮುಂದಿನ ಸೂತ್ರದಲ್ಲಿ ದ್ವಾರಕ್ಕೂ ಕರ್ತೃತ್ವವಿವಕ್ಷಾ. ಸ್ರುಘ್ನಂ ಗಚ್ಛತಿ। ಅಣ್. ಸ್ರೌಘ್ನಃ=ಸ್ರುಘ್ನದೇಶಕ್ಕೆ ಹೋಗುವ ದಾರಿ ಅಥವಾ ದೂತ.

ಅಭಿನಿಷ್ಕ್ರಾಮತ್ಯರ್ಥದಲ್ಲಿ ಅಣ್ ಹೇಳುವ ಸೂತ್ರ.

**೧೧೧೮. ಅಭಿನಿಷ್ಕ್ರಾಮತಿ ದ್ವಾರಮ್ ॥ ೪-೩-೮೬ ॥**

**ಸ್ರುಘ್ನಮಭಿನಿಷ್ಕ್ರಾಮತಿ ಸ್ರೌಘ್ನಂ, ಕಾನ್ಯಕುಬ್ಜದ್ವಾರಮ್ ॥**

ದ್ವಿಪದ ಸೂತ್ರ. 'ತತ್' ಅನುವೃತ್ತಿ. **ಸೂತ್ರಾರ್ಥ**—ದ್ವಿತೀಯಾಂತ ಸಮರ್ಥ ಶಬ್ದದಮೇಲೆ ಅಭಿನಿಷ್ಕ್ರಾಮತಿ ಎಂಬರ್ಥದಲ್ಲಿ ಅಣಾದಿಗಳೂ, ಘಾದಿಗಳೂ ಬರುತ್ತವೆ. ಹೋಗಿಬರುವುದರಲ್ಲಿ ದ್ವಾರ ಕರ್ತೃವಾಗಿರಬೇಕು. ಸ್ರೌಘ್ನಮ್। ಅಣಂತ. ಕಾನ್ಯಕುಬ್ಜದ ದ್ವಾರವಾಗುತ್ತದೆ.

ಅಧಿಕರಿಸಿಮಾಡಿದ ಗ್ರಂಥಾರ್ಥದಲ್ಲಿ ಅಣಾದಿಗಳನ್ನು ಹೇಳುವ ಸೂತ್ರ.

**೧೧೧೯. ಅಧಿಕೃತ್ಯ ಕೃತೇ ಗ್ರನ್ಥೇ ॥ ೪-೩-೮೭ ॥**

**ಶಾರೀರಕಮಧಿಕೃತ್ಯ ಕೃತೋ ಗ್ರಂಥಃ ಶಾರೀರಕೀಯಃ ॥**

ತ್ರಿಪದ ಸೂತ್ರ. 'ತತ್' ಅನುವೃತ್ತಿ. **ಸೂತ್ರಾರ್ಥ**—ದ್ವಿತೀಯಾಂತ ಸಮರ್ಥ ಶಬ್ದದ ಮೇಲೆ, ಅಧಿಕೃತ್ಯ ಕೃತೇ ಗ್ರಂಥೇ=ಅಧಿಕರಿಸಿ ಮಾಡಿದ ಗ್ರಂಥ ಎಂಬರ್ಥದಲ್ಲಿ ಅಣಾದಿಗಳೂ, ಘಾದಿಗಳೂ ಬರುತ್ತವೆ. ಶರೀರಸ್ಯಾಯಮ್ ಶಾರೀರಃ। ಶರೀರ ಶಬ್ದದಮೇಲೆ ಅಣ್ ಬಂದಿದೆ. ಜೀವಾತ್ಮನೆಂದರ್ಥ. ಶಾರೀರ ಏವ ಶಾರೀರಕಃ। ಸ್ವಾರ್ಥದಲ್ಲಿ ಕಪ್ರತ್ಯಯ. ಶಾರೀರಕಂ ಅಧಿಕೃತ್ಯ ಕೃತಃ ಗ್ರಂಥಃ। ಜೀವಾತ್ಮನನ್ನು ಅಧಿಕರಿಸಿಮಾಡಿರುವ ಗ್ರಂಥ. ಶಾರೀರಕದಲ್ಲಿ ಆದಿವೃದ್ಧಿಯಿರುವುದರಿಂದ ವೃದ್ಧಸಂಜ್ಞೆ ನಿಮಿತ್ತವಾಗಿ 'ವೃದ್ಧಾಚ್ಛಃ' ಸೂತ್ರದಿಂದ ಛಪ್ರತ್ಯಯ. ಈಯಾದೇಶ, ಅಲೋಪ. ಶಾರೀರಕೀಯಃ=ವೇದಾಂತ ಗ್ರಂಥ.

ನಿವಾಸಾರ್ಥದಲ್ಲಿ ಅಣಾದಿಗಳನ್ನು ಹೇಳುವ ಸೂತ್ರ.

**೧೧೧೦. ಸೋಽಸ್ಯ ನಿವಾಸಃ** ॥ ೪-೩-೮೯ ॥

**ಸ್ರುಘ್ನೋ ನಿವಾಸೋಽಸ್ಯ ಸ್ರೌಘ್ನಃ** ॥

ಸಃ, ಅಸ್ಯ, ನಿವಾಸಃ ॥ ತ್ರಿಪದ ಸೂತ್ರ. 'ಸಃ' ಪ್ರಥಮಾಂತ ಹೇಳಿರುವುದ ರಿಂದ ಪ್ರಥಮಾಂತ ಸಮರ್ಥವಿಭಕ್ತಿ. **ಸೂತ್ರಾರ್ಥ**—ಪ್ರಾತಿಪದಿಕ ಪ್ರಕೃತಿಯಾದ ಪ್ರಥಮಾಂತದ ಮೇಲೆ, ಅಸ್ಯ ನಿವಾಸಃ=ಇವನ ವಾಸಸ್ಥಾನ, ಎಂಬರ್ಥದಲ್ಲಿ ಅಣಾದಿ ಗಳೂ ಘಾದಿಗಳೂ ಬರುತ್ತವೆ. 'ಸ್ರುಘ್ನಃ—' ಇತಿ. ಸ್ರುಘ್ನದೇಶವು ಇವನಿಗೆ ಆವಾಸಸ್ಥಾನ. ಸ್ರೌಘ್ನಃ। ಅಣ್. ಅಧಿಕರಣಾರ್ಥದಲ್ಲಿ ಘಞ್ ಪ್ರತ್ಯಯ ಬಂದುದ ರಿಂದ ನಿವಾಸವೆಂಬುದಕ್ಕೆ ವಾಸದೇಶ ಎಂದರ್ಥವಾಗುತ್ತದೆ.

ಪ್ರೋಕ್ತಾರ್ಥದಲ್ಲಿ ಅಣಾದಿಗಳನ್ನು ಹೇಳುವ ಸೂತ್ರ.

**೧೧೧೧. ತೇನ ಪ್ರೋಕ್ತಮ್** ॥ ೪-೩-೧೦೧ ॥

**ಪಾಣಿನಿನಾ ಪ್ರೋಕ್ತಮ್ ಪಾಣಿನೀಯಮ್** ॥

ದ್ವಿಪದ ಸೂತ್ರ. ಮೊದಲು 'ತೇನ' ಎಂದುದರಿಂದ ತೃತೀಯಾಂತದಮೇಲೆ ಪ್ರತ್ಯಯವೆಂದು ತಿಳಿಯಬೇಕು. **ಸೂತ್ರಾರ್ಥ**—ಪ್ರಾತಿಪದಿಕವೇ ಪ್ರಕೃತಿಯಾದ ತೃತೀಯಾಂತದ ಮೇಲೆ ಪ್ರೋಕ್ತಾರ್ಥದಲ್ಲಿ (ಹೇಳಿದ್ದು) ಅಣಾದಿಗಳೂ ಘಾದಿಗಳೂ ಬರುತ್ತವೆ. ಪಾಣಿನಿಯಿಂದ ಹೇಳಲ್ಪಟ್ಟದ್ದು. ಪಾಣಿನಿ+ಛ. ಆದಿವೃದ್ಧಿಯಿರುವು ದರಿಂದ ವೃದ್ಧಸಂಜ್ಞಾನಿಮಿತ್ತವಾಗಿ ಛಪ್ರತ್ಯಯ. ಈಯಾದೇಶ, ಇಲೋಪ. ಪಾಣಿನೀಯಮ್=ಪಾಣಿನಿಯ ವ್ಯಾಕರಣ.

ಇದಮ್ (ಸಂಬಂಧಿಸಿದ್ದು) ಅರ್ಥದಲ್ಲಿ ಅಣಾದಿಗಳನ್ನು ಹೇಳುವ ಸೂತ್ರ.

**೧೧೧೨. ತಸ್ಯೇದಮ್** ॥ ೪-೩-೧೨೦ ॥

**ಉಪಗೋರಿದಮ್ ಔಪಗವಮ್** ॥

**ಇತಿ ಶೈಷಿಕಾಃ** ॥ ೫ ॥

ತಸ್ಯ, ಇದಮ್ ॥ ದ್ವಿಪದ ಸೂತ್ರ. ಪ್ರಾತಿಪದಿಕವೇ ಪ್ರಕೃತಿಯಾಗಿರುವ ಷಷ್ಠ್ಯಂತದ ಮೇಲೆ, ಇದಮ್=ಸಂಬಂಧಿಯೆಂಬರ್ಥದಲ್ಲಿ, ಅಣಾದಿಗಳು ಬರುತ್ತವೆ. ಉಪಗುವಿನ ಸಂಬಂಧವಾದದ್ದು. ಉಪಗು+ಅಣ್. ಆದಿವೃದ್ಧಿ. ಔಪಗು+ಅ. 'ಓರ್ಗುಣಃ' ಸೂತ್ರದಿಂದ ಉಕಾರಕ್ಕೆ ಗುಣ. ಅದಕ್ಕೆ ಅಚ್ ಪರವಾದುದರಿಂದ ಅವಾದೇಶ. ಔಪಗವಮ್. ಉಪಗುವಿನ ಮನೆ ಮುಂತಾದವು.

ಹೀಗೆ ತದ್ಧಿತದಲ್ಲಿ ಶೈಷಿಕವೆಂಬ ಐದನೇ ಪ್ರಕರಣ ಮುಗಿದಿದೆ.

## ೨೮. ಅಥ ವಿಕಾರಾರ್ಥಕಾಃ

ವಿಕಾರಾರ್ಥದಲ್ಲಿ ಪ್ರತ್ಯಯ ಹೇಳುವ ಸೂತ್ರ.

೧೧೧೩. ತಸ್ಯ ವಿಕಾರಃ ॥ ೪-೩-೧೩೪ ॥

**ವಾ ॥ (ಅಶ್ಮನೋ ವಿಕಾರೇ ಟಲೋಪೋ ವಕ್ತವ್ಯಃ) ಅಶ್ಮನೋ ವಿಕಾರಃ ಆಶ್ಮಃ । ಭಾಸ್ಮನಃ । ಮಾರ್ತ್ತಿಕಃ ॥**

ದ್ವಿಪದ ಸೂತ್ರ. 'ತಸ್ಯ' ಎಂದು ಮೊದಲು ನಿರ್ದಿಷ್ಟವಾದುದರಿಂದ ಷಷ್ಠ್ಯಂತದ ಮೇಲೆ ಪತ್ಯಯ. **ಸೂತ್ರಾರ್ಥ**—ಪ್ರಾತಿಪದಿಕವೇ ಪ್ರಕೃತಿಯಾಗಿರುವ ಷಷ್ಠ್ಯಂತದ ಮೇಲೆ ವಿಕಾರಾರ್ಥದಲ್ಲಿ ಅಣ್ ಪ್ರತ್ಯಯ ಬರುತ್ತದೆ. ಅಶ್ಮನಃ ವಿಕಾರಃ=ಕಲ್ಲಿನ ವಿಕಾರ. ಅಶ್ಮನ್+ಙಸ್+ಅಣ್. ಅಶ್ಮನ್+ಅ. ಅನ್ನಂತವಾದುದರಿಂದ 'ಅನ್' ಸೂತ್ರದಿಂದ ಪ್ರಕೃತಿಭಾವವು ಪ್ರಾಪ್ತವಾದರೆ ವಾರ್ತಿಕದಲ್ಲಿ ಅದಕ್ಕೆ ಅಪವಾದ ಹೇಳುತ್ತಾನೆ. ಅಶ್ಮನ್ ಶಬ್ದಕ್ಕೆ ವಿಕಾರಾರ್ಥ ತೋರುವಾಗ ಟಲೋಪ ಹೇಳಬೇಕು. ಇದರಿಂದ ಟಲೋಪ (ಅನ್) ಬಂದರೆ ಅಶ್ಮ್+ಅ. ಆದಿವೃದ್ಧಿ. ಆಶ್ಮಃ=ಶಿಲಾಭಸ್ಮಾದಿ. ಭಸ್ಮನಃ ವಿಕಾರಃ । ಭಸ್ಮನ್+ಅ. 'ನಸ್ತದ್ಧಿತೇ' ಟಲೋಪ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ 'ಅನ್' ಸೂತ್ರದಿಂದ ಪ್ರಕೃತಿಭಾವ. ಆದಿವೃದ್ಧಿ. ಭಾಸ್ಮನಃ=ಭಸ್ಮವಿಕಾರ. ಮೃತ್ತಿಕಾಯಾಃ ವಿಕಾರಃ। ಮೃತ್ತಿಕಾ+ಅಣ್. ಆದಿವೃದ್ಧಿ, ಆಕಾರಲೋಪ. ಮಾರ್ತ್ತಿಕಃ=ಮಣ್ಣಿನ ವಿಕಾರ. ಬೊಂಬೆ ಮುಂತಾದವು.

ಅವಯವಾರ್ಥದಲ್ಲಿ ಅಣ್ ಹೇಳುವ ಸೂತ್ರ.

೧೧೧೪. ಅವಯವೇ ಚ ಪ್ರಾಣ್ಯೋಷಧಿವೃಕ್ಷೇಭ್ಯಃ ॥ ೪-೩-೧೩೫ ॥

**ಚಾದ್ವಿಕಾರೇ । ಮಯೂರಸ್ಯಾವಯವೋ ವಿಕಾರೋ ವಾ ಮಾಯೂರಃ । ಮೌರ್ವಮ್ ಕಾಂಡಂ ಭಸ್ಮ ವಾ । ಪೈಪ್ಪಲಮ್ ॥**

ತ್ರಿಪದ ಸೂತ್ರ. ಚಕಾರದಿಂದ ವಿಕಾರಾರ್ಥ ಪರಾಮೃಷ್ಟವಾಗುತ್ತದೆ. **ಸೂತ್ರಾರ್ಥ**—ಪ್ರಾಣಿ, ಓಷಧಿ, ವೃಕ್ಷವಾಚಕ ಶಬ್ದಗಳೇ ಪ್ರಕೃತಿಯಾಗಿರುವ ಷಷ್ಠ್ಯಂತದ ಮೇಲೆ, ಅವಯುವ, ವಿಕಾರಾರ್ಥಗಳಲ್ಲಿ ಅಣ್ ಪ್ರತ್ಯಯ ಬರುತ್ತದೆ. ಪ್ರಾಣಿಗೆ—ಮಯೂರದ ಅವಯುವ ಅಥವಾ ವಿಕಾರ. ಮಯೂರ+ಅ. ಆದಿವೃದ್ಧಿ, ಅಲೋಪ. ಮಾಯೂರಃ=ಗರಿ ಮುಂತಾದವು. ಓಷಧಿಗೆ-ಮೂರ್ವಾಯಾಃ ವಿಕಾರಃ, ಅವಯವೋ ವಾ। ಮೂರ್ವಾ+ಅ. ಆದಿವೃದ್ಧಿ, ಆಕಾರಲೋಪ. ಮೌರ್ವಂ ಕಾಂಡಂ, ಭಸ್ಮ ವಾ. ಮೂರ್ವಾ ಅಂದರೆ ಒಂದು ಓಷಧಿವಿಶೇಷ. ಅದರ ಅವಯುವ, ಅಥವಾ ವಿಕಾರ. ವೃಕ್ಷಕ್ಕೆ—ಪಿಪ್ಪಲಸ್ಯ ವಿಕಾರಃ, ಅವಯವೋ ವಾ। ಅಶ್ವತ್ಥದ ವಿಕಾರ, ಅಥವಾ ಅವಯುವ. ಪಿಪ್ಪಲ+ಅ. ಆದಿವೃದ್ಧಿ, ಅಲೋಪ. ಪೈಪ್ಪಲಮ್.

ವಿಕಾರಾರ್ಥದಲ್ಲಿ ವಿಕಲ್ಪ ಮಯಟ್ ಹೇಳುವ ಸೂತ್ರ.

**೧೧೧೫. ಮಯಡ್ವೈತಯೋರ್ಭಾಷಾಯಾಮಭಕ್ಷ್ಯಾಚ್ಛಾದನಯೋಃ** ॥ ೪-೩-೧೪೩ ॥

**ಪ್ರಕೃತಿಮಾತ್ರಾನ್ಮಯಡ್ವಾ ಸ್ಯಾತ್ ವಿಕಾರಾವಯವಯೋಃ। ಅಶ್ಮಮಯಮ್, ಆಶ್ಮನಮ್। ಅಭಕ್ಷ್ಯೇತ್ಯಾದಿ ಕಿಮ್? ಮೌದ್ಗಃ ಸೂಪಃ। ಕಾರ್ಪಾಸಮಾಚ್ಛಾದನಮ್** ॥

ಮಯಟ್, ವಾ, ಏತಯೋಃ, ಭಾಷಾಯಾಮ್, ಅಭಕ್ಷ್ಯಾಚ್ಛಾದನಯೋಃ ॥ ಐದು ಪದಗಳುಳ್ಳ ಸೂತ್ರ. ಏತಯೋಃ ಪದದಿಂದ ಹಿಂದೆ ಹೇಳಿದ ಎರಡು ಅರ್ಥಗಳು ಪರಾಮೃಷ್ಟವಾಗುತ್ತವೆ. **ಸೂತ್ರಾರ್ಥ**—ಪ್ರಾತಿಪದಿಕವೇ ಪ್ರಕೃತಿಯಾಗಿರುವ ಷಷ್ಠ್ಯಂತದ ಮೇಲೆ ವಿಕಾರ, ಅವಯುವಾರ್ಥಗಳಲ್ಲಿ ಮಯಟ್ ಪ್ರತ್ಯಯ ವಿಕಲ್ಪವಾಗಿ ಬರುತ್ತದೆ. ಭಾಷಾಯಾಂ ಎಂದುದರಿಂದ ವೇದದಲ್ಲಿ ಈ ಪ್ರತ್ಯಯವಿಕಲ್ಪವಿಲ್ಲ. ತಿನ್ನಲ್ಪಡುವುದು, ಹೊದೆಯುವುದು ಈ ಎರಡು ಅರ್ಥ ಪ್ರತ್ಯಯಾಂತದಿಂದ ತೋರ ಬಾರದು. ಅಶ್ಮನಃ ವಿಕಾರಃ ಅಶ್ಮಮಯಮ್। ಮಯಟ್ ಬಾರದಿದ್ದರೆ ಹಿಂದಿನಂತೆ ಅಣ್. ಆಶ್ಮನಮ್. ತಿನ್ನಲ್ಪಡುವುದೆಂಬ ಅರ್ಥ ತೋರುತ್ತಿದ್ದರೆ ಬರುವುದಿಲ್ಲ. ಮುದ್ಗಸ್ಯ ವಿಕಾರಃ। ಮುದ್ಗ+ಅಣ್. ಆದಿವೃದ್ಧಿ, ಅಲೋಪ. ಮೌದ್ಗಃ=ಹೆಸರಿನ ತೊವ್ವೆ. ಹಾಗೆಯೇ ಆಚ್ಛಾದನಾರ್ಥದಲ್ಲಿಯೂ ಇಲ್ಲ. ಕಾರ್ಪಾಸಸ್ಯ ವಿಕಾರಃ ಕಾರ್ಪಾಸಮ್=ಹತ್ತಿಯ ಬಟ್ಟೆ.

ವಿಕಾರಾರ್ಥದಲ್ಲಿ ನಿತ್ಯ ಮಯಟ್ ಹೇಳುವ ಸೂತ್ರ.

**೧೧೧೬. ನಿತ್ಯಂ ವೃದ್ಧಶರಾದಿಭ್ಯಃ** ॥ ೪-೩-೧೪೪ ॥

**ಆಮ್ರಮಯಮ್। ಶರಮಯಮ್** ॥

ದ್ವಿಪದ ಸೂತ್ರ. ವೃದ್ಧಸಂಜ್ಞೆಯಿರುವ ಶಬ್ದದ ಮೇಲೂ ಶರಾದಿಗಣಪಠಿತ ಶಬ್ದಗಳ ಮೇಲೂ ವಿಕಾರ, ಅವಯವಾರ್ಥಗಳಲ್ಲಿ ನಿತ್ಯವಾಗಿ ಮಯಟ್ ಪ್ರತ್ಯಯ ಬರುತ್ತದೆ. ಆದಿವೃದ್ಧಿಯಿಂದ ಕೂಡಿದ ಪದವೇ ವೃದ್ಧ. ಆಮ್ರಸ್ಯ ವಿಕಾರಃ ಅವಯವೋ ವಾ | ಆಮ್ರಮಯಮ್=ಮಾವಿನ ವಿಕಾರ. ಕಟ್ಟಿಗೆ ಮುಂತಾದವು. ಶರಸ್ಯ ವಿಕಾರಃ ಶರಮಯಮ್ | ಶರವೆಂದರೆ ಹುಲ್ಲಿನ ಭೇದ. ಶರ, ದರ್ಭ, ಮೃದ್, ಕುಟೀ, ತೃಣ, ಸೋಮ, ಬಿಲ್ವಜ ಇವು ಶರಾದಿಗಳು.

ಗೋಶಬ್ದಕ್ಕೆ ಮಯಟ್ ಹೇಳುವ ಸೂತ್ರ.

**೧೧೧೭. ಗೋಶ್ಚ ಪುರೀಷೇ || ೪-೩-೧೪೫ ||**

**ಗೋಃ ಪುರೀಷಮ್ ಗೋಮಯಮ್ ||**

ಗೋಃ, ಚ, ಪುರೀಷೇ || ತ್ರಿಪದ ಸೂತ್ರ. ಗೋಶಬ್ದವೇ ಪ್ರಕೃತಿಯಾಗಿರುವ ಷಷ್ಠ್ಯಂತದ ಮೇಲೆ ಪುರೀಷ=ಮಲರೂಪಾರ್ಥದಲ್ಲಿ ಮಯಟ್ ಪ್ರತ್ಯಯ ಬರುತ್ತದೆ. ಪುರೀಷವು ವಿಕಾರವಲ್ಲ; ಅವಯವವೂ ಅಲ್ಲ. ಗೋಃ ಪುರೀಷಮ್ | ಗೋಮಯಮ್ =ಸಗಣಿ.

ವಿಕಾರಾರ್ಥದಲ್ಲಿ ಯತ್ ಹೇಳುವ ಸೂತ್ರ.

**೧೧೧೮. ಗೋಪಯಸೋರ್ಯತ್ || ೪-೩-೧೬೦ ||**

**ಗವ್ಯಮ್ | ಪಯಸ್ಯಮ್ ||**

ಇತಿ ವಿಕಾರಾರ್ಥಾಃ (ಪ್ರಾಗ್ದೀವ್ಯತೀಯಾಃ) || ೬ ||

ದ್ವಿಪದ ಸೂತ್ರ. ಗೋ ಮತ್ತು ಪಯಸ್ ಶಬ್ದವೇ ಪ್ರಕೃತಿಯಾಗಿರುವ ಷಷ್ಠ್ಯಂತದ ಮೇಲೆ ವಿಕಾರ, ಅವಯವಾರ್ಥದಲ್ಲಿ ಯತ್ ಪ್ರತ್ಯಯ ಬರುತ್ತದೆ. ಮಯಟಿಗೆ ಅಪವಾದ. ಗೋಃ ವಿಕಾರಃ | ಗೋ+ಯ. 'ವಾಂತೋ ಯಿ ಪ್ರತ್ಯಯೇ' ಸೂತ್ರದಿಂದ ವಾಂತಾದೇಶ. ಗವ್ಯಮ್=ಹಾಲು ಮುಂತಾದವು. ಪಯಸಃ ವಿಕಾರಃ | ಪಯಸ್+ಯ. ಪಯಸ್ಯಮ್. ಹಾಲಿನ ವಿಕಾರ. ಇಲ್ಲಿಗೆ ತದ್ಧಿತದಲ್ಲಿ ವಿಕಾರಾರ್ಥಕ ಆರನೆಯ ಪ್ರಕರಣ ಮುಗಿದಿದೆ. ಇಲ್ಲಿಯವರೆಗೂ ಸಾಮಾನ್ಯವಾಗಿ 'ಪ್ರಾಗ್ ದೀವ್ಯತೋಽಣ್' ಸೂತ್ರದಿಂದ ಅಣ್ ಅನುವೃತ್ತವಾಗುತ್ತದೆ. ಇನ್ನು ಮುಂದಿನ ಪ್ರಕರಣದಲ್ಲಿ 'ತೇನ ದೀವ್ಯತಿ—' ಸೂತ್ರ ಹೇಳುವುದರಿಂದ ಅಣಿಗೆ ಅಧಿಕಾರವಿಲ್ಲ. ಅಲ್ಲಲ್ಲಿ ಹೇಳುವ ಪ್ರತ್ಯಯಗಳಿಗೇ ಅಧಿಕಾರ.

# ೨೯. ಅಥ ಠಗಧಿಕಾರಃ

ಠಗಧಿಕಾರಸೂತ್ರ.

**೧೧೧೯. ಪ್ರಾಗ್ವಹತೇಷ್ಠಕ್ ॥ ೪-೪-೧ ॥**

**ತದ್ವಹತೀತ್ಯತಃ ಪ್ರಾಕ್ ಠಗಧಿಕ್ರಿಯತೇ ॥**

ಪ್ರಾಕ್, ವಹತೇಃ, ಠಕ್ ॥ ತ್ರಿಪದ ಸೂತ್ರ. ಇಲ್ಲಿ ಕಾರ್ಯವಿಧಾನಮಾಡದಿರುವುದರಿಂದ ಇದು ಅಧಿಕಾರ ಸೂತ್ರ. 'ತದ್ವಹತಿ ರಥಯುಗಪ್ರಾಸಙ್ಗಮ್' ಸೂತ್ರದವರೆಗೆ ಇದಕ್ಕೆ ಅಧಿಕಾರ. ಮುಂದಿನ ಸೂತ್ರಗಳಲ್ಲಿ ಹೋಗಿ ಠಕ್ ಪ್ರತ್ಯಯ ಬರುತ್ತದೆಂದು ತಿಳಿಸುತ್ತದೆ.

ದೀವ್ಯತ್ಯಾದ್ಯರ್ಥಗಳಲ್ಲಿ ಠಕ್ ಹೇಳುವ ಸೂತ್ರ.

**೧೧೨೦. ತೇನ ದೀವ್ಯತಿ ಖನತಿ ಜಯತಿ ಜಿತಮ್ ॥ ೪-೪-೨ ॥**

**ಅಕ್ಷೈರ್ದೀವ್ಯತಿ ಖನತಿ ಜಯತಿ ಜಿತೋ ವಾ ಆಕ್ಷಿಕಃ ॥**

ಐದು ಪದಗಳುಳ್ಳ ಸೂತ್ರ. 'ತೇನ' ಪ್ರಥಮನಿರ್ದಿಷ್ಟವಾದುದರಿಂದ ತೃತೀಯಾಂತದಮೇಲೆ ಪ್ರತ್ಯಯ. **ಸೂತ್ರಾರ್ಥ**—ಪ್ರಾತಿಪದಿಕವೇ ಪ್ರಕೃತಿಯಾಗಿರುವ ತೃತೀಯಾಂತದಮೇಲೆ ಆಡುವುದು, ಅಗೆಯುವುದು, ಜಯಿಸುವುದು, ಜಯಿಸಲ್ಪಟ್ಟದ್ದು ಈ ನಾಲ್ಕು ಅರ್ಥಗಳಲ್ಲಿ ಠಕ್ ಪ್ರತ್ಯಯ ಬರುತ್ತದೆ. ಅಕ್ಷೈಃ ದೀವ್ಯತಿ=ಪಗಡೆಯಿಂದ ಆಡುತ್ತಾನೆ. ಅಕ್ಷ+ಭಿಸ್+ಠಕ್. ಸುಲೋಪ. 'ಠಸ್ಯೇಕಃ' ಸೂತ್ರದಿಂದ ಠಕ್ಕೆ ಇಕಾರಾದೇಶ. ಕಿತ್ತಾದುದರಿಂದ ಆದಿವೃದ್ಧಿ, ಅಲೋಪ. ಆಕ್ಷಿಕಃ=ಪಗಡೆ ಆಡುವವನು. ಹೀಗೆಯೇ ಖನತ್ಯಾದ್ಯರ್ಥದಲ್ಲಿ ಠಕ್ ಬರುವುದರಿಂದ ಆಯಾಯ ಅರ್ಥ ಹೇಳಬೇಕು.

ಸಂಸ್ಕೃತಾರ್ಥದಲ್ಲಿ ಠಕ್ ಹೇಳುವ ಸೂತ್ರ.

**೧೧೨೧. ಸಂಸ್ಕೃತಮ್ ॥ ೪-೪-೩ ॥**

**ದಧ್ನಾ ಸಂಸ್ಕೃತಂ ದಾಧಿಕಮ್ । ಮಾರೀಚಿಕಮ್ ॥**

ಏಕಪದ ಸೂತ್ರ. 'ತೇನ' ಅನುವೃತ್ತಿ. ಪ್ರಾತಿಪದಿಕವೇ ಪ್ರಕೃತಿಯಾಗಿರುವ ತೃತೀಯಾಂತದಮೇಲೆ ಸಂಸ್ಕೃತ=ಪರಿಷ್ಕೃತವಾದದ್ದು ಎಂಬರ್ಥದಲ್ಲಿ ಠಕ್ ಪ್ರತ್ಯಯ ಬರುತ್ತದೆ. ದಧ್ನಾ ಸಂಸ್ಕೃತಮ್ । ಮೊಸರಿನಿಂದ ಪರಿಷ್ಕೃತವಾದದ್ದು. ದಧಿ+ಠಕ್. ಆದಿವೃದ್ಧಿ. ಇಕಾರಲೋಪ. ದಾಧಿಕಮ್. ಮೊಸರನ್ನ ಮುಂತಾದವುಗಳು.

ಮರೀಚಿಭಿಃ ಸಂಸ್ಕೃತಮ್ | ಮರೀಚ+ಠಕ್. ಆದಿವೃದ್ಧಿ, ಅಲೋಪ. ಮಾರೀಚಿಕಮ್=ಮೆಣಸಿನಕಾಯಿಂದ ಪರಿಷ್ಕೃತವಾದದ್ದು.

ತರತ್ಯರ್ಥದಲ್ಲಿ ಠಕ್ ಹೇಳುವ ಸೂತ್ರ.

೧೧೨೨. ತರತಿ || ೪-೪-೫ ||

ತೇನೇತ್ಯೇವ | ಉಡುಪೇನ ತರತಿ ಔಡುಪಿಕಃ ||

ಏಕಪದ ಸೂತ್ರ. 'ತೇನ' ಅನುವೃತ್ತಿ. ತೃತೀಯಾಂತ ಸಮರ್ಥ ಶಬ್ದದ ಮೇಲೆ ತರತಿ=ದಾಟುತ್ತಾನೆ ಎಂಬರ್ಥದಲ್ಲಿ ಠಕ್ ಪ್ರತ್ಯಯ ಬರುತ್ತದೆ. ಉಡುಪೇನ ತರತಿ | ಉಡುಪ+ಠಕ್. ಆದಿವೃದ್ಧಿ, ಅಲೋಪ. ಔಡುಪಿಕಃ=ತೆಪ್ಪದಿಂದ ದಾಟುವವನು.

ಗಮನ, ಭಕ್ಷಣಾರ್ಥದಲ್ಲಿ ಠಕ್ ಹೇಳುವ ಸೂತ್ರ.

೧೧೨೩. ಚರತಿ || ೪-೪-೮ ||

ತೃತೀಯಾನ್ತಾದ್ಗಚ್ಛತಿಭಕ್ಷಯತೀತ್ಯರ್ಥಯೋಷ್ಠಕ್ ಸ್ಯಾತ್ | ಹಸ್ತಿನಾ ಚರತಿ ಹಾಸ್ತಿಕಃ | ದಧ್ನಾ ಚರತಿ ದಾಧಿಕಃ ||

ಏಕಪದ ಸೂತ್ರ. ಚರ ಧಾತುವಿಗೆ ಗತಿಭಕ್ಷಣಾರ್ಥವಿರುವುದರಿಂದ ಎರಡು ಅರ್ಥಗಳೂ ವಿವಕ್ಷಿತವಾಗಿವೆ. **ಸೂತ್ರಾರ್ಥ**—ಪ್ರಾತಿಪದಿಕಪ್ರಕೃತಿಕ ತೃತೀಯಾಂತದ ಮೇಲೆ ಹೋಗುತ್ತಾನೆ, ತಿನ್ನುತ್ತಾನೆ ಎಂಬರ್ಥದಲ್ಲಿ ಠಕ್ ಪ್ರತ್ಯಯ ಬರುತ್ತದೆ. ಹಸ್ತಿನಾ ಚರತಿ | ಹಸ್ತಿನ್+ಠಕ್. ಆದಿವೃದ್ಧಿ. 'ನಸ್ತದ್ಧಿತೇ' ಸೂತ್ರದಿಂದ ಟಿಲೋಪ (ಅನ್). ಹಾಸ್ತ್+ಇಕ=ಹಾಸ್ತಿಕಃ=ಆನೆಯಿಂದ ತಿರುಗುವವನು. ದಧ್ನಾ ಚರತಿ=ದಾಧಿಕಃ=ಮೊಸರಿನಿಂದ ತಿನ್ನುವವನು.

ಸಂಸೃಷ್ಟಾರ್ಥದಲ್ಲಿ ಠಕ್ ಹೇಳುವ ಸೂತ್ರ.

೧೧೨೪. ಸಂಸೃಷ್ಟೇ || ೪-೪-೨೨ || ದಧ್ನಾ ಸಂಸೃಷ್ಟಮ್ | ದಾಧಿಕಮ್ ||

ಸಂಸೃಷ್ಟವೆಂದರೆ ಮಿಶ್ರಿತವಾದದ್ದು. ತೃತೀಯಾಂತ ಸಮರ್ಥ ಶಬ್ದದಮೇಲೆ ಸೇರಲ್ಪಟ್ಟದ್ದು ಎಂಬರ್ಥದಲ್ಲಿ ಠಕ್ ಪ್ರತ್ಯಯ ಬರುತ್ತದೆ. ದಧ್ನಾ ಸಂಸೃಷ್ಟಮ್ | ಮೊಸರಿನಿಂದ ಮಿಶ್ರಿತವಾದದ್ದು. ದಾಧಿಕಮ್. ಪ್ರಕ್ರಿಯೆ ಹಿಂದೆ ಹೇಳಿದೆ. ಲಾಘವಕ್ಕೋಸ್ಕರ ಒಂದೇ ಪ್ರಾತಿಪದಿಕವನ್ನು ಉದಾಹರಿಸಿರುತ್ತಾನೆ.

ಆರಿಸುವುದೆಂಬರ್ಥದಲ್ಲಿ ಠಕ್ ಹೇಳುವ ಸೂತ್ರ.

**೧೧೨೫. ಉಞ್ಛತಿ || ೪–೪–೩೨ || ಬದರಾಣ್ಯುಞ್ಛತಿ ಬಾದರಿಕಃ ||**

'ತತ್ಪ್ರತ್ಯನುಪೂರ್ವಮ್—' ಸೂತ್ರದಿಂದ 'ತತ್' ಅನುವೃತ್ತಿ. ತತ್ ದ್ವಿತೀಯಾಂತ. ಒಂದೊಂದಾಗಿ ಆರಿಸಿಕೊಳ್ಳುವುದಕ್ಕೆ ಉಂಛವೆಂದು ಹೆಸರು. **ಸೂತ್ರಾರ್ಥ**—ಪ್ರಾತಿಪದಿಕವೇ ಪ್ರಕೃತಿಯಾಗಿರುವ ದ್ವಿತೀಯಾಂತದಮೇಲೆ ಉಂಛತಿ ಅರ್ಥದಲ್ಲಿ ಠಕ್ ಪ್ರತ್ಯಯ ಬರುತ್ತದೆ. ಬದರಾಣಿ ಉಂಛತಿ=ಬದರೀಹಣ್ಣನ್ನು ಒಂದೊಂದಾಗಿ ಆರಿಸುತ್ತಾನೆ. ಬದರ+ಠಕ್. ಆದಿವೃದ್ಧಿ, ಅಲೋಪ. ಬಾದರಿಕಃ |

ರಕ್ಷಣಾರ್ಥದಲ್ಲಿ ಠಕ್ ಹೇಳುವ ಸೂತ್ರ.

**೧೧೨೬. ರಕ್ಷತಿ || ೪–೪–೩೩ || ಸಮಾಜಂ ರಕ್ಷತಿ ಸಾಮಾಜಿಕಃ ||**

'ತತ್' ಅನುವೃತ್ತಿ. ದ್ವಿತೀಯಾಂತ ಸಮರ್ಥ ಶಬ್ದದ ಮೇಲೆ ರಕ್ಷಿಸುತ್ತಾನೆ ಎಂಬರ್ಥದಲ್ಲಿ ಠಕ್ ಪ್ರತ್ಯಯ. ಸಮಾಜಂ ರಕ್ಷತಿ=ಸಮಾಜವನ್ನು ರಕ್ಷಿಸುತ್ತಾನೆ. ಸಮಾಜ+ಠಕ್. ಆದಿವೃದ್ಧ್ಯಾದಿ. ಸಾಮಾಜಿಕಃ |

ಕರೋತ್ಯರ್ಥದಲ್ಲಿ ಠಕ್ ಹೇಳುವ ಸೂತ್ರ.

**೧೧೨೭. ಶಬ್ದದರ್ದುರಂ ಕರೋತಿ || ೪–೪–೩೪ ||**

**ಶಬ್ದಂ ಕರೋತಿ ಶಾಬ್ದಿಕಃ | ದರ್ದುರಂ ಕರೋತಿ ದಾರ್ದುರಿಕಃ ||**

ದ್ವಿಪದ ಸೂತ್ರ. ಶಬ್ದ, ದರ್ದುರ ಶಬ್ದಗಳೇ ಪ್ರಕೃತಿಯಾಗಿರುವ ದ್ವಿತೀಯಾಂತದಮೇಲೆ, ಕರೋತಿ=ಮಾಡುತ್ತಾನೆ ಎಂಬರ್ಥದಲ್ಲಿ ಠಕ್ ಪ್ರತ್ಯಯ ಬರುತ್ತದೆ. ಶಬ್ದವನ್ನು ಮಾಡುತ್ತಾನೆ. ಶಬ್ದ+ಠಕ್. ಆದಿವೃದ್ಧ್ಯಾದಿ. ಶಾಬ್ದಿಕಃ | ದರ್ದುರವನ್ನು ಮಾಡುತ್ತಾನೆ=ದಾರ್ದುರಿಕಃ | ಮೇಘ, ಕಪ್ಪೆ, ವಾದ್ಯಪಾತ್ರ, ಪರ್ವತವಿಶೇಷ, ಚಂಡಿಕಾ ಇತ್ಯಾದಿ ನಾನಾರ್ಥಗಳು ದರ್ದುರ ಪದಕ್ಕೆ ಇವೆ.

ಚರತ್ಯರ್ಥದಲ್ಲಿ ಠಕ್ ಹೇಳುವ ಸೂತ್ರ.

**೧೧೨೮. ಧರ್ಮಂ ಚರತಿ || ೪–೪–೪೧ ||**

**ಧಾರ್ಮಿಕಃ | ವಾ || (ಅಧರ್ಮಾಚ್ಚೇತಿ ವಕ್ತವ್ಯಮ್) ಅಧರ್ಮಿಕಃ ||**

ದ್ವಿಪದ ಸೂತ್ರ. ದ್ವಿತೀಯಾಂತಸಮರ್ಥವಾದ ಧರ್ಮ ಶಬ್ದದಮೇಲೆ ಚರತಿ =ಆಚರಿಸುತ್ತಾನೆ ಎಂಬರ್ಥದಲ್ಲಿ ಠಕ್ ಪ್ರತ್ಯಯ ಬರುತ್ತದೆ. ಧರ್ಮಂ ಚರತಿ | ಧರ್ಮ+ಠಕ್. ಆದಿವೃದ್ಧ್ಯಾದಿ. ಧಾರ್ಮಿಕಃ | ವಾರ್ತಿಕಕಾರರು ಅಧರ್ಮ

ಶಬ್ದದ ಮೇಲೂ ಠಕ್ ಬರುತ್ತದೆ ಎಂದು ಅಧಿಕವಾಗಿ ಹೇಳಿದ್ದಾರೆ. ಆಗ ಆದಿವೃದ್ಧಿ ಅಲೋಪ ಬಂದರೆ ಆಥರ್ವಣಿಕಃ ಎಂದಾಗುತ್ತದೆ. ಅಥರ್ವಣವನ್ನು ಆಚರಿಸುವವನು.

ಶಿಲ್ಪಾರ್ಥದಲ್ಲಿ ಠಕ್ ಹೇಳುವ ಸೂತ್ರ.

**೧೧೭೯. ಶಿಲ್ಪಮ್ || ೪-೪-೫೫ ||**

**ಮೃದಙ್ಗವಾದನಂ ಶಿಲ್ಪಮಸ್ಯ ಮಾರ್ದಙ್ಗಿಕಃ ||**

'ತದಸ್ಯ ಪಣ್ಯಮ್' ಸೂತ್ರದಿಂದ 'ತತ್' ಎಂಬ ಪ್ರಥಮಾಂತಪದವೂ 'ಅಸ್ಯ' ಪದವೂ ಅನುವೃತ್ತವಾಗುತ್ತದೆ. **ಸೂತ್ರಾರ್ಥ**—ಪ್ರಥಮಾಂತ ಶಬ್ದದ ಮೇಲೆ, ಇವನ ಶಿಲ್ಪ=ಕಲಾಕೌಶಲವೆಂಬರ್ಥದಲ್ಲಿ ಠಕ್ ಪ್ರತ್ಯಯ ಬರುತ್ತದೆ. ಮೃದಂಗವಾದನವು ಇವನ ಕಲಾಕೌಶಲ. ಮೃದಂಗ+ಠಕ್. ಆದಿವೃದ್ಧಿ, ಅಲೋಪ. ಮಾರ್ದಂಗಿಕಃ=ಮದ್ದಲೆಗಾರ.

ಪ್ರಹರಣಾರ್ಥದಲ್ಲಿ ಠಕ್ ಹೇಳುವ ಸೂತ್ರ.

**೧೧೩೦. ಪ್ರಹರಣಮ್ || ೪-೪-೫೭ ||**

**ತದಸ್ಯೇತ್ಯೇವ । ಅಸಿಃ ಪ್ರಹರಣಮಸ್ಯ ಆಸಿಕಃ । ಧಾನುಷ್ಕಃ ||**

'ತದಸ್ಯ' ಅನುವೃತ್ತಿ ಇದ್ದೇ ಇದೆ. ಇದು ಇವನ ಆಯುಧವೆಂಬರ್ಥದಲ್ಲಿ ಪ್ರಥಮಾಂತ ಶಬ್ದದಮೇಲೆ ಠಕ್ ಪ್ರತ್ಯಯ ಬರುತ್ತದೆ. ಯಾವುದರಿಂದ ಹೊಡೆಯಲ್ಪಡುವುದೋ ಅದು ಪ್ರಹರಣ=ಆಯುಧ. ಅಸಿಃ=ಖಡ್ಗವು ಇವನ ಆಯುಧ ಎಂಬರ್ಥದಲ್ಲಿ, ಅಸಿ+ಠಕ್. ಆದಿವೃದ್ಧಿ, ಇಕಾರಲೋಪ. ಆಸಿಕಃ=ಖಡ್ಗದಿಂದ ಹೊಡೆಯುವವನು. ಧನುಃ ಪ್ರಹರಣಮಸ್ಯ. ಧನುಸ್+ಠಕ್. ಉಸಿನ ಪರದಲ್ಲಿ ಠ ಬಂದುದರಿಂದ 'ಠಸ್ಯೇಕಃ' ಸೂತ್ರವನ್ನು ಬಾಧಿಸಿ 'ಇಸುಸುಕ್ತಾಂತಾತ್ಕಃ' ಸೂತ್ರದಿಂದ ಕೇವಲ ಕಾದೇಶ. ಆದಿವೃದ್ಧಿ. ಧಾನುಷ್ಕಃ=ಬಿಲ್ಲು ಆಯುಧವಾಗಿ ಇರುವವನು.

ಶೀಲಾರ್ಥದಲ್ಲಿ ಠಕ್ ಹೇಳುವ ಸೂತ್ರ.

**೧೧೩೧. ಶೀಲಮ್ || ೪-೪-೬೧ ||**

**ಅಪೂಪಭಕ್ಷಣಂ ಶೀಲಮಸ್ಯ ಆಪೂಪಿಕಃ ||**

'ತದಸ್ಯ' ಅನುವೃತ್ತಿ. ಇದು ಇವನ ಸ್ವಭಾವವೆಂಬರ್ಥದಲ್ಲಿ ಪ್ರಥಮಾಂತ ಶಬ್ದದಮೇಲೆ ಠಕ್ ಪ್ರತ್ಯಯ ಬರುತ್ತದೆ. ಅಪೂಪ=ದೋಸೆ ತಿನ್ನುವುದೇ ಇವನ

ಸ್ವಭಾವ. ಅಪೂಪ+ಠಕ್. ಆದಿವೃದ್ಧ್ಯಾದಿ. ಆಪೂಪಿಕಃ=ನಿತ್ಯ ದೋಸೆ ತಿನ್ನುವವನು. ಅಪೂಪ ಪದಕ್ಕೆ ಲಕ್ಷಣೆಯಿಂದ ಅಪೂಪ ತಿನ್ನುವುದು ಎಂದರ್ಥ.

ವಸತ್ಯರ್ಥದಲ್ಲಿ ಠಕ್ ಹೇಳುವ ಸೂತ್ರ.

**೧೧೩೨. ನಿಕಟೇ ವಸತಿ ॥ ೪-೪-೭೩ ॥ ನೈಕಟಿಕೋ ಭಿಕ್ಷುಕಃ ॥**

ಇತಿ ಠಗಧಿಕಾರಃ ॥ (ಪ್ರಾಗ್ವಹತೀಯಾಃ) ॥ ೭ ॥

'ತತ್ರ ನಿಯುಕ್ತಃ' ಸೂತ್ರದಿಂದ 'ತತ್ರ' ಅನುವೃತ್ತಿ. ಅದು ಸಪ್ತಮ್ಯಂತಾನುಕರಣಶಬ್ದ. **ಸೂತ್ರಾರ್ಥ**—ವಾಸಮಾಡುತ್ತಾನೆ ಎಂಬರ್ಥದಲ್ಲಿ ಸಪ್ತಮ್ಯಂತ ನಿಕಟ ಶಬ್ದದ ಮೇಲೆ ಠಕ್ ಪ್ರತ್ಯಯ. (ಸಮೀಪದಲ್ಲಿ ವಾಸಿಸುವವ.) ನಿಕಟೇ ವಸತಿ । ನಿಕಟ+ಠಕ್. ಆದಿವೃದ್ಧಿ, ಅಲೋಪ. ನೈಕಟಿಕಃ=ಭಿಕ್ಷುಕನು. ಹೀಗೆ ತದ್ಧಿತದಲ್ಲಿ ಠಗಧಿಕಾರರೂಪ ಏಳನೇ ಪ್ರಕರಣ ಮುಗಿದಿದೆ. ಇವುಗಳಿಗೆ ಪ್ರಾಗ್ವಹತೀಯಗಳೆಂದೂ ಹೆಸರು.

## ೩೦. ಅಥ ಯದಧಿಕಾರಃ

ಯದಧಿಕಾರ ಹೇಳುವ ಸೂತ್ರ.

**೧೧೩೩. ಪ್ರಾಗ್ಘಿತಾದ್ಯತ್ ॥ ೪-೪-೭೫ ॥**

**ತಸ್ಮೈ ಹಿತಮಿತ್ಯತಃ ಪ್ರಾಗ್ ಯದಧಿಕ್ರಿಯತೇ ॥**

**ಪ್ರಾಕ್**, ಹಿತಾತ್, ಯತ್ ॥ ತ್ರಿಪದ ಸೂತ್ರ. ಹಿತಪದದಿಂದ, ಹಿತಪದದಿಂದ ಕೂಡಿದ ಸೂತ್ರವನ್ನು ತೆಗೆದುಕೊಳ್ಳಬೇಕು. ಕಾರ್ಯವಿಧಾನಮಾಡದಿರುವುದರಿಂದ ಅಧಿಕಾರಸೂತ್ರ. 'ತಸ್ಮೈ ಹಿತಮ್' ಸೂತ್ರದವರೆಗೆ ಯತ್ ಪ್ರತ್ಯಯಕ್ಕೆ ಅಧಿಕಾರ. ಮುಂದೆ ಪ್ರತಿಯೊಂದು ಸೂತ್ರದಲ್ಲಿಯೂ ಯತ್ ಬರುತ್ತದೆಂದು ತಿಳಿಯಬೇಕು.

ವಹತ್ಯರ್ಥದಲ್ಲಿ ಯತ್ ಹೇಳುವ ಸೂತ್ರ.

**೧೧೩೪. ತದ್ವಹತಿ ರಥಯುಗಪ್ರಾಸಙ್ಗಮ್ ॥ ೪-೪-೭೬ ॥**

**ರಥಂ ವಹತಿ ರಥ್ಯಃ । ಯುಗ್ಯಃ । ಪ್ರಾಸಙ್ಗ್ಯಃ ॥**

ತ್ರಿಪದ ಸೂತ್ರ. 'ತತ್' ದ್ವಿತೀಯಾಂತ. **ಸೂತ್ರಾರ್ಥ**—ಹೊರುತ್ತದೆ ಎಂಬರ್ಥದಲ್ಲಿ ರಥ, ಯುಗ, ಪ್ರಾಸಂಗ ಶಬ್ದಗಳೇ ಪ್ರಕೃತಿಯಾಗಿರುವ ದ್ವಿತೀಯಾಂತದ ಮೇಲೆ ಯತ್ ಪ್ರತ್ಯಯ ಬರುತ್ತದೆ. ರಥಂ ವಹತಿ । ರಥ+ಯತ್. 'ಯಸ್ಯೇತಿ ಚ'

ಅಕಾರಲೋಪ. ರಥ್ಯಃ=ರಥವನ್ನು ಎಳೆಯುವುದು ; ಕುದುರೆ. ಯುಗಂ ವಹತಿ ಯುಗ್ಯಃ=ನೊಗವನ್ನು ಹೊರುವುದು ; ಎತ್ತು ಮುಂತಾದವು. ಉಳುವ ಕಾಲದಲ್ಲಿ ಶಿಕ್ಷಣಕ್ಕೋಸ್ಕರ ಎತ್ತಿನ ಕತ್ತಿನ ಮೇಲೆ ಹಾಕುವ ಮರದ ದಿಮ್ಮಿಗೆ (ಕೊರಡು) ಪ್ರಾಸಂಗವೆಂದು ಹೆಸರು. ಪ್ರಾಸಂಗಂ ವಹತಿ। ಪ್ರಾಸಂಗ್ಯಃ=ಎತ್ತು.

ಧುರ್ ಶಬ್ದಕ್ಕೆ ಯತ್, ಢಕ್ ಹೇಳುವ ಸೂತ್ರ.

**೧೧೩೪. ಧುರೋ ಯಡ್ಢಕೌ ॥ ೪-೪-೭೭ ॥**

**ಹಲಿ ಚೇತಿ ದೀರ್ಘೇ ಪ್ರಾಪ್ತೇ ॥**

ದ್ವಿಪದ ಸೂತ್ರ. ಯತ್ ಚ ಢಕ್ ಚ ಯಡ್ಢಕೌ. ಧುರ್ ಶಬ್ದವೇ ಪ್ರಕೃತಿಯಾಗಿರುವ ದ್ವಿತೀಯಾಂತದ ಮೇಲೆ ಯತ್, ಢಕ್ ಪ್ರತ್ಯಯಗಳು ವಹತಿ ಅರ್ಥದಲ್ಲಿ ಬರುತ್ತವೆ. ಧುರಂ ವಹತಿ=ಭಾರವನ್ನು ಹೊರುವವನು. ಧುರ್+ಯತ್. ರೇಫಾಂತವಾದುದರಿಂದ 'ಹಲಿ ಚ' (ಸೂ. ೬೧೪) ಸೂತ್ರದಿಂದ ಉಪಧಾದೀರ್ಘ ಪ್ರಾಪ್ತವಾದರೆ ಅದಕ್ಕೆ ನಿಷೇಧ ಹೇಳುತ್ತಾನೆ.

ಉಪಧಾದೀರ್ಘನಿಷೇಧ ಹೇಳುವ ಸೂತ್ರ.

**೧೧೩೬. ನ ಭಕುರ್ಛುರಾಮ್ ॥ ೮-೨-೭೯ ॥**

**ಭಸ್ಯ ಕುರ್ಛುರೋಶ್ಚೋಪಧಾಯಾ ಇಕೋ ದೀರ್ಘೋ ನ ಸ್ಯಾತ್। ಧುರ್ಯಃ। ಧೌರೇಯಃ॥**

ದ್ವಿಪದ ಸೂತ್ರ. ಭಂ ಚ ಕುರ್ ಚ ಛುರ್ ಚ ಭಕುರ್ಛುರಃ। ತೇಷಾಮ್. 'ರ್ವೋರುಪಧಾಯಾಃ—' ಸೂತ್ರದಿಂದ ಉಪಧಾಯಾಃ, ಇಕಃ, ದೀರ್ಘಃ ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಭಸಂಜ್ಞೆಯಿಂದ ಕೂಡಿದ ಶಬ್ದದ ಉಪಧೆಯಾದ, ಕುರ್, ಛುರ್‌ಗಳ ಉಪಧೆಯಾದ ಇಕಿಗೆ ದೀರ್ಘವು ಬರುವುದಿಲ್ಲ. ಧುರ್+ಯ ಎಂಬಲ್ಲಿ ಯಾದಿಪ್ರತ್ಯಯ ಪರದಲ್ಲಿರುವುದರಿಂದ ಭಸಂಜ್ಞೆ ಬರುತ್ತದೆ. ಇಕಿಗೆ ದೀರ್ಘನಿಷೇಧ ಬಂದರೆ ಧುರ್ಯಃ ಎಂದಾಗುತ್ತದೆ. ಭಾರ ಹೊರುವವನು. ಢಕ್ ಬಂದರೆ 'ಆಯನೇಯೀ—' ಸೂತ್ರದಿಂದ ಢಕ್ಕೆ ಏಯಾದೇಶ. ಕಿತ್ತಾದುದರಿಂದ ಆದಿವೃದ್ಧಿ. ಧೌರ್+ಏಯ. ಧೌರೇಯಃ।

ನೌ ಮುಂತಾದವುಗಳಿಗೆ ಅರ್ಥವಿಶೇಷದಲ್ಲಿ ಯತ್ ಹೇಳುವ ಸೂತ್ರ.

**೧೧೩೭. ನೌವಯೋಧರ್ಮವಿಷಮೂಲಮೂಲಸೀತಾತುಲಾಭ್ಯಸ್ತಾರ್ಯತುಲ್ಯಪ್ರಾಪ್ಯವಧ್ಯಾನಾಮ್ಯಸಮಸಮಿತಸಂಮಿತೇಷು ॥ ೪-೪-೯೧ ॥**

**ನಾವಾ ತಾರ್ಯಂ ನಾವ್ಯಂ ಜಲಮ್ । ವಯಸಾ ತುಲ್ಯೋ ವಯಸ್ಯಃ। ಧರ್ಮೇಣ ಪ್ರಾಪ್ಯಂ ಧರ್ಮ್ಯಮ್ । ವಿಷೇಣ ವಧ್ಯೋ ವಿಷ್ಯಃ । ಮೂಲೇನ ಆನಾಮ್ಯಂ ಮೂಲ್ಯಮ್ । ಮೂಲೇನ ಸಮೋ ಮೂಲ್ಯಃ । ಸೀತಯಾ ಸಮಿತಂ ಸೀತ್ಯಂ ಕ್ಷೇತ್ರಮ್ । ತುಲಯಾ ಸಂಮಿತಂ ತುಲ್ಯಮ್ ।**

ದ್ವಿಪದ ಸೂತ್ರ. ನೌಶ್ಚ, ವಯಶ್ಚ, ಧರ್ಮಶ್ಚ, ವಿಷಂ ಚ, ಮೂಲಂ ಚ, ನೌವ....ಮೂಲಾನಿ. ಮೂಲಂ ಚ, ಸೀತಾ ಚ, ತುಲಾ ಚ, ಮೂಲಸೀತಾತುಲಾಃ। ನೌವ....ಮೂಲಾನಿ ಚ, ಮೂಲಸೀತಾತುಲಾಶ್ಚ ನೌವಯೋ....ತುಲಾಃ। ತಾಭ್ಯಃ। ಮೂರು ಸಾರಿ ದ್ವಂದ್ವಸಮಾಸ ಮಾಡಬೇಕು. ಇಲ್ಲವಾದರೆ ಮೂಲಮೂಲವೆಂದಿರುವಾಗ ಏಕಶೇಷ ಬಂದು ಒಂದೇ ಮೂಲ ಶಬ್ದ ಉಳಿಯಬೇಕಾಗುತ್ತದೆ. **ಸೂತ್ರಾರ್ಥ**—ನೌ, ವಯಸ್, ಧರ್ಮ, ವಿಷ, ಮೂಲ, ಮೂಲ, ಸೀತಾ, ತುಲಾ ಶಬ್ದಗಳೇ ಪ್ರಕೃತಿಯಾಗಿರುವ ತೃತೀಯಾಂತದ ಮೇಲೆ ಕ್ರಮವಾಗಿ ತಾರ್ಯ, ತುಲ್ಯ, ಪ್ರಾಪ್ಯ, ವಧ್ಯ, ಆನಾಮ್ಯ, ಸಮ, ಸಮಿತ, ಸಂಮಿತ ಅರ್ಥದಲ್ಲಿ ಯತ್ ಪ್ರತ್ಯಯ ಬರುತ್ತದೆ. ಯಥಾಸಂಖ್ಯಪರಿಭಾಷೆಯಿಂದ ಕ್ರಮವು ಲಬ್ಧವಾಗುತ್ತದೆ. ಕ್ರಮವಾಗಿ ಉದಾಹರಣೆ—ದೋಣಿಯಿಂದ ದಾಟಿಸಲು ಯೋಗ್ಯವಾದದ್ದು. ನೌ+ಯ. 'ವಾಂತೋ ಯಿ ಪ್ರತ್ಯಯೇ' ವಾಂತಾದೇಶ. ನಾವ್+ಯ=ನಾವ್ಯಮ್. ವಯಸ್ಸಿನಿಂದ ಸಮನಾದವನು (ಮಿತ್ರ). ವಯಸ್+ಯ=ವಯಸ್ಯಃ। ಧರ್ಮದಿಂದ ಹೊಂದಲು ಯೋಗ್ಯವಾದದ್ದು. ಧರ್ಮ+ಯ. 'ಯಸ್ಯೇತಿ ಚ' ಧರ್ಮ್ಯಮ್=ಧರ್ಮಫಲ. ವಿಷದಿಂದ ಕೊಲ್ಲಲ್ಪಡುವುದು. ವಿಷ+ಯ. ಅಲೋಪ. ವಿಷ್ಯಃ। ಮೂಲೇನ ಆನಾಮ್ಯಮ್ । ನಿಜವಾದ ಬೆಲೆ ಮೂಲ. ಅದರಿಂದ ಅಧಿಕಹೊಂದಿರುವುದು ಮೂಲ್ಯಮ್. ಲಾಭಭಾಗ. ಲಾಭಸಹಿತ ಮೂಲಧನವೂ ಆಗುತ್ತದೆ. ಮೂಲೇನ ಸಮಃ=ಬುಡದಿಂದ ಸಮಾನವಾದದ್ದು. ಮೂಲ್ಯಃ। ಸೀತಯಾ ಸಮಿತಮ್। ನೇಗಿಲಿನಿಂದ (ಕಬ್ಬಿಣದ ಪಟ್ಟಿ) ಉತ್ತು ಮಾಡಿದ ಧಾರೆ. ಅದರಿಂದ ಸಮವಾಗಿ ಮಾಡಿರುವುದು. ಉಳುವುದರಿಂದ ನಿಮ್ನೋನ್ನತಭಾಗ ಸರಿಯಾಗುತ್ತದೆ. ಸೀತಾ+ಯ. ಅಲೋಪ. ಸೀತ್ಯಮ್. ತುಲಯಾ ಸಂಮಿತಮ್=ತಕ್ಕಡಿಯಿಂದ ಪರಿಚ್ಛಿನ್ನವಾದುದು. ತುಲಾ+ಯ. ತುಲ್ಯಮ್=ಸಮಾನ, ಸದೃಶ.

ಸಾಧ್ವರ್ಥದಲ್ಲಿ ಯತ್ ಹೇಳುವ ಸೂತ್ರ.

೧೧೩೭. **ತತ್ರ ಸಾಧುಃ** ॥ ೪-೪-೯೮ ॥

**ಅಗ್ರೇ ಸಾಧುಃ—ಅಗ್ರ್ಯಃ। ಸಾಮಸು ಸಾಧುಃ ಸಾಮನ್ಯಃ। ಯೇ ಚಾಭಾವಕರ್ಮಣೋರಿತಿ ಪ್ರಕೃತಿಭಾವಃ। ಕರ್ಮಣ್ಯಃ। ಶರಣ್ಯಃ।**

ದ್ವಿಪದ ಸೂತ್ರ. 'ತತ್ರ' ಸಪ್ತಮ್ಯಂತಕ್ಕೆ ಅನುಕರಣ. **ಸೂತ್ರಾರ್ಥ**—ಸಪ್ತಮ್ಯಂತ ಸಮರ್ಥ ಶಬ್ದದ ಮೇಲೆ ಸಾಧು (=ಸಮರ್ಥ, ನಿಪುಣ) ಎಂಬರ್ಥದಲ್ಲಿ ಯತ್ ಪ್ರತ್ಯಯ ಬರುತ್ತದೆ. ಸಾಧು ಪದಕ್ಕೆ ಹಿತವೆಂಬರ್ಥವಿದ್ದರೂ ಮುಂದೆ ಹಿತಾರ್ಥದಲ್ಲಿ ಪ್ರತ್ಯಯ ಹೇಳುವುದರಿಂದ ಇಲ್ಲಿ ಪ್ರವೀಣ, ಯೋಗ್ಯ ಮುಂತಾದ ಅರ್ಥ ಹೇಳಬೇಕು. ಅಗ್ರೇ ಸಾಧುಃ । ಅಗ್ರ+ಯ. ಅಲೋಪ. ಅಗ್ರ್ಯಃ । ಸಾಮಸು ಸಾಧುಃ । ಸಾಮನ್+ಯ. 'ಯೇ ಚಾಭಾವಕರ್ಮಣೋಃ' (ಸೂತ್ರ ೧೦೨೬) ಸೂತ್ರದಿಂದ ಟಿಲೋಪಕ್ಕೆ ಅಪವಾದವಾಗಿ ಪ್ರಕೃತಿಭಾವ. ಸಾಮನ್ಯಃ । ಕರ್ಮಣಿ—ಸಾಧುಃ । ಕರ್ಮನ್+ಯ. 'ಅಟ್‌ಕುಪ್ವಾಙ್—' ಸೂತ್ರದಿಂದ ಣತ್ವ. ಕರ್ಮಣ್ಯಃ । ಶರಣೇಷು ಸಾಧುಃ । ಶರಣ+ಯ. ಅಲೋಪ. ಶರಣ್ಯಃ ।

ಸಾಧ್ವರ್ಥದಲ್ಲಿ ಯಪ್ರತ್ಯಯ ಹೇಳುವ ಸೂತ್ರ.

**೧೧೬೯. ಸಭಾಯಾ ಯಃ ॥ ೪-೪-೧೦೫ ॥ ಸಭ್ಯಃ ॥**

ಇತಿ ಯತೋಽವಧಿಃ (ಪ್ರಾಗ್ಘಿತೀಯಾಃ) ॥ ೮ ॥

ದ್ವಿಪದ ಸೂತ್ರ. ಸಭಾ ಶಬ್ದವೇ ಪ್ರಕೃತಿಯಾಗಿರುವ ಸಪ್ತಮ್ಯಂತದ ಮೇಲೆ ಸಾಧ್ವರ್ಥದಲ್ಲಿ ಯಪ್ರತ್ಯಯು ಬರುತ್ತದೆ. ಯತಿಗೂ ಯಕ್ಕೂ ಸ್ವರದಲ್ಲಿ ವ್ಯತ್ಯಾಸ ವಿದೆ. ಸಭಾಯಾಂ ಸಾಧುಃ । ಸಭಾ+ಯ. 'ಯಸ್ಯೇತಿ ಚ' ಸಭ್ಯಃ । ಸಭೆಯಲ್ಲಿ ಯೋಗ್ಯನಾದವನು. ಈ ರೀತಿ ತದ್ಧಿತದಲ್ಲಿ ಯದಧಿಕಾರರೂಪ ಎಂಟನೇ ಪ್ರಕರಣ ಮುಗಿಯಿತು. ಇದಕ್ಕೆ ಪ್ರಾಗ್ಘಿತೀಯ ಪ್ರಕರಣವೆಂದೂ ಹೆಸರು.

# ೩೧. ಅಥ ಛಯತೋರಧಿಕಾರಃ

ಛಾಧಿಕಾರ ಹೇಳುವ ಸೂತ್ರ.

**೧೧೭೦. ಪ್ರಾಕ್ ಕ್ರೀತಾಚ್ಛಃ ॥ ೫-೧-೧ ॥**

**ತೇನ ಕ್ರೀತಮಿತ್ಯತಃ ಪ್ರಾಕ್ ಛೋಽಧಿಕ್ರಿಯತೇ ॥**

ತ್ರಿಪದ ಸೂತ್ರ. 'ತೇನ ಕ್ರೀತಮ್' ಸೂತ್ರದವರೆಗೆ ಈ ಸೂತ್ರದ ಅಧಿಕಾರ. ಅಲ್ಲಿಯವರೆಗೆ ಛಪ್ರತ್ಯಯ ಬರುತ್ತದೆಂದು ಆಯಾಯ ಸೂತ್ರವಾಕ್ಯಗಳಲ್ಲಿ ಸೇರಿಸಿ ಕೊಳ್ಳಬೇಕು.

ಛಕ್ಕೆ ಅಪವಾದವಾಗಿ ಯತ್ ಹೇಳುವ ಸೂತ್ರ.

**೧೧೪೧. ಉಗವಾದಿಭ್ಯೋ ಯತ್ ॥ ೫-೧-೨ ॥**

**ಪ್ರಾಕ್ ಕ್ರೀತಾದಿತ್ಯೇವ। ಉವರ್ಣಾಂತಾದ್ಗವಾದಿಭ್ಯಶ್ಚ ಯತ್ ಸ್ಯಾತ್। ಛಸ್ಯಾಪವಾದಃ। ಶಙ್ಕವೇ ಹಿತಮ್ ಶಙ್ಕವ್ಯಂ ದಾರು। ಗವ್ಯಮ್। ವಾ ॥ (ನಾಭಿ ನಭಂ ಚ)। ನಭ್ಯೋಽಕ್ಷಃ। ನಭ್ಯಮಞ್ಜನಮ್।**

ದ್ವಿಪದ ಸೂತ್ರ. ಉಶ್ಚ, ಗವಾದಯಶ್ಚ, ಉಗವಾದಯಃ। ತೇಭ್ಯಃ। ಉ ಪ್ರಾತಿಪದಿಕಕ್ಕೆ ವಿಶೇಷಣವಾದುದರಿಂದ ತದಂತಲಾಭ. 'ತೇನ ಕ್ರೀತಮ್' ಸೂತ್ರದವರೆಗೆ ಇದಕ್ಕೂ ಸಂಬಂಧವಿದೆ. **ಸೂತ್ರಾರ್ಥ**—ಉವರ್ಣಾಂತಶಬ್ದಕ್ಕೂ, ಗವಾದಿಗಣಪಠಿತವಾದ ಶಬ್ದಗಳಿಗೂ ಮುಂದೆ ಹೇಳುವ ಅರ್ಥದಲ್ಲಿ ಯತ್ ಪ್ರತ್ಯಯ ಬರುತ್ತದೆ. ಛಾಧಿಕಾರದಿಂದ ಛಪ್ರತ್ಯಯ ಬರುತ್ತಿರುವಾಗ ಇದನ್ನು ಹೇಳಿದುದರಿಂದ ಛಪ್ರತ್ಯಯಕ್ಕೆ ಇದು ಅಪವಾದ. ಮುಂದೆ ಹಿತಾರ್ಥ ಹೇಳುತ್ತಾನೆ. ಶಂಕವೇ ಹಿತಮ್। ಶಂಕು+ಯ. (ಉವರ್ಣಾಂತವಾದುದರಿಂದ ಯತ್) 'ಓರ್ಗುಣಃ' ಸೂತ್ರದಿಂದ ಉಕಾರಕ್ಕೆ ಗುಣ. 'ವಾಂತೋ ಯಿ ಪ್ರತ್ಯಯೇ' ಅವಾದೇಶ. ಶಂಕವ್ಯಮ್=ಗೂಟಕ್ಕೆ ಯೋಗ್ಯವಾದ ಮರ. ಗವೇ ಹಿತಮ್। ಗೋ+ಯ. ಹಿಂದಿನಂತೆ ವಾಂತಾದೇಶ. ಗವ್ಯಮ್=ಗೋವಿಗೆ ಹಿತವಾದದ್ದು. ಗವಾದಿಯಲ್ಲಿ ನಾಭಿ ಶಬ್ದ ಪಠಿತವಾಗಿದೆ. ಅದಕ್ಕೆ ಹಿತಾರ್ಥದಲ್ಲಿ ಯತ್ ಬಂದರೆ ನಾಭಿ+ಯ ಎಂದಿರುವಾಗ ಅದಕ್ಕೆ ಗಣಸೂತ್ರದಿಂದ ನಭಾದೇಶ ಹೇಳುತ್ತಾನೆ. ನಭ+ಯ. 'ಯಸ್ಯೇತಿ ಚ' ಅಲೋಪ. ನಭ್ಯಃ =ಅಚ್ಚುಮರ; ತೂತಿನಿಂದ ಕೂಡಿದ ಚಕ್ರದ ಮಧ್ಯಮರ ನಾಭಿ. ಅದರಲ್ಲಿ ಅಚ್ಚಿನ ಮರ ಪ್ರವೇಶಿಸಿರುವುದರಿಂದ ಹಿತವಾಗಿದೆ, ಅನುಗುಣವಾಗಿದೆ. ಅಥವಾ ನಭ್ಯಮಂಜನಮ್=ಹೊಟ್ಟೆಗೆ ಹಿತವಾದದ್ದು ಅಭ್ಯಂಗ.

ಹಿತಾರ್ಥದಲ್ಲಿ ಛಪ್ರತ್ಯಯ ಹೇಳುವ ಸೂತ್ರ.

**೧೧೪೨. ತಸ್ಮೈ ಹಿತಮ್ ॥ ೫-೧-೫ ॥**

**ವತ್ಸೇಭ್ಯೋ ಹಿತೋ ವತ್ಸೀಯೋ ಗೋಧುಕ್ ॥**

ದ್ವಿಪದ ಸೂತ್ರ. ಛಃ ಅಧಿಕಾರ. ಪ್ರಾತಿಪದಿಕವೇ ಪ್ರಕೃತಿಯಾಗಿರುವ ಚತುರ್ಥ್ಯಂತದಮೇಲೆ ಹಿತಾರ್ಥದಲ್ಲಿ ಛಪ್ರತ್ಯಯ ಬರುತ್ತದೆ. ಉವರ್ಣಾಂತ ಗವಾದಿಗಳಾಗಿದ್ದರೆ ಆಗ ಯತ್‌ಪ್ರತ್ಯಯ. ಮಕ್ಕಳಿಗೆ ಹಿತವಾದದ್ದು. ವತ್ಸ+ಛ. 'ಆಯನೇಯೀ—' ಸೂತ್ರದಿಂದ ಛಕ್ಕೆ ಈಯಾದೇಶ. ವತ್ಸ+ಈಯ. 'ಯಸ್ಯೇತಿ ಚ' ವತ್ಸೀಯಃ=ಹಾಲು.

ಅವಯುವವಾಚಕಗಳ ಮೇಲೆ ಯತ್ ಹೇಳುವ ಸೂತ್ರ.

**೧೧೪೩. ಶರೀರಾವಯವಾದ್ಯತ್ ॥ ೫-೧-೬ ॥**

**ದನ್ತ್ಯಮ್ । ಕಣ್ಠ್ಯಮ್ । ನಸ್ಯಮ್ ॥**

ದ್ವಿಪದ ಸೂತ್ರ. 'ತಸ್ಮೈ' ಸಮರ್ಥವಿಭಕ್ತಿ ಅನುವೃತ್ತವಾಗುತ್ತದೆ. **ಸೂತ್ರಾರ್ಥ**—ಶರೀರಾವಯವವಾಚಕ ಪ್ರಾತಿಪದಿಕಗಳೇ ಪ್ರಕೃತಿಯಾಗಿರುವ ಚತುರ್ಥ್ಯಂತದಮೇಲೆ ಹಿತಾರ್ಥದಲ್ಲಿ ಯತ್ ಪ್ರತ್ಯಯ ಬರುತ್ತದೆ. ದಂತೇಭ್ಯಃ ಹಿತವ್. ದಂತ+ಯ. ಅಲೋಪ. ದಂತ್ಯವ್=ಹಲ್ಲುಪುಡಿ ಮುಂತಾದವು. ಕಂಠಾಯ ಹಿತವ್ । ಕಂಠ+ಯ. ಕಂಠ್ಯವ್=ಕುತ್ತಿಗೆಗೆ ಹಿತವಾದದ್ದು. ನಾಸಿಕಾಯೈ ಹಿತವ್ । ನಾಸಿಕಾ+ಯ. 'ಪದ್ದನ್ನೋಮಾಸ್—' (ಲಘುಕೌಮುದಿಯಲ್ಲಿ ಹೇಳಿಲ್ಲ) ಸೂತ್ರದಿಂದ ನಾಸಿಕಾ ಶಬ್ದಕ್ಕೆ ನಸಾದೇಶ. ನಸ್+ಯ=ನಸ್ಯವ್. ನಾಸಿಕಾಚೂರ್ಣ.

ಹಿತಾರ್ಥದಲ್ಲಿ ಖಪ್ರತ್ಯಯ ಹೇಳುವ ಸೂತ್ರ.

**೧೧೪೪. ಆತ್ಮನ್ವಿಶ್ವಜನಭೋಗೋತ್ತರಪದಾತ್ ಖಃ ॥ ೫-೧-೯ ॥**

ದ್ವಿಪದ ಸೂತ್ರ. ಆತ್ಮನ್, ವಿಶ್ವಜನ, ಭೋಗೋತ್ತರಪದಪ್ರಕೃತಿಯಾಗಿರುವ ಚತುರ್ಥ್ಯಂತದಮೇಲೆ ಹಿತಾರ್ಥದಲ್ಲಿ ಖಪ್ರತ್ಯಯ ಬರುತ್ತದೆ. ಆತ್ಮನೇ ಹಿತವ್. ತನಗೆ ಹಿತವಾದದ್ದು. ಆತ್ಮನ್+ಖ. 'ಆಯನೇಯೀ—' ಸೂತ್ರದಿಂದ ಖಕ್ಕೆ ಈನ್ ಆದೇಶ. ಆತ್ಮನ್+ಈನ. 'ನಸ್ತದ್ಧಿತೇ' ಸೂತ್ರದಿಂದ ಟಿಲೋಪ ಪ್ರಾಪ್ತವಾದರೆ ಅದಕ್ಕೆ ಅಪವಾದವಾಗಿ ಪ್ರಕೃತಿಭಾವ ಹೇಳುತ್ತಾನೆ.

ಖಪರವಾದಾಗ ಪ್ರಕೃತಿಭಾವ ಹೇಳುವ ಸೂತ್ರ.

**೧೧೪೫. ಆತ್ಮಾಧ್ವಾನೌ ಖೇ ॥ ೬-೪-೧೬೯ ॥**

**ಏತೌ ಖೇ ಪ್ರಕೃತ್ಯಾ ಸ್ತಃ । ಆತ್ಮನೇ ಹಿತಮ್ ಆತ್ಮನೀನಮ್ । ವಿಶ್ವಜನೀನಮ್ । ಮಾತೃಭೋಗೀಣಃ ॥**

ಇತಿ ಛಯತೋರವಧಿಃ (ಪ್ರಾಕ್‌ಕ್ರೀತೀಯಾಃ) ॥ ೯ ॥

ದ್ವಿಪದ ಸೂತ್ರ. 'ಪ್ರಕೃತ್ಯೈಕಾಚ್' ಸೂತ್ರದಿಂದ 'ಪ್ರಕೃತ್ಯಾ' ಅನುವೃತ್ತಿ. **ಸೂತ್ರಾರ್ಥ**—ಆತ್ಮನ್, ಅಧ್ವನ್ ಶಬ್ದಗಳು ಖಪ್ರತ್ಯಯಪರದಲ್ಲಿರುವಾಗ ಪ್ರಕೃತಿಭಾವವನ್ನು ಹೊಂದುತ್ತವೆ. ಪ್ರಕೃತ ಖಪರವಾದುದರಿಂದ ಪ್ರಕೃತಿಭಾವ ಬಂದರೆ ಆತ್ಮನೀನವ್. ವಿಶ್ವಜನಾಯ ಹಿತವ್ । ಸಕಲರಿಗೆ ಹಿತವಾದದ್ದು. ವಿಶ್ವ

ಜನ+ಖ. ಈನಾದೇಶ. ಅಲೋಪ ವಿಶ್ವಜನೀನಮ್. ಭೋಗ ಶಬ್ದವೇ ಉತ್ತರ ಪದವಾಗಿರುವುದಕ್ಕೆ—ಮಾತೃಭೋಗಾಯ ಹಿತಮ್ । ಮಾತೃಭೋಗ+ಖ. ಮಾತೃ ಭೋಗೀಣಃ । ತಾಯಿಯ ಶರೀರಕ್ಕೆ ಹಿತವಾದುದು. ಈ ರೀತಿ ತದ್ಧಿತದಲ್ಲಿ ಛಯತ್ ಪ್ರತ್ಯಯಾಧಿಕಾರರೂಪ ಒಂಬತ್ತನೇ ಪ್ರಕರಣ ಮುಗಿದಿದೆ. ಇದಕ್ಕೆ ಪ್ರಾಕ್ಕ್ರೀತೀಯ ಪ್ರಕರಣವೆಂದು ಹೆಸರು.

## ೩೨. ಅಥ ಠಞಧಿಕಾರಃ

ಠಞಧಿಕಾರ ಹೇಳುವ ಸೂತ್ರ.

**೧೧೪೬. ಪ್ರಾಗ್ವತೇಷ್ಠಞ್ ॥ ೫-೧-೧೮ ॥**

**ತೇನ ತುಲ್ಯಮಿತಿ ವತಿಂ ವಕ್ಷ್ಯತಿ, ತತಃ ಪ್ರಾಕ್ ಠಞಧಿಕ್ರಿಯತೇ ॥**

ತ್ರಿಪದ ಸೂತ್ರ. 'ತೇನ ತುಲ್ಯಂ ಕ್ರಿಯಾ ಚೇದ್ವತಿಃ' ಸೂತ್ರದವರೆಗೆ ಠಞ್ ಪ್ರತ್ಯಯಕ್ಕೆ ಅಧಿಕಾರ. ಉತ್ತರಸೂತ್ರಗಳಲ್ಲಿ ಠಞ್ ಪ್ರತ್ಯಯ ಬರುತ್ತದೆಂದು ತಿಳಿಯ ಬೇಕು.

ಕ್ರೀತಾರ್ಥದಲ್ಲಿ ಠಞ್ ಹೇಳುವ ಸೂತ್ರ.

**೧೧೪೭. ತೇನ ಕ್ರೀತಮ್ ॥ ೫-೧-೩೭ ॥**

**ಸಪ್ತತ್ಯಾ ಕ್ರೀತಮ್ ಸಾಪ್ತತಿಕಮ್ । ಪ್ರಾಸ್ಥಿಕಮ್ ॥**

ದ್ವಿಪದ ಸೂತ್ರ. ಪ್ರಾತಿಪದಿಕವೇ ಪ್ರಕೃತಿಯಾಗಿರುವ ತೃತೀಯಾಂತದಮೇಲೆ ಕ್ರೀತಮ್=ಕ್ರಯಕ್ಕೆ ತೆಗೆದುಕೊಂಡದ್ದು ಎಂಬರ್ಥದಲ್ಲಿ ಠಞ್ ಪ್ರತ್ಯಯ ಬರುತ್ತದೆ. ಸಪ್ತತ್ಯಾಕ್ರೀತಮ್=ಎಪ್ಪತ್ತರಿಂದ ಕೊಳ್ಳಲ್ಪಟ್ಟದ್ದು. ಸಪ್ತತಿ+ಠಞ್. ಞಿತ್ತಾದುದರಿಂದ ಆದಿವೃದ್ಧಿ. 'ಠಸ್ಯೇಕಃ' ಠಕಾರಕ್ಕೆ ಇಕಾದೇಶ. ಸಾಪ್ತತಿ+ಇಕ. 'ಯಸ್ಯೇತಿ ಚ' ಇಕಾರಲೋಪ. ಸಾಪ್ತತಿಕಮ್. ಪ್ರಸ್ಥೇನ ಕ್ರೀತಮ್. ಒಂದು ಸೇರು ಧಾನ್ಯದಿಂದ ತೆಗೆದುಕೊಂಡದ್ದು. ಪ್ರಸ್ಥ+ಠಞ್. ಆದಿವೃದ್ಧ್ಯಾದಿ. ಪ್ರಾಸ್ಥಿಕಮ್.

ಸರ್ವಭೂಮಿ, ಪೃಥಿವೀ ಶಬ್ದಗಳ ಮೇಲೆ ಅಣ್, ಅಞ್ ಹೇಳುವ ಸೂತ್ರ.

**೧೧೪೮. ಸರ್ವಭೂಮಿಪೃಥಿವೀಭ್ಯಾಮಣಞೌ ॥ ೫-೧-೪೧ ॥**

**೧೧೪೯. ತಸ್ಯೇಶ್ವರಃ ॥ ೫-೧-೪೨ ॥**

**ಸರ್ವಭೂಮಿಪೃಥಿವೀಭ್ಯಾಮಣಞೌ ಸ್ತಃ । ಅನುಶತಿಕಾದೀನಾಂ ಚ । ಸರ್ವಭೂಮೇರೀಶ್ವರಃ ಸಾರ್ವಭೌಮಃ । ಪಾರ್ಥಿವಃ ॥**

ದ್ವಿಪದ ಸೂತ್ರಗಳು. ಸರ್ವಭೂಮಿ, ಪೃಥಿವೀ ಶಬ್ದಗಳೇ ಪ್ರಕೃತಿಯಾಗಿರುವ ಷಷ್ಠ್ಯಂತದಮೇಲೆ ಈಶ್ವರ ಎಂಬರ್ಥದಲ್ಲಿ ಅಣ್, ಅಞ್ ಪ್ರತ್ಯಯಗಳು ಬರುತ್ತವೆ. ಪ್ರಕೃತಿಪ್ರತ್ಯಯ, ಅರ್ಥನಿರ್ದೇಶ ಎರಡು ಸೂತ್ರಗಳಿಗೂ ಅನ್ವಯಿಸಿರುವುದರಿಂದ ಒಟ್ಟಿಗೆ ಅರ್ಥ ಹೇಳಿರುತ್ತಾನೆ. ಠಞ್‌ಗೆ ಅಪವಾದ. ಅಣ್, ಅಞ್ ಪ್ರತ್ಯಯಗಳು ಬಂದು ಒಂದೇ ರೂಪವಾದರೂ ಸ್ವರದಲ್ಲಿ ವ್ಯತ್ಯಾಸ ಬರುತ್ತದೆ. ಸರ್ವಭೂಮಿಗೆ ಒಡೆಯ ಸರ್ವಭೂಮಿ+ಅ. ಇದು ಅನುಶತಿಕಾದಿಗಣದಲ್ಲಿ ಪಠಿತವಾದುದರಿಂದ ಉಭಯಪದ ವೃದ್ಧಿ (ಸೂ. ೧೧೯೮). ಸಾರ್ವಭೌಮ+ಅ. 'ಯಸ್ಯೇತಿ ಚ' ಸಾರ್ವಭೌಮಃ= ಚಕ್ರವರ್ತಿ. ಪೃಥಿವ್ಯಾಃ ಈಶ್ವರಃ। ಪೃಥಿವೀ+ಅ. ಆದಿವೃದ್ಧಿ, ಈಕಾರಲೋಪ. ಪಾರ್ಥಿವಃ=ರಾಜ.

ಪಂಕ್ತ್ಯಾದಿಶಬ್ದಗಳನ್ನು ನಿಪಾತಮಾಡುವ ಸೂತ್ರ.

**೧೧೫೦. ಪಙ್ಕ್ತಿವಿಂಶತಿತ್ರಿಂಶಚ್ಚತ್ವಾರಿಂಶತ್ಪಂಚಾಶತ್‌ಷಷ್ಟಿಸಪ್ತತ್ಯಶೀತಿನವತಿಶತಮ್ ॥ ೫-೧-೫೯ ॥**

**ಏತೇ ರೂಢಿಶಬ್ದಾ ನಿಪಾತ್ಯಂತೇ ॥**

ಏಕಪದ ಸೂತ್ರ. ಸೂತ್ರಾಂತರದಿಂದ ಕಾರ್ಯ ಬಾರದಿರುವುದರಿಂದ ಪಾಣಿನಿಯೇ ಪ್ರಕ್ರಿಯೆ ಮಾಡಿ ಸಿದ್ಧರೂಪಗಳನ್ನು ತೋರಿಸಿರುವುದರಿಂದ ನಿಪಾತವೆನಿಸುತ್ತದೆ. ಪ್ರಕೃತಿಪ್ರತ್ಯಯ ವಿವೇಚನೆಯಿಲ್ಲದಿರುವುದರಿಂದ ಇವು ರೂಢಿಶಬ್ದಗಳು. ಪಂಕ್ತಿಪದಕ್ಕೆ ನಾನಾರ್ಥಗಳಿವೆ. ಸಾಲು ; ಬ್ರಾಹ್ಮಣಪಂಕ್ತಿ। ಸಂಖ್ಯಾ. ಪಂಕ್ತಿರಥಃ =ದಶರಥ. ಪಂಕ್ತಿಛಂದಸ್ಸು. ವಿಂಶತಿ, ತ್ರಿಂಶತ್, ಚತ್ವಾರಿಂಶತ್, ಪಂಚಾಶತ್, ಷಷ್ಟಿ, ಸಪ್ತತಿ, ಅಶೀತಿ, ನವತಿ, ಶತಮ್ (೨೦, ೩೦, ೪೦, ೫೦, ೬೦, ೭೦, ೮೦, ೯೦, ೧೦೦) ಶಬ್ದಗಳು ಏಕವಚನದಲ್ಲಿದ್ದು ಆಯಾಯ ಸಂಖ್ಯೆಯನ್ನು ಹೇಳುವುದಲ್ಲದೆ, ಸಂಖ್ಯಾವಿಶಿಷ್ಟಪದಾರ್ಥಗಳನ್ನೂ ಹೇಳುತ್ತವೆ. ವಿಂಶತಿಃ ಗಾವಃ=ಇಪ್ಪತ್ತು ಹಸುಗಳು. ಗವಾಂ ವಿಂಶತಿಃ=ಗೋವುಗಳ ಇಪ್ಪತ್ತು. ಶತಂ ಬ್ರಾಹ್ಮಣಾಃ, ಬ್ರಾಹ್ಮಣಾನಾಂ ಶತಮ್ ಇತ್ಯಾದಿ.

ಅರ್ಹತ್ಯರ್ಥದಲ್ಲಿ ಠಞ್ ಹೇಳುವ ಸೂತ್ರ.

**೧೧೫೧. ತದರ್ಹತಿ ॥ ೫-೧-೬೩ ॥**

**ಲಬ್ಧುಂ ಯೋಗ್ಯೋ ಭವತೀತ್ಯರ್ಥೇ ದ್ವಿತೀಯಾನ್ತಾಟ್ಠಞಾದಯಃ ಸ್ಯುಃ। ಶ್ವೇತಚ್ಛತ್ರಮರ್ಹತಿ ಶ್ವೈತಚ್ಛತ್ರಿಕಃ ॥**

ತತ್, ಅರ್ಹತಿ ॥ ದ್ವಿಪದ ಸೂತ್ರ. **ಸೂತ್ರಾರ್ಥ**— ಪ್ರಾತಿಪದಿಕಪ್ರಕೃತಿಕ ದ್ವಿತೀಯಾಂತದಮೇಲೆ ಅರ್ಹತಿ=ಹೊಂದಲು ಯೋಗ್ಯನಾಗುತ್ತಾನೆ ಎಂಬರ್ಥದಲ್ಲಿ

ಠಞ್ ಮುಂತಾದ ಪ್ರತ್ಯಯಗಳು ಬರುತ್ತವೆ. ಶ್ವೇತಚ್ಛತ್ರವನ್ನು ಹೊಂದಲು ಯೋಗ್ಯನಾಗುತ್ತಾನೆ. ಶ್ವೇತಚ್ಛತ್ರ + ಠಞ್. 'ಠಸ್ಯೇಕಃ' ಇಕಾದೇಶ. ಆದಿವೃದ್ಧಿ, ಅಲೋಪ. ಶ್ವೈತಚ್ಛತ್ರಿಕಃ=ರಾಜ.

ಅರ್ಹತ್ಯರ್ಥದಲ್ಲಿ ಯತ್ ಹೇಳುವ ಸೂತ್ರ.

**೧೧೫೨. ದಂಡಾದಿಭ್ಯೋ ಯತ್** ॥ ೫-೧-೬೬ ॥

**ಏಭ್ಯೋ ಯತ್ ಸ್ಯಾತ್ । ದಂಡಮರ್ಹತಿ ದಂಡ್ಯಃ । ಅರ್ಘ್ಯಃ । ವಧ್ಯಃ ॥**

ದ್ವಿಪದ ಸೂತ್ರ. ದಂಡಾದಿಗಣಪಠಿತ ಪ್ರಾತಿಪದಿಕವೇ ಪ್ರಕೃತಿಯಾಗಿರುವ ದ್ವಿತೀಯಾಂತದಮೇಲೆ 'ಹೊಂದಲು ಯೋಗ್ಯನಾಗುತ್ತಾನೆ' ಎಂಬರ್ಥದಲ್ಲಿ ಯತ್ ಪ್ರತ್ಯಯ ಬರುತ್ತದೆ. ದಂಡವನ್ನು ಹೊಂದಲು ಯೋಗ್ಯನಾಗುತ್ತಾನೆ. ದಂಡ + ಯ. 'ಯಸ್ಯೇತಿ ಚ' ಅಲೋಪ. ದಂಡ್ಯಃ=ದಂಡಿಸಲು ಯೋಗ್ಯನು. ಅರ್ಘಂ ಅರ್ಹತಿ ಅರ್ಘ್ಯಃ=ಪೂಜೆಹೊಂದಲು ಯೋಗ್ಯನು. ವಧಮರ್ಹತಿ ವಧ್ಯಃ=ಕೊಲ್ಲಲು ಯೋಗ್ಯನು.

ನಿರ್ವೃತ್ತಾರ್ಥದಲ್ಲಿ ಠಞ್ ಹೇಳುವ ಸೂತ್ರ.

**೧೧೫೩. ತೇನ ನಿರ್ವೃತ್ತಮ್** ॥ ೫-೧-೭೯ ॥

**ಅಹ್ನಾ ನಿರ್ವೃತ್ತಮ್ ಆಹ್ನಿಕಮ್** ॥

ಇತಿ ಠಞೋಽವಧಿಃ । (ಪ್ರಾಗ್ವತೀಯಾಃ) ॥ ೧೦ ॥

ದ್ವಿಪದ ಸೂತ್ರ. ಪ್ರಾತಿಪದಿಕವೇ ಪ್ರಕೃತಿಯಾಗಿರುವ ತೃತೀಯಾಂತದಮೇಲೆ ನಿರ್ವೃತ್ತಂ=ಉಂಟಾದದ್ದು (ನಿಷ್ಪನ್ನ) ಎಂಬರ್ಥದಲ್ಲಿ ಠಞ್‌ಪ್ರತ್ಯಯ ಬರುತ್ತದೆ. ಅಹ್ನಾ ನಿರ್ವೃತ್ತಮ್=ಒಂದು ಹಗಲಿನಿಂದ ನಿಷ್ಪನ್ನವಾದದ್ದು. ಅಹನ್ + ಠಞ್. 'ಠಸ್ಯೇಕಃ' ಇಕಾದೇಶ. ಅಹನ್ + ಇಕ. 'ಅಹ್ನಷ್ಟಖೋರೇವ' ಸೂತ್ರದಿಂದ ಅಹನ್ ಶಬ್ದಕ್ಕೆ ಟಿಲೋಪ ಬರುವುದಾದರೆ ಟ, ಖ ಪ್ರತ್ಯಯಗಳು ಪರವಾದಾಗ ಮಾತ್ರವೆಂದು ನಿಯಮ ಮಾಡಿರುವುದರಿಂದ ಇಲ್ಲಿ 'ನಸ್ತದ್ಧಿತೇ' ಸೂತ್ರದಿಂದ ಟಿಲೋಪ ಬರುವುದಿಲ್ಲ. 'ಅಲ್ಲೋಪೋಽನಃ' ಸೂತ್ರದಿಂದ ಅನಿನ ಅಕಾರಕ್ಕೆ ಲೋಪ. ಅಹ್ನ್ + ಇಕ. ಆದಿವೃದ್ಧಿ. ಆಹ್ನಿಕಮ್=ಒಂದು ಹಗಲಿನಲ್ಲಿ ಆದದ್ದು. ಹೀಗೆ ತದ್ಧಿತದಲ್ಲಿ ಠಞಧಿಕಾರವೆಂಬ ಹತ್ತನೇ ಪ್ರಕರಣ ಮುಗಿದಿದೆ. ಇದಕ್ಕೆ 'ಪ್ರಾಗ್ವತೀಯ ಪ್ರಕರಣ'ವೆಂದು ಹೆಸರು.

# ೩೩. ಅಥ ತ್ವತಲೋರಧಿಕಾರಃ

ವತಿ ಪ್ರತ್ಯಯವಿಧಾಯಕ ಸೂತ್ರ.

**೧೧೫೪. ತೇನ ತುಲ್ಯಂ ಕ್ರಿಯಾ ಚೇದ್ವತಿಃ ॥ ೫-೧-೧೧೫ ॥**

**ಬ್ರಾಹ್ಮಣೇನ ತುಲ್ಯಂ ಬ್ರಾಹ್ಮಣವತ್ ಅಧೀತೇ । ಕ್ರಿಯಾ ಚೇದಿತಿ ಕಿಮ್ ? ಗುಣತುಲ್ಯೇ ಮಾ ಭೂತ್ । ಪುತ್ರೇಣ ತುಲ್ಯಃ ಸ್ಥೂಲಃ ॥**

ಐದು ಪದಗಳುಳ್ಳ ಸೂತ್ರ. ತೃತೀಯಾಂತ ಸಮರ್ಥಪದದ ಮೇಲೆ ತುಲ್ಯಂ =ಸಮಾನವಾದದ್ದು ಎಂಬರ್ಥದಲ್ಲಿ ವತಿ ಪ್ರತ್ಯಯ ಬರುತ್ತದೆ; ಸಮಾನವಾದದ್ದು ಕ್ರಿಯೆಯಾದರೆ ಮಾತ್ರ ಈ ಪ್ರತ್ಯಯ; ಇತರ ಸಾಮ್ಯದಲ್ಲಿ ಬರುವುದಿಲ್ಲ. ಬ್ರಾಹ್ಮಣೇನ ತುಲ್ಯವ್ ಅಧೀತೇ. ಬ್ರಾಹ್ಮಣ+ವತಿ. ಇಕಾರ ಉಚ್ಚಾರಣಾರ್ಥ. ಬ್ರಾಹ್ಮಣವತ್. ಅಧ್ಯಯನಕ್ರಿಯೆಯಲ್ಲಿ ಸಾಮ್ಯ. ಬ್ರಾಹ್ಮಣಕರ್ತೃಕಾಧ್ಯಯನದಂತೆ ಎಂದರ್ಥ. ಕ್ರಿಯೆಯಲ್ಲಿ ಮಾತ್ರವೆಂದುದೇಕೆ ? ಗುಣಸಾಮ್ಯದಲ್ಲಿ ಬರುವುದಿಲ್ಲ. ಪುತ್ರೇಣ ತುಲ್ಯಃ ಸ್ಥೂಲಃ । ಮಗನಂತೆ ದಪ್ಪವಾಗಿದ್ದಾನೆ. ಸ್ಥೌಲ್ಯಗುಣದಲ್ಲಿ ಸಾಮ್ಯವಿರುವುದರಿಂದ ವತಿ ಪ್ರತ್ಯಯವಿಲ್ಲ.

ಇವಾರ್ಥದಲ್ಲಿ ವತಿ ಹೇಳುವ ಸೂತ್ರ.

**೧೧೫೫. ತತ್ರ ತಸ್ಯೇವ ॥ ೫-೧-೧೧೬ ॥**

**ಮಥುರಾಯಾಮಿವ ಮಥುರಾವತ್ ಸ್ರುಘ್ನೇ ಪ್ರಾಕಾರಃ । ಚೈತ್ರಸ್ಯೇವ ಚೈತ್ರವತ್ ಮೈತ್ರಸ್ಯ ಗಾವಃ ॥**

ತ್ರಿಪದ ಸೂತ್ರ. ತತ್ರ, ತಸ್ಯ ಎರಡೂ ಸಮರ್ಥವಿಭಕ್ತಿಗಳು. **ಸೂತ್ರಾರ್ಥ—** ಪ್ರಾತಿಪದಿಕಪ್ರಕೃತಿಕ ಸಪ್ತಮ್ಯಂತದ ಮೇಲೂ, ಷಷ್ಠ್ಯಂತದ ಮೇಲೂ ಇವ= ಸಾದೃಶ್ಯಾರ್ಥದಲ್ಲಿ ವತಿಪ್ರತ್ಯಯ ಬರುತ್ತದೆ. ತುಲ್ಯಂ=ಸಾದೃಶ್ಯವುಳ್ಳದ್ದು. ಇವ, ಸಾದೃಶ್ಯ ಹೀಗೆ ಎರಡು ಶಬ್ದಗಳು ಧರ್ಮಿ, ಧರ್ಮ ಬೋಧಕಗಳಾಗಿವೆ. (ಮಥುರೆಯಲ್ಲೆಂಬಂತೆ) ಮಥುರಾವತ್. ಸ್ರುಘ್ನ ದೇಶದಲ್ಲಿಯೂ ಗೋಡೆಯು (ಕಾಂಪೌಂಡ್) ಮಥುರೆಯಲ್ಲಿರುವಂತೆ ಇದೆ. (ಚೈತ್ರನಂತೆ) ಚೈತ್ರವತ್. ಮೈತ್ರನ ಹಸು ಚೈತ್ರನಂತಿದೆಯೆಂದರ್ಥ.

ಭಾವಾರ್ಥದಲ್ಲಿ ತ್ವತಲ್ ಪ್ರತ್ಯಯ ಹೇಳುವ ಸೂತ್ರ.

**೧೧೫೬. ತಸ್ಯ ಭಾವಸ್ತ್ವತಲೌ ॥ ೫-೧-೧೧೯ ॥**

**ಪ್ರಕೃತಿಜನ್ಯಬೋಧೇ ಪ್ರಕಾರೋ ಭಾವಃ । ಗೋರ್ಭಾವೋ ಗೋತ್ವಮ್ । ಗೋತಾ । ತ್ವಾಂತಂ ಕ್ಲೀಬಮ್ ॥ ತಲಂತಂ ಸ್ತ್ರಿಯಾಮ್ ॥**

ತ್ರಿಪದ ಸೂತ್ರ. ಷಷ್ಠ್ಯಂತ ಸಮರ್ಥ ಶಬ್ದದ ಮೇಲೆ ಭಾವಾರ್ಥದಲ್ಲಿ ತ್ವ, ತಲ್ ಪ್ರತ್ಯಯಗಳು ಬರುತ್ತವೆ. ಭಾವ ಶಬ್ದಕ್ಕೆ ಅನೇಕಾರ್ಥಗಳಿವೆ. ಇಲ್ಲಿ ಬೇಕಾದ ಅರ್ಥವನ್ನು ತೋರಿಸುತ್ತಾನೆ. 'ಪ್ರಕೃತಿಜನ್ಯೇತಿ—' ತ್ವ, ತಲ್ ಪ್ರತ್ಯಯಗಳನ್ನು ಯಾವುದರ ಮೇಲೆ ಹೇಳುತ್ತೇವೋ ಅದು ಪ್ರಕೃತಿ. ಗೋತ್ವಂ ಎಂಬಲ್ಲಿ ಗೋ ಪ್ರಕೃತಿ. ಗೋ ಶಬ್ದದಿಂದ ಉಂಟಾಗುವ ಬೋಧ. ಗೋತ್ವಪ್ರಕಾರಕ ಗೋವಿಶೇಷ್ಯಕ ಬೋಧ. ಅಲ್ಲಿ ವಿಶೇಷಣವಾಗಿ ತೋರುವುದು ಗೋತ್ವರೂಪ ಧರ್ಮ. ಅದೇ ಭಾವ ಪದಾರ್ಥ. ಆಯಾಯ ಶಬ್ದದಿಂದ ತೋರುವ ಅರ್ಥದಲ್ಲಿ ಯಾವುದು ಧರ್ಮ ವಾಗಿದೆಯೋ ಅದು ಭಾವ. ಗೋರ್ಭಾವಃ=ಗೋವಿನ ಭಾವ (ಸ್ವರೂಪ). ಗೋತ್ವಮ್. ತಲ್ ಬಂದರೆ ಗೋತಾ. ತ್ವಪ್ರತ್ಯಯ ಬಂದರೆ ನಪುಂಸಕವೂ ತಲ್ ಬಂದರೆ ಸ್ತ್ರೀಲಿಂಗವೂ ಆಗುತ್ತದೆಂದು ಲಿಂಗಾನುಶಾಸನ ಸೂತ್ರದಿಂದ ತಿಳಿಯುತ್ತದೆ.

ತ್ವ, ತಲ್‌ಗಳಿಗೆ ಅಧಿಕಾರಾವಧಿ ಹೇಳುವ ಸೂತ್ರ.

೧೧೫೭. ಆ ಚ ತ್ವಾತ್ ॥ ೫-೧-೧೨೦ ॥

**ಬ್ರಹ್ಮಣಸ್ತ್ವ ಇತ್ಯತಃ ಪ್ರಾಕ್ ತ್ವತಲಾವಧಿಕ್ರಿಯೇತೇ। ಅಪವಾದೈಃ ಸಹ ಸಮಾವೇಶಾರ್ಥಮಿದಮ್। ಚಕಾರೋ ನಞ್‌ಸ್ನಞ್‌ಭ್ಯಾಮಪಿ ಸಮಾವೇಶಾರ್ಥಃ। ಸ್ತ್ರಿಯಾಃ ಭಾವಃ ಸ್ತ್ರೈಣಮ್। ಸ್ತ್ರೀತ್ವಮ್। ಸ್ತ್ರೀತಾ। ಪೌಂಸ್ನಮ್। ಪುಂಸ್ತ್ವಮ್। ಪುಂಸ್ತಾ॥**

ತ್ರಿಪದ ಸೂತ್ರ. 'ತ್ವತಲೌ' ಅನುವೃತ್ತವಾಗುತ್ತದೆ. 'ಆ' ಮರ್ಯಾದೆ ಯನ್ನು ತಿಳಿಸುತ್ತದೆ. ಆಙಿಗೆ ಎರಡು ಅರ್ಥಗಳಿವೆ. ಅಲ್ಲಿಯವರೆಗೆ ಅಂದಾಗ ಅದನ್ನು ಸೇರಿಸಿ ಅವಧಿ ಹೇಳುವುದಾದರೆ ಆಗ ಅಭಿವಿಧಿ. ಅದನ್ನು ಬಿಟ್ಟು ಅವಧಿ ಸೂಚಿಸುವು ದಾದರೆ ಮರ್ಯಾದೆಯೆಂದು ಹೆಸರು. ಇಲ್ಲಿ 'ಬ್ರಹ್ಮಣಸ್ತ್ವಃ' ಸೂತ್ರದವರೆಗೆ ಎಂದರೆ ಮರ್ಯಾದೆ ಅರ್ಥ. ಆ ಸೂತ್ರದ ಹಿಂದಿನ ಸೂತ್ರದವರೆಗೆ ತ್ವತಲ್‌ಗಳಿಗೆ ಅಧಿಕಾರ. ಅಲ್ಲಿಯವರೆಗೆ ಅನುವೃತ್ತಿಯಿಂದಲೇ ಅರ್ಥಲಾಭವಾಗುವಾಗ ಅಧಿಕಾರ ಏಕೆ ಹೇಳ ಬೇಕು ? ಎಂಬುದಕ್ಕೆ ಸಮಾಧಾನ ಹೇಳುತ್ತಾನೆ. 'ಅಪವಾದೈಃ—' ಇತಿ. ಭಾವಾರ್ಥಪ್ರತ್ಯಯಪ್ರಕರಣದಲ್ಲಿ ಮುಂದೆ ಇಮನಿಚ್ ಮುಂತಾದ ಪ್ರತ್ಯಯಗಳನ್ನು ಹೇಳುತ್ತಾನೆ. ವಿಶೇಷವಿಹಿತವಾದುದರಿಂದ ಅವು ತ್ವ, ತಲ್‌ಗಳಿಗೆ ಬಾಧಕವಾಗ ಬಾರದು, ಅವುಗಳೊಡನೆ ಇವೆರಡು ಪ್ರತ್ಯಯಗಳೂ ಬರುತ್ತವೆ ಎಂದು ತಿಳಿಸಲು ಅಧಿಕಾರ ಹೇಳುತ್ತಾನೆ. ಅಧಿಕಾರವಾದುದರಿಂದ ಉತ್ತರಸೂತ್ರಗಳಲ್ಲಿ ಹೋಗಿ ಅಲ್ಲಿ ಹೇಳುವ ಪ್ರತ್ಯಯಗಳ ಸಂಗಡ ಇವೂ ಬರುತ್ತವೆ ಎಂದರ್ಥವಾಗುತ್ತದೆ. ಸೂತ್ರ ದಲ್ಲಿರುವ ಚಕಾರವು ಹಿಂದೆ ಹೇಳಿದ ನಞ್, ಸ್ನಞ್ ಪ್ರತ್ಯಯಗಳೊಡನೆ ಈ ತ್ವ, ತಲ್ ಪ್ರತ್ಯಯಗಳು ಬರುತ್ತವೆ ಎಂದು ಸಮುಚ್ಚಯವನ್ನು ತಿಳಿಸುತ್ತದೆ. ನಞ್,

ಸ್ನಞ್‌ಗಳನ್ನು ಬಾಧಿಸಿ ಬರುವುದಿಲ್ಲ. ಚಕಾರ ಹೇಳದಿದ್ದರೆ ವಿಶೇಷವಿಹಿತವಾದುದರಿಂದ ಅವುಗಳನ್ನು ಬಾಧಿಸಿ ತ್ವ, ತಲ್ ಬರುತ್ತವೆ ಎಂದಾಗುತ್ತಿತ್ತು. ಸ್ತ್ರೀ ಮತ್ತು ಪುಂಸ್ ಶಬ್ದಗಳ ಮೇಲೆ ಭಾವಾರ್ಥದಲ್ಲಿ ನಞ್, ಸ್ನಞ್ ಬರುವುದಲ್ಲದೆ ತ್ವ, ತಲ್‌ಗಳೂ ಬರುತ್ತವೆ. ಆಗ ಮೂರು ರೂಪಗಳಾಗುತ್ತವೆ. ಸ್ತ್ರೀಯ ಭಾವ—ಸ್ತ್ರೈಣಮ್, ಸ್ತ್ರೀತ್ವಮ್, ಸ್ತ್ರೀತಾ. ಪುರುಷನ ಭಾವ—ಪೌಂಸ್ನಮ್, ಪುಂಸ್ತ್ವಮ್, ಪುಂಸ್ತಾ.

ಭಾವಾರ್ಥದಲ್ಲಿ ಇಮನಿಚ್ ಪ್ರತ್ಯಯ ಹೇಳುವ ಸೂತ್ರ.

**೧೧೫೮. ಪೃಥ್ವಾದಿಭ್ಯ ಇಮನಿಜ್ವಾ ॥ ೫-೧-೧೨೨ ॥**

**ವಾ ವಚನಮಣಾದಿಸಮಾವೇಶಾರ್ಥಮ್ ॥**

ತ್ರಿಪದ ಸೂತ್ರ. ಪೃಥು ಮುಂತಾದ ಶಬ್ದಗಳೇ ಪ್ರಕೃತಿಯಾಗಿರುವ ಷಷ್ಠ್ಯಂತ ಶಬ್ದದ ಮೇಲೆ ಭಾವಾರ್ಥದಲ್ಲಿ ಇಮನಿಚ್ ಪ್ರತ್ಯಯ ವಿಕಲ್ಪವಾಗಿ ಬರುತ್ತದೆ. ವಾ ಎಂದುದರಿಂದ ಮುಂದೆ ಹೇಳುವ ಅಣ್‌ಷ್ಯಞಾದಿಗಳೂ ಬರುತ್ತವೆಯೆಂದು ತಿಳಿಯುತ್ತದೆ. ವಾ ಹೇಳದಿದ್ದರೆ ಅಣಾದಿಗಳಿಗೆ ಬಾಧಕವಾಗಿ ಇಮನಿಚ್ ಒಂದೇ ಪ್ರತ್ಯಯ ಬರುತ್ತದೆಂದು ಅರ್ಥವಾಗುತ್ತಿತ್ತು. ಪೃಥೋಃ ಭಾವಃ ಎಂದು ಅರ್ಥವಿವಕ್ಷಾಮಾಡಿದಾಗ ಪೃಥು ಶಬ್ದಕ್ಕೆ ಇಮನಿಚ್. ಅಲ್ಲಿ ಇಮನ್ ಉಳಿಯುತ್ತದೆ. ಪೃಥು + ಇಮನ್ ಎಂದಿರುವಾಗ ಪ್ರಕೃತಿಯ ಋಕಾರಕ್ಕೆ ರಾದೇಶ ಹೇಳುತ್ತಾನೆ.

ಋಕಾರಕ್ಕೆ ರಾದೇಶ ಹೇಳುವ ಸೂತ್ರ.

**೧೧೫೯. ರ ಋತೋ ಹಲಾದೇರ್ಲಘೋಃ ॥ ೬-೪-೧೬೧ ॥**

**ಹಲಾದೇರ್ಲಘೋಋರ್ಕಾಸ್ಯ ರಃ ಸ್ಯಾದಿಷ್ಠೇಮೇಯಸ್ಸು ಪರತಃ । ಪೃಥು, ಮೃದು, ಭೃಶ, ಕೃಶ, ದೃಢ, ಪರಿವೃಢಾನಾಮೇವ ರತ್ವಮ್ ॥**

ರಃ, ಋತಃ, ಹಲಾದೇಃ, ಲಘೋಃ ॥ ನಾಲ್ಕು ಪದಗಳುಳ್ಳ ಸೂತ್ರ. ರಃ ಪ್ರಥಮಾಂತ. 'ತುರಿಷ್ಠೇಮೇಯಸ್ಸು' ಸೂತ್ರದಿಂದ 'ಇಷ್ಠೇಮೇಯಸ್ಸು' ಅನುವೃತ್ತಿ. 'ಅಂಗಸ್ಯ' ಅಧಿಕಾರ. **ಸೂತ್ರಾರ್ಥ**—ಹಲಾದಿಯಾದ ಅಂಗದ ಲಘುವಾದ ಋಕಾರಕ್ಕೆ ಇಷ್ಠನ್, ಇಮನಿಚ್, ಈಯಸ್ ಪ್ರತ್ಯಯ ಪರವಾದಾಗ ರ ಆದೇಶ ಬರುತ್ತದೆ. ಹೀಗೆ ಎಲ್ಲಾ ಶಬ್ದಗಳ ಋಕಾರಕ್ಕೆ ರಾದೇಶ ಪ್ರಾಪ್ತವಾದರೆ ವಾರ್ತಿಕಕಾರರು ನಿಯಮಮಾಡಿರುವುದನ್ನು ಅರ್ಥದಿಂದ ಸಂಗ್ರಹಿಸಿ ತೋರಿಸುತ್ತಾನೆ. ಪೃಥು, ಮೃದು, ಭೃಶ, ಕೃಶ, ದೃಢ, ಪರಿವೃಢ ಶಬ್ದಗಳ ಋಕಾರಕ್ಕೆ ಮಾತ್ರ ರಾದೇಶ ಹೇಳಬೇಕು. ಪ್ರಕೃತ ಪೃಥು + ಇಮನ್ ಎಂದಿರುವಾಗ ಋಕಾರಕ್ಕೆ ರಾದೇಶ ಬಂದರೆ ಪ್ರಥು + ಇಮನ್ ಎಂದಿರುವಾಗ ಟಿಲೋಪ ಹೇಳುತ್ತಾನೆ.

ಭಸಂಜ್ಞಕಾಂಗದ ಟಿಗೆ ಲೋಪ ಹೇಳುವ ಸೂತ್ರ.

೧೧೬೦. ಟೇಃ ‖ ೬-೪-೧೫೫ ‖

**ಭಸ್ಯ ಟೇರ್ಲೋಪ ಇಷ್ಠೇಮೇಯಸ್ಸು । ಪೃಥೋರ್ಭಾವಃ ಪ್ರಥಿಮಾ ‖**

ಏಕಪದ ಸೂತ್ರ. 'ಭಸ್ಯ' ಅಧಿಕಾರ. 'ತುರಿಷ್ಠೇಮೇಯಸ್ಸು' ಅನುವೃತ್ತಿ. 'ಅಲ್ಲೋಪೋಽನಃ' ಸೂತ್ರದಿಂದ 'ಲೋಪಃ' ಅನುವೃತ್ತವಾಗುತ್ತದೆ. **ಸೂತ್ರಾರ್ಥ**—ಭಸಂಜ್ಞೆಯಿರುವ ಅಂಗದ ಟಿಗೆ ಇಷ್ಠನ್, ಇಮನಿಚ್, ಈಯಸುನ್ ಪ್ರತ್ಯಯ ಪರದಲ್ಲಿರುವಾಗ ಲೋಪ ಬರುತ್ತದೆ. ಅಜಾದಿಪ್ರತ್ಯಯ ಪರವಾದುದರಿಂದ ಪ್ರಥು ಎಂಬುದಕ್ಕೆ ಭಸಂಜ್ಞೆಯಿದೆ. ಇಮನಿಚ್ ಪರವಾದುದರಿಂದ ಟಿಗೆ ಲೋಪ ಬಂದರೆ ಪ್ರಥ್ + ಇಮನ್ = ಪ್ರಥಿಮನ್ ಎಂದಾಗುತ್ತದೆ. ಸು ಪರವಾದಾಗ 'ಸರ್ವನಾಮಸ್ಥಾನೇ—' ಸೂತ್ರದಿಂದ ಉಪಧಾದೀರ್ಘ. ಸುಲೋಪ, ನಲೋಪ. ಪ್ರಥಿಮಾ—ಪ್ರಥಿಮಾನೌ—ಪ್ರಥಿಮಾನಃ ಇತ್ಯಾದಿ. ಇಮನಿಚ್ ವಿಕಲ್ಪವಾದುದರಿಂದ ಅದು ಬಾರದಿರುವಾಗ ಅಣ್ ಪ್ರತ್ಯಯ ಹೇಳುತ್ತಾನೆ.

ಭಾವಾರ್ಥದಲ್ಲಿ ಅಣ್ ಹೇಳುವ ಸೂತ್ರ.

೧೧೬೧. ಇಗನ್ತಾಚ್ಚ ಲಘುಪೂರ್ವಾತ್ ‖ ೫-೧-೧೩೧ ‖

**ಇಗನ್ತಾಲ್ಲಘುಪೂರ್ವಾತ್ ಪ್ರಾತಿಪದಿಕಾದ್ಭಾವೇಽಣ್ ಪ್ರತ್ಯಯಃ । ಪಾರ್ಥವಮ್ । ಮ್ರದಿಮಾ, ಮಾರ್ದವಮ್ ‖**

ತ್ರಿಪದ ಸೂತ್ರ. 'ಹಾಯನಾಂತ—' ಸೂತ್ರದಿಂದ 'ಅಣ್' ಅನುವೃತ್ತವಾಗುತ್ತದೆ. ಲಘುಃ ಪೂರ್ವಃ ಯಸ್ಯ ಸಃ ಲಘುಪೂರ್ವಃ। **ಸೂತ್ರಾರ್ಥ**—ಇಕ್ ಅಂತವಾದ ಲಘುಪೂರ್ವವಾದ ಪ್ರಾತಿಪದಿಕವೇ ಪ್ರಕೃತಿಯಾಗಿರುವ ಷಷ್ಠ್ಯಂತದ ಮೇಲೆ ಭಾವಾರ್ಥದಲ್ಲಿ ಅಣ್ ಬರುತ್ತದೆ. ಇಕಿನಿಂದ ಲಘುಪೂರ್ವವಾಗಿರಬೇಕು. ಪೃಥು ಎಂಬಲ್ಲಿ ಇಕ್‌ನಲ್ಲಿರುವ ಉಕಾರವೇ ಅಂತದಲ್ಲಿದೆ. ಅದರ ಹಿಂದೆ ಋಕಾರರೂಪ ಲಘುವಿದೆ. ಇದಕ್ಕೆ ಅಣ್ ಬಂದರೆ ಪೃಥು + ಅಣ್ ಎಂದಿರುವಾಗ ಆದಿವೃದ್ಧಿ. 'ಓರ್ಗುಣಃ' ಉಕಾರಕ್ಕೆ ಗುಣ. ಅವಾದೇಶ. ಪಾರ್ಥವಮ್. ತ್ವ, ತಲ್ ಪ್ರತ್ಯಯಗಳೂ ಬರುತ್ತವೆಯೆಂದುದರಿಂದ ಭಾವಾರ್ಥದಲ್ಲಿ ನಾಲ್ಕು ರೂಪಗಳಾಗುತ್ತವೆ: ಪ್ರಥಿಮಾ, ಪಾರ್ಥವಮ್, ಪೃಥುತ್ವಮ್, ಪೃಥುತಾ—ಹೀಗೆ ಮೃದೋರ್ಭಾವಃ ಎಂದು ಭಾವಾರ್ಥವಿವಕ್ಷೆಮಾಡಿದಾಗ ಮ್ರದಿಮಾ, ಮಾರ್ದವಮ್, ಮೃದುತ್ವಮ್, ಮೃದುತಾ ಎಂದು ನಾಲ್ಕು ರೂಪಗಳಾಗುತ್ತವೆ.

ಭಾವಾರ್ಥದಲ್ಲಿ ಷ್ಯಞ್ ಹೇಳುವ ಸೂತ್ರ.

೧೧೬೨. ವರ್ಣದೃಢಾದಿಭ್ಯಃ ಷ್ಯಞ್ಚ ‖ ೫-೧-೧೨೩ ‖

**ಚಾದಿಮನಿಚ್ । ಶೌಕ್ಲ್ಯಮ್ । ಶುಕ್ಲಿಮಾ । ದಾರ್ಢ್ಯಮ್ । ದ್ರಢಿಮಾ ‖**

ತ್ರಿಪದ ಸೂತ್ರ. ಷ್ಯಙ್, ಚ, ಇತಿ ಛೇದಃ । ವರ್ಣವಾಚಕಪದಗಳೇ ಪ್ರಕೃತಿಯಾಗಿರುವ, ದೃಢಾದಿಗಣಪಠಿತಪ್ರಾತಿಪದಿಕಗಳೇ ಪ್ರಕೃತಿಯಾಗಿರುವ ಷಷ್ಠ್ಯಂತದ ಮೇಲೆ ಭಾವಾರ್ಥದಲ್ಲಿ ಷ್ಯಙ್ ಪ್ರತ್ಯಯ ಬರುತ್ತದೆ. 'ಷಃ ಪ್ರತ್ಯಯಸ್ಯ' ಸೂತ್ರದಿಂದ ಆದಿಷಕಾರ ಇತ್ತಾಗಿ ಲೋಪವಾಗುತ್ತದೆ. 'ಹಲಂತ್ಯಮ್' ಸೂತ್ರದಿಂದ ಙಕಾರ ಇತ್. ಯ ಉಳಿಯುತ್ತದೆ. ಸೂತ್ರದಲ್ಲಿ ಚಕಾರ ಹೇಳಿರುವುದರಿಂದ ಇಮನಿಚ್ ಪ್ರತ್ಯಯವೂ ಬರುತ್ತದೆ. ಶುಕ್ಲಸ್ಯ ಭಾವಃ । ಶುಕ್ಲ+ಯ. ಙಿತ್ತಾದುದರಿಂದ ಆದಿವೃದ್ಧಿ. 'ಯಸ್ಯೇತಿ ಚ' ಅಕಾರಲೋಪ. ಶೌಕ್ಲ್ಯಮ್. ಇಮನಿಚ್ ಬಂದರೆ ಶುಕ್ಲ+ಇಮನ್ ಎಂದಿರುವಾಗ ಅಕಾರಲೋಪ. ಶುಕ್ಲಿಮನ್ ಶಬ್ದ. ಪ್ರಥಮಾಸುವಿನಲ್ಲಿ ಶುಕ್ಲಿಮಾ ಎಂದು ರೂಪವಾಗುತ್ತದೆ. ದೃಢಸ್ಯ ಭಾವಃ । ದೃಢ+ಯ. ಆದಿವೃದ್ಧಿ, ಅಲೋಪ. ದಾರ್ಢ್ಯಮ್. ಇಮನಿಚ್ ಬಂದರೆ ದ್ರಢಿಮಾ ಎಂದಾಗುತ್ತದೆ.

ಕರ್ಮಾರ್ಥ, ಭಾವಾರ್ಥದಲ್ಲಿ ಷ್ಯಙ್ ಹೇಳುವ ಸೂತ್ರ.

**೧೧೬೩. ಗುಣವಚನಬ್ರಾಹ್ಮಣಾದಿಭ್ಯಃ ಕರ್ಮಣಿ ಚ ॥ ೫-೧-೧೨೪ ॥**

**ಚಾದ್ಭಾವೇ । ಜಡಸ್ಯ ಭಾವಃ ಕರ್ಮ ವಾ ಜಾಡ್ಯಮ್ । ಮೂಢಸ್ಯ ಭಾವಃ ಕರ್ಮ ವಾ ಮೌಢ್ಯಮ್ । ಆಕೃತಿಗಣೋಽಯಮ್ ॥**

ತ್ರಿಪದ ಸೂತ್ರ. ಗುಣವಾಚಕ ಶಬ್ದಗಳೇ ಪ್ರಕೃತಿಯಾಗಿರುವ, ಬ್ರಾಹ್ಮಣಾದಿಗಣಪಠಿತಪ್ರಾತಿಪದಿಕಗಳೇ ಪ್ರಕೃತಿಯಾಗಿರುವ, ಷಷ್ಠ್ಯಂತದ ಮೇಲೆ ಕರ್ಮಾರ್ಥದಲ್ಲಿಯೂ ಭಾವಾರ್ಥದಲ್ಲಿಯೂ ಷ್ಯಙ್ ಪ್ರತ್ಯಯ ಬರುತ್ತದೆ. ಕ್ರಿಯೆ, ಕಾರ್ಯವೆಂದು ಕರ್ಮ ಎರಡು ವಿಧ. ಶರೀರಾಯಾಸ ಮಾತ್ರ ಸಾಧ್ಯವಾದ ಶೌಚಾದಿಗಳು ಕ್ರಿಯೆ. ಶಾಸ್ತ್ರವಿಹಿತ ಯಾಗಾದಿಗಳು ಕಾರ್ಯವೆಂದು ತಿಳಿಯಬೇಕು. ಗುಣವಾಚಕ ಪದದಿಂದ ಗುಣವಿಶಿಷ್ಟದ್ರವ್ಯವಾಚಕ ಪದವನ್ನು ತೆಗೆದುಕೊಳ್ಳಬೇಕು. ಜಡಸ್ಯ ಭಾವಃ, ಕರ್ಮ ವಾ. ಜಡ+ಯ. ಆದಿವೃದ್ಧಿ, ಅಲೋಪ. ಜಾಡ್ಯಮ್. ಮೂಢಸ್ಯ ಭಾವಃ, ಕರ್ಮ ವಾ. ಮೂಢ+ಯ. ಮೌಢ್ಯಮ್. ಬ್ರಾಹ್ಮಣಾದಿಗಳಿಗೆ—ಬ್ರಾಹ್ಮಣಸ್ಯ ಭಾವಃ, ಕರ್ಮ ವಾ. ಬ್ರಾಹ್ಮಣ+ಯ. ಬ್ರಾಹ್ಮಣ್ಯಮ್. ಬ್ರಾಹ್ಮಣಾದಿಗಳು ಆಕೃತಿಗಣ. ಗಣಪಠಿತವಾದವುಗಳಲ್ಲದೆ ಇದರಂತೆ ಇತರ ಶಾಸ್ತ್ರದಿಂದ ಸಿದ್ಧವಾಗದೆ ಷ್ಯಙಂತವಾಗಿದ್ದರೆ ಆ ಶಬ್ದವು ಬ್ರಾಹ್ಮಣಾದಿಗಳಲ್ಲಿ ಸೇರಿದೆಯೆಂದು ತಿಳಿಯಬೇಕು.

ಭಾವಾರ್ಥದಲ್ಲಿ ಯಪ್ರತ್ಯಯ ಹೇಳುವ ಸೂತ್ರ

**೧೧೬೪. ಸಖ್ಯುರ್ಯಃ ॥ ೫-೧-೧೨೬ ॥**

**ಸಖ್ಯುರ್ಭಾವಃ ಕರ್ಮ ವಾ ಸಖ್ಯಮ್ ॥**

ಸಖ್ಯುಃ, ಯಃ ॥ ದ್ವಿಪದ ಸೂತ್ರ. ಷಷ್ಠ್ಯಂತ ಸಖಿ ಶಬ್ದದ ಮೇಲೆ ಭಾವ, ಕರ್ಮಾರ್ಥದಲ್ಲಿ ಯಪ್ರತ್ಯಯು ಬರುತ್ತದೆ. ಸಖ್ಯುಃ ಭಾವಃ, ಕರ್ಮ ವಾ. ಸ್ನೇಹಿತನ ಭಾವ ಅಥವಾ ಕಾರ್ಯ. ಸಖಿ+ಯ. 'ಯಸ್ಯೇತಿ ಚ' ಇಕಾರಲೋಪ. ಸಖ್ಯಮ್.

ಭಾವಕರ್ಮಾರ್ಥದಲ್ಲಿ ಢಕ್ ಪ್ರತ್ಯಯ ಹೇಳುವ ಸೂತ್ರ.

**೧೧೬೫. ಕಪಿಜ್ಞಾತ್ಯೋರ್ಢಕ್** ॥ ೫-೧-೧೨೭ ॥

**ಕಾಪೇಯಮ್ । ಜ್ಞಾತೇಯಮ್** ॥

ದ್ವಿಪದ ಸೂತ್ರ. ಕಪಿ, ಜ್ಞಾತಿ ಶಬ್ದವೇ ಪ್ರಕೃತಿಯಾಗಿರುವ ಷಷ್ಠ್ಯಂತದ ಮೇಲೆ ಭಾವ, ಕರ್ಮಾರ್ಥಗಳಲ್ಲಿ ಢಕ್ ಪ್ರತ್ಯಯ ಬರುತ್ತದೆ. ಕಪೇಃ ಭಾವಃ, ಕರ್ಮ ವಾ. ಕಪಿ+ಢಕ್. 'ಆಯನೇಯೀನಿ—' ಸೂತ್ರದಿಂದ ಢಕ್ಕೆ ಏಯಾದೇಶ. 'ಯಸ್ಯೇತಿ ಚ' ಇಕಾರಲೋಪ. ಕಿತ್ತಾದುದರಿಂದ ಆದಿವೃದ್ಧಿ. ಕಾಪೇಯಮ್. ಜ್ಞಾತೇರ್ಭಾವಃ, ಕರ್ಮ ವಾ. ಜ್ಞಾತಿ+ಢ. ಹಿಂದಿನಂತೆಯೇ ಕಾರ್ಯ. ಜ್ಞಾತೇಯಮ್=ಬಂಧುವಿನ ಕಾರ್ಯ ಅಥವಾ ಭಾವ.

ಭಾವಕರ್ಮಾರ್ಥದಲ್ಲಿ ಯಕ್ ಹೇಳುವ ಸೂತ್ರ.

**೧೧೬೬. ಪತ್ಯನ್ತಪುರೋಹಿತಾದಿಭ್ಯೋ ಯಕ್** ॥ ೫-೧-೧೨೮ ॥

**ಸೈನಾಪತ್ಯಮ್ । ಪೌರೋಹಿತ್ಯಮ್** ॥

ಇತಿ ತ್ವತಲೋರಧಿಕಾರಃ ॥ ೧೧ ॥

ದ್ವಿಪದ ಸೂತ್ರ. ಪತಿಶಬ್ದಾಂತ ಪ್ರಾತಿಪದಿಕ, ಪುರೋಹಿತಾದಿಗಣಪಠಿತ ಪ್ರಾತಿಪದಿಕ ಪ್ರಕೃತಿಯಾಗಿರುವ ಷಷ್ಠ್ಯಂತದ ಮೇಲೆ ಭಾವಕರ್ಮಾರ್ಥದಲ್ಲಿ ಯಕ್ ಪ್ರತ್ಯಯ ಬರುತ್ತದೆ. ಸೇನಾಪತಿ. ಪತಿಶಬ್ದಾಂತ. ಸೇನಾಪತೇಃ ಭಾವಃ, ಕರ್ಮ ವಾ. ಸೇನಾಪತಿ+ಯ. ಕಿತ್ತಾದುದರಿಂದ ಆದಿವೃದ್ಧಿ, ಇಲೋಪ. ಸೈನಾಪತ್ಯಮ್=ಸೇನಾಪತಿಕಾರ್ಯ. ಪುರೋಹಿತಸ್ಯ ಭಾವಃ । ಪುರೋಹಿತ+ಯ. ಆದಿವೃದ್ಧಿ, ಅಲೋಪ. ಪೌರೋಹಿತ್ಯಮ್=ಪುರೋಹಿತನ ಭಾವ ಅಥವಾ ಕೆಲಸ. ಗಣಪಾಠದಿಂದ ಇತರ ಶಬ್ದಗಳನ್ನು ತಿಳಿಯಬೇಕು. ಹೀಗೆ ತದ್ಧಿತದಲ್ಲಿ ತ್ವ, ತಲ್ ಅಧಿಕಾರರೂಪವಾದ ಹನ್ನೊಂದನೇ ಪ್ರಕರಣ ಮುಗಿದಿದೆ.

# ೩೪. ಅಥ ಭವನಾದ್ಯರ್ಥಕಾಃ

ಭವನ ಕ್ಷೇತ್ರಾರ್ಥದಲ್ಲಿ ಖಞ್ ಹೇಳುವ ಸೂತ್ರ.

**೧೧೩೭. ಧಾನ್ಯಾನಾಂ ಭವನೇ ಕ್ಷೇತ್ರೇ ॥ ೫-೨-೧ ॥**

**ಭವತ್ಯಸ್ಮಿನ್ನಿತಿ ಭವನಮ್ । ಮುದ್ಗಾನಾಂ ಭವನಂ ಕ್ಷೇತ್ರಂ ಮೌದ್ಗೀನಮ್ ।**

ನಾಲ್ಕು ಪದಗಳುಳ್ಳ ಸೂತ್ರ. ಧಾನ್ಯವಾಚಕ ಶಬ್ದಗಳೇ ಪ್ರಕೃತಿಯಾಗಿರುವ ಷಷ್ಠ್ಯಂತದ ಮೇಲೆ ಭವನಂ ಕ್ಷೇತ್ರಂ ಎಂಬರ್ಥದಲ್ಲಿ (ಧಾನ್ಯೋತ್ಪತ್ತಿಸ್ಥಾನವಾದ ಗದ್ದೆ) ಎಂಬರ್ಥದಲ್ಲಿ ಖಞ್ ಪ್ರತ್ಯಯ ಬರುತ್ತದೆ. ಭವನಮ್. ಅಧಿಕರಣಾರ್ಥದಲ್ಲಿ ಲ್ಯುಟ್ ಪ್ರತ್ಯಯ ಬಂದಿದೆ. ಉತ್ಪತ್ತಿಸ್ಥಾನವೆಂದರ್ಥ. ಕೇವಲ ಭವನವೆಂದರೆ ಕಣಜಾದಿಗಳೂ ಆಗುತ್ತವೆ. ಆದ್ದರಿಂದ ಕ್ಷೇತ್ರವೆಂದಿರುತ್ತಾನೆ. ಕೇವಲ ಕ್ಷೇತ್ರವೆಂದರೆ ಪುಣ್ಯಕ್ಷೇತ್ರಗಳೂ ಆಗುವುದರಿಂದ ಭವನವೆಂದಿರುತ್ತಾನೆ. ಹೆಸರುಧಾನ್ಯದ ಉತ್ಪತ್ತಿಸ್ಥಾನವಾದ ಗದ್ದೆ. ಮುದ್ಗ+ಖಞ್. 'ಆಯನೇಯೀನೀ—' ಸೂತ್ರದಿಂದ ಖಕ್ಕೆ ಈನಾದೇಶ. ಆದಿವೃದ್ಧಿ, ಅಲೋಪ. ಮೌದ್ಗೀನಮ್=ಹೆಸರುಗದ್ದೆ.

ಭವನ ಕ್ಷೇತ್ರಾರ್ಥದಲ್ಲಿ ಢಕ್ ಹೇಳುವ ಸೂತ್ರ.

**೧೧೩೮. ವ್ರೀಹಿಶಾಲ್ಯೋರ್ಢಕ್ ॥ ೫-೨-೨ ॥**

**ವ್ರೈಹೇಯಮ್ । ಶಾಲೇಯಮ್ ॥**

ದ್ವಿಪದ ಸೂತ್ರ. ವ್ರೀಹಿ, ಶಾಲಿ ಶಬ್ದಗಳೇ ಪ್ರಕೃತಿಯಾಗಿರುವ ಷಷ್ಠ್ಯಂತದ ಮೇಲೆ ಭವನ ಕ್ಷೇತ್ರಾರ್ಥದಲ್ಲಿ ಢಕ್ ಪ್ರತ್ಯಯ ಬರುತ್ತದೆ. ವ್ರೀಹೀಣಾಂ, ಶಾಲೀನಾಂ ಭವನಂ ಕ್ಷೇತ್ರಮ್. ವ್ರೀಹಿ+ಢ. 'ಆಯನೇ—' ಸೂತ್ರದಿಂದ ಢಕ್ಕೆ ಏಯಾದೇಶ. ಕಿತ್ತಾದುದರಿಂದ ಆದಿವೃದ್ಧಿ. ಇಲೋಪ. ವ್ರೈಹೇಯಮ್ । ಶಾಲಿ+ಢ. ಶಾಲೇಯಮ್. ಕ್ರಮವಾಗಿ ನವಣೆ ಗದ್ದೆ, ಭತ್ತದ ಗದ್ದೆ ಅರ್ಥ.

ಸಂಜ್ಞೆಯಲ್ಲಿ ನಿಪಾತಮಾಡುವ ಸೂತ್ರ.

**೧೧೩೯. ಹೈಯಙ್ಗವೀನಂ ಸಂಜ್ಞಾಯಾಮ್ ॥ ೫-೨-೨೩ ॥**

**ಹ್ಯೋಗೋದೋಹಶಬ್ದಸ್ಯ ಹಿಯಙ್ಗುರಾದೇಶಃ ವಿಕಾರಾರ್ಥೇ ಖಞ್ ನಿಪಾತ್ಯತೇ । ದುಹ್ಯತ ಇತಿ ದೋಹಃ ಕ್ಷೀರಮ್ । ಹ್ಯೋಗೋದೋಹಸ್ಯ ವಿಕಾರಃ—ಹೈಯಙ್ಗವೀನಮ್ ನವನೀತಮ್ ॥**

ದ್ವಿಪದ ಸೂತ್ರ. ಸಂಜ್ಞೆಯಲ್ಲಿ ಕಾರ್ಯಮಾಡಿ ಸಿದ್ಧರೂಪವನ್ನು ತೋರಿಸಿರುವುದರಿಂದ ನಿಪಾತಸೂತ್ರ. ನಿನ್ನೆ ಎಂಬರ್ಥದಲ್ಲಿ ಹ್ಯಸ್ ಶಬ್ದವಿದೆ. ಇದು ಅವ್ಯಯ. ಹ್ಯಃ ಗೋದೋಹಃ ಹ್ಯೋಗೋದೋಹಃ। ಹ್ಯೋಗೋದೋಹಶಬ್ದಪ್ರಕೃತಿಕ ಷಷ್ಠ್ಯಂತದಮೇಲೆ ವಿಕಾರಾರ್ಥದಲ್ಲಿ ಖಞ್ ಪ್ರತ್ಯಯವೂ ಪ್ರಕೃತಿಗೆ ಹಿಯಂಗು ಆದೇಶವೂ ನಿಪಾತಿತವಾಗಿದೆ. ಹಿಯಂಗು+ಖ. ಖಕ್ಕೆ ಈನಾದೇಶ. ಆದಿವೃದ್ಧಿ. ಉಕಾರಕ್ಕೆ ಗುಣ, ಅವಾದೇಶ. ಹೈಯಂಗವೀನಮ್. ಬೆಣ್ಣೆ, ತುಪ್ಪವೆಂದು ಭಾಷ್ಯದಲ್ಲಿ ಹೇಳಿದೆ. ಕರೆಯಲ್ಪಡುವುದು ದೋಹ=ಹಾಲು. ನಿನ್ನೆ ಹಾಲಿನ ವಿಕಾರ.

### ಇತಚ್ ಪ್ರತ್ಯಯವಿಧಾಯಕ ಸೂತ್ರ.

**೧೧೬೦. ತದಸ್ಯ ಸಂಜಾತಂ ತಾರಕಾದಿಭ್ಯ ಇತಚ್ ॥ ೫-೨-೩೬ ॥**

**ತಾರಕಾಃ ಸಂಜಾತಾ ಅಸ್ಯ ತಾರಕಿತಂ ನಭಃ। ಪಣ್ಡಿತಃ। ಆಕೃತಿಗಣೋऽಯಮ್ ॥**

ಇದು ಪದಗಳುಳ್ಳ ಸೂತ್ರ. ತಾರಕಾದಿ ಗಣಪಠಿತ ಪ್ರಾತಿಪದಿಕವೇ ಪ್ರಕೃತಿಯಾಗಿರುವ ಪ್ರಥಮಾಂತದಮೇಲೆ 'ಅಸ್ಯ ಸಂಜಾತಮ್' ಇದಕ್ಕೆ ಉಂಟಾಗಿದೆ ಎಂಬರ್ಥದಲ್ಲಿ ಇತಚ್ ಪ್ರತ್ಯಯ ಬರುತ್ತದೆ. ನಕ್ಷತ್ರಗಳು ಇದಕ್ಕೆ ಉಂಟಾಗಿವೆ. ತಾರಕ+ಇತಚ್. 'ಯಸ್ಯೇತಿ ಚ' ಅಲೋಪ. ತಾರಕಿತಮ್. ತೋರತಕ್ಕ ನಕ್ಷತ್ರವುಳ್ಳ ಆಕಾಶ. ಪಂಡ ಶಬ್ದವು ತಾರಕಾದಿಗಣದಲ್ಲಿ ಪಠಿತವಾಗಿದೆ. ಪಂಡಃ ಸಂಜಾತಃ ಅಸ್ಯ ಪಂಡಿತಃ। ವಿಶಿಷ್ಟಜ್ಞಾನವುಂಟಾದವನು ವಿದ್ವಾಂಸ. ಇದು ಆಕೃತಿಗಣ. ಈ ಗಣದಲ್ಲಿ ಹೇಳದೆ ಇತಚಿನಿಂದ ಕೂಡಿ ದೃಷ್ಟವಾದರೆ ಈ ಗಣದ ಶಬ್ದವೆಂದು ತಿಳಿಯಬೇಕು.

### ದ್ವಯಸಚಾದಿಪ್ರತ್ಯಯಗಳನ್ನು ವಿಧಿಸುವ ಸೂತ್ರ.

**೧೧೬೧. ಪ್ರಮಾಣೇ ದ್ವಯಸಜ್‌ದಘ್ನಞ್‌ಮಾತ್ರಚಃ ॥ ೫-೨-೩೭ ॥**

**ತದಸ್ಯೇತ್ಯನುವರ್ತತೇ। ಊರೂ ಪ್ರಮಾಣಮಸ್ಯ—ಊರುದ್ವಯಸಮ್। ಊರುದಘ್ನಮ್। ಊರುಮಾತ್ರಮ್ ॥**

ದ್ವಿಪದ ಸೂತ್ರ. 'ತತ್, ಅಸ್ಯ' ಅನುವೃತ್ತಿ. ಪ್ರಮಾಣಾರ್ಥದಲ್ಲಿರುವ ಪ್ರಥಮಾಂತದಮೇಲೆ ಈ ಪ್ರಮೇಯಕ್ಕೆ (ಪ್ರಮಾಣದಿಂದ ಕೂಡಿರುವ ವಸ್ತು) ಇದು ಪ್ರಮಾಣವೆಂಬರ್ಥದಲ್ಲಿ ದ್ವಯಸಚ್, ದಘ್ನಚ್, ಮಾತ್ರಚ್ ಪ್ರತ್ಯಯಗಳು ಬರುತ್ತವೆ. ಊರೂ ಪ್ರಮಾಣಮಸ್ಯ. ಈ ವಸ್ತುವಿಗೆ ತೊಡೆಗಾತ್ರ ಪ್ರಮಾಣವಿದೆ. ಊರು+ದ್ವಯಸಚ್. ಊರುದ್ವಯಸಮ್=ತೊಡೆ ಆಳತೆಯಿರುವುದು. ಹೀಗೆಯೇ

ಊರುದಘ್ನಮ್, ಊರುಮಾತ್ರಮ್ ಎಂದಾಗುತ್ತದೆ. ಇವುಗಳಿಂದ ಒಂದು ಅಳತೆ ತೋರುತ್ತದೆ. ಮೊದಲಿನ ಎರಡು ಶಬ್ದಗಳು ಎತ್ತರದ ಅಳತೆಯನ್ನು ಸೂಚಿಸುತ್ತವೆ. ಕೊನೆಯ ಶಬ್ದ ಎಲ್ಲಾ ಅಳತೆಯನ್ನು ತಿಳಿಸುತ್ತದೆ. ಪ್ರಸ್ಥಮಾತ್ರಮ್ =೧ ಸೇರು.

ಪರಿಮಾಣಾರ್ಥದಲ್ಲಿ ವತುಪ್ ಹೇಳುವ ಸೂತ್ರ.

**೧೧೭೨. ಯತ್ತದೇತೇಭ್ಯಃ ಪರಿಮಾಣೇ ವತುಪ್ ॥ ೫-೨-೩೯ ॥**

**ಯತ್ಪರಿಮಾಣಮಸ್ಯ ಯಾವಾನ್ । ತಾವಾನ್ । ಏತಾವಾನ್ ॥**

ತ್ರಿಪದ ಸೂತ್ರ. 'ತದಸ್ಯ' ಅನುವೃತ್ತಿ. ಇದಕ್ಕೆ ಅದು ಪರಿಮಾಣವೆಂಬರ್ಥದಲ್ಲಿ ಪರಿಮಾಣವಾಚಕಗಳಾದ ಯತ್, ತದ್, ಏತದ್ ಶಬ್ದಗಳೇ ಪ್ರಕೃತಿಯಾಗಿರುವ ಪ್ರಥಮಾಂತದಮೇಲೆ ವತುಪ್ ಪ್ರತ್ಯಯ ಬರುತ್ತದೆ. ಯತ್ ಪರಿಮಾಣಂ ಅಸ್ಯ. ಯಾವುದು ಇದಕ್ಕೆ ಪರಿಮಾಣವೋ. ಯತ್ + ವತುಪ್. ಉಕಾರ ಪಕಾರ ಇತ್. 'ಸರ್ವನಾಮ್ನಃ' (ಸೂ. ೩೫೦) ಸೂತ್ರದಿಂದ ಯತಿಗೆ ಆಕಾರಾಂತಾದೇಶ. ಯ+ ಆ+ವತ್. ಸವರ್ಣದೀರ್ಘ. ಯಾವತ್. ಸುಪರವಾದಾಗ 'ಉಗಿದಚಾಮ್—' ಸೂತ್ರದಿಂದ ನುಮ್. 'ಅತ್ವಸಂತಸ್ಯ—' ಸೂತ್ರದಿಂದ ದೀರ್ಘ. ಯಾವಾನ್ತ್ಸ್. ಹಲ್ಙ್ಯಾದಿಲೋಪ. ಸಂಯೋಗಾಂತಲೋಪ. ಯಾವಾನ್. ಸಾಪೇಕ್ಷಿತ ಶಬ್ದ. ಎಷ್ಟೋ ಅಂದರೆ ಮುಂದೆ ಅಷ್ಟು ಎಂದಿದ್ದರೆ ಅರ್ಥ ಪೂರ್ತಿಯಾಗುತ್ತದೆ. ತತ್ ಪರಿಮಾಣಮಸ್ಯ. ತತ್+ವತ್. ಹಿಂದಿನಂತೆ ಪ್ರಕ್ರಿಯೆ. ತಾವಾನ್. ಏತದ್ ಪರಿಮಾಣಮಸ್ಯ. ಏತದ್+ವತ್. ಏತಾವಾನ್.

ಕಿಮ್, ಇದಮಿಗೆ ವತುಪ್, ಘತ್ವ ಹೇಳುವ ಸೂತ್ರ.

**೧೧೭೩. ಕಿಮಿದಂಭ್ಯಾಂ ವೋ ಘಃ ॥ ೫-೨-೪೦ ॥**

**ಆಭ್ಯಾಂ ವತುಪ್ ಸ್ಯಾದ್ ವಕಾರಸ್ಯ ಘಶ್ಚ ॥**

ತ್ರಿಪದ ಸೂತ್ರ. 'ತದಸ್ಯ' ಅನುವೃತ್ತಿ. ಕಿಮ್, ಇದಮ್ ಶಬ್ದವೇ ಪ್ರಕೃತಿಯಾಗಿರುವ ಪ್ರಥಮಾಂತದ ಮೇಲೆ ಅದು ಇದಕ್ಕೆ ಪರಿಮಾಣವೆಂಬರ್ಥದಲ್ಲಿ ವತುಪ್ ಪ್ರತ್ಯಯವೂ, ವತುಪಿನ ವಕಾರಕ್ಕೆ ಘಾದೇಶವೂ ಬರುತ್ತದೆ. ಕಿಂ ಪರಿಮಾಣಮಸ್ಯ. ಕಿಮ್+ವತುಪ್. ವಕಾರಕ್ಕೆ ಘ ಬಂದಾಗ 'ಆಯನೇಯೀ—' ಸೂತ್ರದಿಂದ ಅದಕ್ಕೆ ಇಯಾದೇಶ. ಕಿಮ್+ಇಯತ್. ಈಗ ಪ್ರಕೃತಿಗೆ ಆದೇಶ ಹೇಳುತ್ತಾನೆ.

ಇದಮ್, ಕಿಮ್ ಶಬ್ದಗಳಿಗೆ ಆದೇಶ ಹೇಳುವ ಸೂತ್ರ.

**೧೧೭೪. ಇದಂಕಿಮೋರೀಶ್ಕೀ ॥ ೬-೩-೯೦ ॥**

**ದೃಗ್ದೃಶವತುಷು ಇದಮ ಈಶ್ ಕಿಮಃ ಕೀ । ಕಿಯಾನ್ । ಇಯಾನ್ ॥**

ಇದಂಕಿಮೋಃ, ಈಶ್‌ಕೀ ॥ ದ್ವಿಪದಸೂತ್ರ. 'ದೃಗ್‌ದೃಶವತುಷು' ಸೂತ್ರಾನುವೃತ್ತಿ. ದೃಗ್, ದೃಶ ಶಬ್ದಗಳೂ ವತುಪ್ ಪ್ರತ್ಯಯವೂ ಪರದಲ್ಲಿರುವಾಗ ಇದಮ್ ಶಬ್ದಕ್ಕೆ ಈಶ್ ಆದೇಶವೂ ಕಿಮ್ ಶಬ್ದಕ್ಕೆ ಕಿ ಆದೇಶವೂ ಬರುತ್ತದೆ. ಪ್ರಕೃತ ವತುಪ್ ಪರವಾದುದರಿಂದ ಕಿಮಿಗೆ ಕಿ ಆದೇಶ ಬಂದರೆ ಕಿಯತ್ ಶಬ್ದವಾಗುತ್ತದೆ. ಸುವಿನಲ್ಲಿ ನುಮ್, ದೀರ್ಘ, ಸುಲೋಪ, ನಲೋಪ. ಕಿಯಾನ್. ಇದಂ ಪರಿಮಾಣಂ ಅಸ್ಯ. ಇದಮ್+ವತುಪ್. ಇದಮ್+ಇಯತ್. ಇದಮಿಗೆ ಈಶಾದೇಶ. ಶಿತ್ ಆದುದರಿಂದ ಸರ್ವಾದೇಶ. ಈ+ಇಯತ್. 'ಯಸ್ಯೇತಿ ಚ' ಈಕಾರಲೋಪ. ಇಯತ್. ಸುವಿನಲ್ಲಿ ಹಿಂದಿನಂತೆ ಪ್ರಕ್ರಿಯೆ. ಇಯಾನ್.

ಅವಯವಾರ್ಥದಲ್ಲಿ ತಯಪ್ ಹೇಳುವ ಸೂತ್ರ.

೧೧೭೫. ಸಂಖ್ಯಾಯಾ ಅವಯವೇ ತಯಪ್ ॥ ೫-೨-೪೨ ॥

**ಪಂಚ ಅವಯವಾ ಅಸ್ಯ ಪಂಚತಯಮ್ ॥**

ತ್ರಿಪದ ಸೂತ್ರ. ಅವಯವವಾಚಕ ಸಂಖ್ಯಾವಾಚಕ ಪ್ರಕೃತಿಕಪ್ರಥಮಾಂತದ ಮೇಲೆ ಅವಯವಿರೂಪಾರ್ಥ ತೋರುವಾಗ ತಯಪ್ ಪ್ರತ್ಯಯ ಬರುತ್ತದೆ. ಅವಯವ ಭೇದ ತೋರದೆ ಸಮುದಾಯರೂಪವಾಗಿರುವುದು ಅವಯವಿ. ಐದು ಅವಯವಗಳು ಇದಕ್ಕೆ (ಇವೆ). ಪಂಚನ್+ತಯಪ್. ಪದಸಂಜ್ಞೆಯಿರುವುದರಿಂದ 'ನಲೋಪಃ ಪ್ರಾತಿಪದಿಕಾಂತಸ್ಯ' ಸೂತ್ರದಿಂದ ನಲೋಪ. ಪಂಚತಯಮ್=ಐದು ಅವಯವವುಳ್ಳ ಸಮುದಾಯ.

ತಯಪಿಗೆ ಅಯಚಾದೇಶ ಹೇಳುವ ಸೂತ್ರ.

೧೧೭೬. ದ್ವಿತ್ರಿಭ್ಯಾಂ ತಯಸ್ಯಾಯಜ್ವಾ ॥ ೫-೨-೪೩ ॥

**ದ್ವಯಮ್ । ದ್ವಿತಯಮ್ । ತ್ರಯಮ್ । ತ್ರಿತಯಮ್ ॥**

ದ್ವಿತ್ರಿಭ್ಯಾಂ, ತಯಸ್ಯ, ಅಯಚ್, ವಾ ॥ ನಾಲ್ಕು ಪದಗಳುಳ್ಳ ಸೂತ್ರ. ದ್ವಿತ್ರಿಭ್ಯಾಂ ಪಂಚಮೀ. ದ್ವಿ, ತ್ರಿ ಶಬ್ದಗಳ ಪರದಲ್ಲಿರುವ ತಯಪಿಗೆ ಅಯಚಾದೇಶ ವಿಕಲ್ಪವಾಗಿ ಬರುತ್ತದೆ. ದ್ವೌ ಅವಯವೌ ಅಸ್ಯ. ದ್ವಿ+ತಯ ಎಂದಿರುವಾಗ ಅಯಜಾದೇಶ ಬಂದರೆ ದ್ವಿ+ಅಯ ಎಂದಿರುವಾಗ 'ಯಸ್ಯೇತಿ ಚ' ಇಕಾರಲೋಪ. ದ್ವಯಮ್. ಬಾರದಿದ್ದರೆ ದ್ವಿತಯಮ್=ಎರಡು ಅವಯವವುಳ್ಳದ್ದು. ತ್ರಯಃ ಅವಯವಾಃ ಅಸ್ಯ. ಹಿಂದಿನಂತೆ ಪ್ರಕ್ರಿಯೆ. ತ್ರಯಮ್. ತ್ರಿತಯಮ್.

ನಿತ್ಯವಾಗಿ ಅಯಚಾದೇಶ ಹೇಳುವ ಸೂತ್ರ.

೧೧೭೭. ಉಭಾದುದಾತ್ತೋ ನಿತ್ಯಮ್ ॥ ೫-೨-೪೪ ॥

**ಉಭಶಬ್ದಾತ್ತಯಪೋಽಯಚ್ ಸ್ಯಾತ್ ಸ ಚಾದ್ಯುದಾತ್ತಃ। ಉಭಯಮ್।**

ತ್ರಿಪದ ಸೂತ್ರ. ಉಭ ಶಬ್ದದ ಪರದಲ್ಲಿರುವ ತಯಪಿಗೆ ಅಯಚಾದೇಶ ನಿತ್ಯವಾಗಿ ಬರುತ್ತದೆ. ಉಭೌ ಅಯವಯೌ ಅಸ್ಯ. ಉಭ+ತಯಪ್. ಅಯಚ್. ಉಭ+ಅಯ. 'ಯಸ್ಯೇತಿ ಚ' ಅಲೋಪ. ಉಭಯಮ್=ಎರಡು ಅವಯವವುಳ್ಳದ್ದು.

ಪೂರಣಾರ್ಥದಲ್ಲಿ ಡಟ್ ಪ್ರತ್ಯಯ ಹೇಳುವ ಸೂತ್ರ.

**೧೧೭೮. ತಸ್ಯ ಪೂರಣೇ ಡಟ್ ॥ ೫-೨-೪೮ ॥**

**ಏಕಾದಶಾನಾಂ ಪೂರಣಃ ಏಕಾದಶಃ ॥**

ತ್ರಿಪದ ಸೂತ್ರ. 'ಸಂಖ್ಯಾಯಾ ಗುಣಸ್ಯ—' ಸೂತ್ರದಿಂದ 'ಸಂಖ್ಯಾಯಾಃ' ಅನುವೃತ್ತಿ. ಪೂರ್ಯತೇ ಅನೇನ ಇತಿ ಪೂರಣಃ। ಕರಣಾರ್ಥದಲ್ಲಿ ಪೃ ಧಾತುವಿಗೆ ಲ್ಯುಟ್. **ಸೂತ್ರಾರ್ಥ**—ಸಂಖ್ಯೇಯಾರ್ಥವನ್ನು ಕೊಡುವ ಸಂಖ್ಯಾವಾಚಕಶಬ್ದಗಳೇ ಪ್ರಕೃತಿಯಾಗಿರುವ ಷಷ್ಠ್ಯಂತದ ಮೇಲೆ ಪೂರಣಾರ್ಥದಲ್ಲಿ ಡಟ್ ಪ್ರತ್ಯಯ ಬರುತ್ತದೆ. ಸಂಖ್ಯಾವಿಶಿಷ್ಟವಾದುದೇ ಸಂಖ್ಯೇಯ. ಹನ್ನೊಂದನೆಯ ಸಂಖ್ಯೆಯು ಯಾರಿಂದ ಪೂರ್ತಿಮಾಡಲ್ಪಡುತ್ತದೋ ಅವನು ಏಕಾದಶನಾಗುತ್ತಾನೆ. ಏಕಾದಶನ್+ಡ. 'ಚುಟೂ' ಸೂತ್ರದಿಂದ ಡಕಾರ ಇತ್. ಡಿತ್ತಾದುದರಿಂದ ಟಿಲೋಪ. ಏಕಾದಶ್+ಅ. ಏಕಾದಶಃ। ಪೂರಣಾರ್ಥಕಪ್ರತ್ಯಯಗಳು ದ್ವಿತ್ವಾದಿಸಂಖ್ಯಾವಾಚಕಗಳ ಮೇಲೇ ಹೇಳಬೇಕು. ಏಕತ್ವಸಂಖ್ಯಾವಾಚಕಕ್ಕೆ ಸಂಖ್ಯಾಂತರಪೂರಣೆ ಅನಾವಶ್ಯಕವಾದುದರಿಂದ ಬರುವುದಿಲ್ಲ.

ಪೂರಣಾರ್ಥದಲ್ಲಿ ಮಟಾಗಮ ಹೇಳುವ ಸೂತ್ರ.

**೧೧೭೯. ನಾನ್ತಾದಸಂಖ್ಯಾದೇರ್ಮಟ್ ॥ ೫-೨-೪೯ ॥**

**ಡಟೋ ಮಡಾಗಮಃ। ಪಞ್ಚಾನಾಂ ಪೂರಣಃ ಪಞ್ಚಮಃ। ನಾನ್ತಾತ್ ಕಿಮ್?**

ನಾಂತಾತ್, ಅಸಂಖ್ಯಾದೇಃ, ಮಟ್ ॥ ತ್ರಿಪದ ಸೂತ್ರ. ಸಂಖ್ಯಾ ಆದಿಯಲ್ಲಿಲ್ಲದಿರುವ ನಾಂತವಾದ ಸಂಖ್ಯಾವಾಚಕಶಬ್ದದಮೇಲೆ ವಿಹಿತವಾದ ಡಟ್ ಪ್ರತ್ಯಯಕ್ಕೆ ಮಟಾಗಮ ಬರುತ್ತದೆ. ಐದನೇ ಸಂಖ್ಯಾಪೂರಕ. ಪಂಚನ್+ಡಟ್. ಟಿಲೋಪ. ಪಂಚ್+ಅ. ಮಟಾಗಮ. ಟಿತ್ತಾದುದರಿಂದ ಆದ್ಯವಯವ. ಪಂಚ್+ಮ್ಅ. ಪಂಚಮಃ। ಅಷ್ಟಮಃ ಇತ್ಯಾದಿ. ಸೂತ್ರದ ಪದಗಳಿಗೆ ಸಾರ್ಥಕ್ಯ ತೋರಿಸುತ್ತಾನೆ. ನಾಂತವಾದ ಸಂಖ್ಯಾವಾಚಕವೆಂದುದೇಕೆ? ವಿಂಶತ್ಯಾದಿಗಳಲ್ಲಿ ಈ ಆಗಮ ಬರುವುದಿಲ್ಲ. ಅದನ್ನು ಸೂತ್ರವಿವರದಿಂದ ತೋರಿಸುತ್ತಾನೆ.

ವಿಂಶತಿ ಶಬ್ದದ ತಿಗೆ ಲೋಪ ಹೇಳುವ ಸೂತ್ರ.

೧೧೮೦. ತಿ ವಿಂಶತೇರ್ಡಿತಿ || ೬-೪-೧೪೨ ||

**ವಿಂಶತೇರ್ಭಸ್ಯ ತಿಶಬ್ದಸ್ಯ ಲೋಪೋ ಡಿತಿ ಪರೇ। ವಿಂಶಃ। ಅಸಂ-ಖ್ಯಾದೇಃ ಕಿಮ್? ಏಕಾದಶಃ ||**

ತ್ರಿಪದ ಸೂತ್ರ. ತಿ ಲುಪ್ತಷಷ್ಠೀಕ. 'ಭಸ್ಯ' ಅಧಿಕಾರ. ಭಸಂಜ್ಞೆಯಿರುವ ವಿಂಶತಿ ಶಬ್ದದ ತಿ ಎಂಬುದಕ್ಕೆ ಡಿತ್ತಾದ ಪ್ರತ್ಯಯ ಪರದಲ್ಲಿರುವಾಗ ಲೋಪ. 'ಅಲ್ಲೋಪೋಽನಃ' ಸೂತ್ರದಿಂದ 'ಲೋಪಃ' ಅನುವೃತ್ತಿ. ವಿಂಶತೇಃ ಪೂರಣಃ। ವಿಂಶತಿ+ಡಟ್. ತಿ ಎಂಬುದಕ್ಕೆ ಲೋಪಬಂದರೆ ವಿಂಶ+ಅ ಎಂದಿರುವಾಗ 'ಅತೋ ಗುಣೇ' ಸೂತ್ರದಿಂದ ಪರರೂಪ. ವಿಂಶಃ। 'ಅಸಿದ್ಧವದತ್ರಾಭಾತ್' ಸೂತ್ರದಿಂದ ತಿ ಲೋಪಬಂದದ್ದು ಅಸಿದ್ಧವಾದುದರಿಂದ 'ಯಸ್ಯೇತಿ ಚ' ಸೂತ್ರದಿಂದ ಅಲೋಪ ಬರುವುದಿಲ್ಲ. ಹಿಂದಿನ ಸೂತ್ರದಲ್ಲಿ ಸಂಖ್ಯಾದಿಯಾಗಿರಬಾರದೆಂದುದೇಕೆ? ಏಕಾದಶಃ। ದಶನ್ ನಾಂತವಾದರೂ ಏಕಶಬ್ದ ಆದಿಯಲ್ಲಿರುವುದರಿಂದ ಮಡಾಗಮ ಬರುವುದಿಲ್ಲ. ಹಿಂದೆ ಪ್ರಕ್ರಿಯಾ ತೋರಿಸಿದೆ.

ಡಟನಲ್ಲಿ ಥುಕಾಗಮ ಹೇಳುವ ಸೂತ್ರ.

ೱ೧೮೧. ಷಟ್ಕತಿಕತಿಪಯಚತುರಾಂ ಥುಕ್ || ೫-೨-೫೧ ||

**ಏಷಾಂ ಥುಗಾಗಮಃ ಸ್ಯಾಡ್ಡಟಿ। ಷಣ್ಣಾಂ ಪೂರಣಃ ಷಷ್ಠಃ। ಕತಿಥಃ। ಕತಿಪಯಶಬ್ದಸ್ಯಾಸಂಖ್ಯಾತ್ವೇಽಪ್ಯತ ಏವ ಜ್ಞಾಪಕಾಡ್ಡಟ್। ಕತಿಪಯಥಃ। ಚತುರ್ಥಃ ||**

ದ್ವಿಪದ ಸೂತ್ರ. ಷಟ್, ಕತಿ, ಕತಿಪಯ, ಚತುರ್ ಶಬ್ದಗಳಿಗೆ ಡಟ್ ಪ್ರತ್ಯಯ ಪರದಲ್ಲಿರುವಾಗ ಥುಕಾಗಮ ಬರುತ್ತದೆ. ಷಣ್ಣಾಂ ಪೂರಣಃ। ಆರನೇ ಸಂಖ್ಯಾ ಪೂರ್ತಿಮಾಡುವವನು. ಷಷ್+ಅ. ಎಂದಿರುವಾಗ ಥುಕಾಗಮ. ಥುಕ್‌ನಲ್ಲಿ ಕಕಾರ ಇತ್. ಉಕಾರ ಉಚ್ಚಾರಣಾರ್ಥ. ಕಿತ್ತಾದುದರಿಂದ ಅಂತಾವಯವ. ಷಷ್‌ಥ್+ಅ. 'ಷ್ಟುನಾಷ್ಟುಃ' ಸೂತ್ರದಿಂದ ಥಕಾರಕ್ಕೆ ಠಕಾರ. ಷಷ್ಠಃ। ಕತೀನಾಂ ಪೂರಣಃ। ಕತಿಥ್+ಅ. ಕತಿಥಃ। ಎಷ್ಟು ಸಂಖ್ಯಾಪೂರಕ. ಡಟ್ ಪ್ರತ್ಯಯ ಸಂಖ್ಯಾವಾಚಕಶಬ್ದದಮೇಲೆ ಮಾತ್ರ ಹೇಳಿದೆ. ಕತಿಪಯ ಶಬ್ದ ಸಂಖ್ಯಾವಾಚಕ ವಲ್ಲ. ಇದಕ್ಕೆ ಹೇಗೆ ಥುಕಾಗಮ? ಅಂದರೆ ಇಲ್ಲಿ ಡಟ್ ಪರವಾದಾಗ ಕಾರ್ಯ ಹೇಳಿದುದರಿಂದಲೇ ಡಟ್ ಬರುತ್ತದೆಂದು ತಿಳಿಯಬೇಕು. ಕತಿಪಯಾನಾಂ ಪೂರಣಃ। ಕತಿಪಯ+ಡಟ್. ಥುಗಾಗಮ. ಕತಿಪಯಥಃ। ಕೆಲವು ಸಂಖ್ಯಾಪೂರಕ. ಚತುರ್ಣಾಂ ಪೂರಣಃ। ಚತುರ್‌ಥ್+ಅ. ಚತುರ್ಥ=ನಾಲ್ಕನೇ ಸಂಖ್ಯಾಪೂರಕ.

ಪೂರಣಾರ್ಥದಲ್ಲಿ ತೀಯ ಪ್ರತ್ಯಯ ಹೇಳುವ ಸೂತ್ರ.

**೧೧೮೨. ದ್ವೇಸ್ತೀಯಃ ॥ ೫-೨-೫೪ ॥**

**ಡಟೋಽಪವಾದಃ । ದ್ವಯೋಃ ಪೂರಣಃ ದ್ವಿತೀಯಃ ॥**

ದ್ವೇಃ, ತೀಯಃ ॥ ದ್ವಿಪದ ಸೂತ್ರ. ದ್ವಿಶಬ್ದವೇ ಪ್ರಕೃತಿಯಾಗಿರುವ ಷಷ್ಠ್ಯಂತದ ಮೇಲೆ ಪೂರಣಾರ್ಥದಲ್ಲಿ ತೀಯ ಪ್ರತ್ಯಯ ಬರುತ್ತದೆ. ಡಟಿಗೆ ಅಪವಾದ. ದ್ವಯೋಃ ಪೂರಣಃ । ಎರಡು ಸಂಖ್ಯೆಯನ್ನು ಪೂರ್ತಿಮಾಡುವವನು. ದ್ವಿ+ತೀಯ. ದ್ವಿತೀಯಃ =ಎರಡನೆಯವನು.

ತ್ರಿಶಬ್ದಕ್ಕೆ ತೀಯ ಪ್ರತ್ಯಯ ಹೇಳುವ ಸೂತ್ರ.

**೧೧೮೩. ತ್ರೇಃ ಸಂಪ್ರಸಾರಣಂ ಚ ॥ ೫-೨-೫೫ ॥ ತೃತೀಯಃ ॥**

ತ್ರಿಪದ ಸೂತ್ರ. ಷಷ್ಠ್ಯಂತ ತ್ರಿಶಬ್ದಕ್ಕೆ ಪೂರಣಾರ್ಥದಲ್ಲಿ ತೀಯ ಪ್ರತ್ಯಯವೂ ತ್ರಿಶಬ್ದದ ರೇಫಕ್ಕೆ ಸಂಪ್ರಸಾರಣವೂ (ಋ) ಬರುತ್ತದೆ. ತ್ರಯಾಣಾಂ ಪೂರಣಃ । ತ್ರಿ+ತೀಯ. ರೇಫಕ್ಕೆ ಸಂಪ್ರಸಾರಣ ತೃ+ಇ+ತೀಯ. 'ಸಂಪ್ರಸಾರಣಾಚ್ಚ' ಪೂರ್ವರೂಪ. ತೃತೀಯಃ=ಮೂರನೆಯವನು.

ಛಂದಃ ಶಬ್ದಕ್ಕೆ ನಿಪಾತಮಾಡುವ ಸೂತ್ರ.

**೧೧೮೪. ಶ್ರೋತ್ರಿಯಂಶ್ಛಂದೋಽಧೀತೇ ॥ ೫-೨-೮೪ ॥**

**ಶ್ರೋತ್ರಿಯಃ । ವೇತ್ಯನುವೃತ್ತೇಶ್ಛಾಂದಸಃ ॥**

ಶ್ರೋತ್ರಿಯನ್, ಛಂದಃ, ಅಧೀತೇ ॥ ತ್ರಿಪದ ಸೂತ್ರ. ಸಿದ್ಧರೂಪವನ್ನು ಹೇಳಿರುವುದರಿಂದ ನಿಪಾತಮಾಡಿರುವ ಸೂತ್ರ. ದ್ವಿತೀಯಾಂತ ಛಂದಃ ಶಬ್ದದ ಮೇಲೆ 'ಅಧೀತೇ' ಓದುತ್ತಾನೆ ಎಂಬರ್ಥದಲ್ಲಿ ಘನ್ ಪ್ರತ್ಯಯವೂ ಪ್ರಕೃತಿಗೆ (ಛಂದಃ) ಶ್ರೋತ್ರಾದೇಶವೂ ನಿಪಾತಿತವಾಗಿದೆ. ಘಕ್ಕೆ ಇಯಾದೇಶ. ಶ್ರೋತ್ರಿಯಃ । ವೇದ ಓದುವವನು. ಇಲ್ಲಿ 'ವಾ' ಅನುವೃತ್ತಿ ಮಾಡಿರುವುದರಿಂದ ನಿಪಾತ ಬಾರದಿದ್ದರೆ 'ತತ್ ಅಧೀತೇ' ಅದನ್ನು ಓದುತ್ತಾನೆ ಎಂಬರ್ಥದಲ್ಲಿ 'ತದಧೀತೇ ತದ್ವೇದ' ಸೂತ್ರ ದಿಂದ ಛಂದಃ ಶಬ್ದಕ್ಕೆ ಅಣ್. ಛಂದಸ್+ಅ. ಆದಿವೃದ್ಧಿ. ಛಾಂದಸಃ ।

ಇನಿಪ್ರತ್ಯಯವಿಧಾಯಕ ಸೂತ್ರ.

**೧೧೮೫. ಪೂರ್ವಾದಿನಿಃ ॥ ೫-೨-೮೬ ॥**

**ಪೂರ್ವಂ ಕೃತಮನೇನ ಪೂರ್ವೀ ॥**

ಪೂರ್ವಾತ್, ಇನಿಃ ॥ ದ್ವಿಪದ ಸೂತ್ರ. 'ಶ್ರಾದ್ಧಮನೇನ—' ಸೂತ್ರದಿಂದ 'ಅನೇನ' ಅನುವೃತ್ತಿ. ಇದು ಕರ್ತೃತೃತೀಯಾಂತ. **ಸೂತ್ರಾರ್ಥ**—ದ್ವಿತೀಯಾಂತ ಪೂರ್ವ ಶಬ್ದದ ಮೇಲೆ 'ಅನೇನ' ಎಂಬರ್ಥದಲ್ಲಿ ಇನಿ ಪ್ರತ್ಯಯ ಬರುತ್ತದೆ. ಕರ್ತೃವಿಗೆ ಕ್ರಿಯಾಕಾಂಕ್ಷಾ ನಿಯತವಾದುದರಿಂದ ಇಲ್ಲಿ ಅನ್ವಯಕ್ಕೋಸ್ಕರ ಕೃತಮ್ (ಮಾಡಲ್ಪಟ್ಟದ್ದು) ಎಂಬ ಸಾಮಾನ್ಯಕ್ರಿಯಾವಾಚಕಪದವು ಅಧ್ಯಾಹೃತವಾಗುತ್ತದೆ. ಆಗ ಪೂರ್ವಂ ಎಂಬುದು ಕ್ರಿಯಾವಿಶೇಷಣ. ಪೂರ್ವಂ ಕೃತಮನೇನ । ಇವನಿಂದ ಹಿಂದೆ ಮಾಡಲ್ಪಟ್ಟದ್ದು. ಪೂರ್ವ+ಇನಿ. ಅಂತ್ಯ ಇಕಾರ ಉಚ್ಚಾರಣಾರ್ಥ. 'ಯಸ್ಯೇತಿ ಚ' ಅಲೋಪ. ಪೂರ್ವಿನ್ ಶಬ್ದ. ಪ್ರಥಮಾಸುವಿನಲ್ಲಿ ಉಪಧಾ ದೀರ್ಘ. ಸುಲೋಪ, ನಲೋಪ. ಪೂರ್ವೀ.

ಸಪೂರ್ವಕ್ಕೆ ಇನಿ ಹೇಳುವ ಸೂತ್ರ.

### ೧೧೮೬. **ಸಪೂರ್ವಾಚ್ಚ** ॥ ೫-೨-೮೭ ॥ **ಕೃತಪೂರ್ವೀ** ॥

ಸಪೂರ್ವಾತ್, ಚ ॥ ದ್ವಿಪದ ಸೂತ್ರ. ಇರತಕ್ಕ ಪೂರ್ವವುಳ್ಳ (ಪೂರ್ವದಲ್ಲಿ ಶಬ್ದದಿಂದ ಕೂಡಿದ) ಪೂರ್ವ ಶಬ್ದದ ಮೇಲೆ 'ಅನೇನ' ಎಂಬರ್ಥದಲ್ಲಿ ಇನಿ ಪ್ರತ್ಯಯ ಬರುತ್ತದೆ. ಕರ್ಮವಿವಕ್ಷಾಮಾಡದಿರುವಾಗ ಕೃಞ್ ಧಾತು ಅಕರ್ಮಕವಾಗುವುದರಿಂದ ಭಾವಾರ್ಥದಲ್ಲಿ ಕ್ತಪ್ರತ್ಯಯ ಬಂದಾಗ ಕೃತ ಶಬ್ದವಾಗುತ್ತದೆ. ಪೂರ್ವಂ ಕೃತಂ ಅನೇನ । ಎಂದು ವಿಗ್ರಹಮಾಡಿದಾಗ 'ಸಹ ಸುಪಾ' ಸೂತ್ರದಿಂದ ಸಮಾಸ. ಕೃತಪೂರ್ವಂ । ಈಗ ಸಪೂರ್ವವಾದುದರಿಂದ ಇದರಿಂದ ಇನಿಪ್ರತ್ಯಯ. ಪ್ರತ್ಯಯವಿಧಿಯಲ್ಲಿ ತದಂತಕ್ಕೆ ಪ್ರತಿಷೇಧವಿರುವುದರಿಂದ ಪ್ರತ್ಯೇಕ ಹೇಳಿದೆ. ಕೃತಪೂರ್ವೀ. ಈಗ ಯಾವುದು ಹಿಂದೆ ಮಾಡಿರುವುದು ಎಂದು ಕರ್ಮಾಕಾಂಕ್ಷೆ ಬಂದಾಗ ಕಟ ಮುಂತಾದ ಕರ್ಮಗಳನ್ನು ಅಧ್ಯಾಹಾರ ಮಾಡಿಕೊಳ್ಳಬೇಕು. ಕೃತಪೂರ್ವೀ ಕಟಮ್ । ಶ್ರುತಪೂರ್ವೀ ವಾರ್ತಾಮ್ । ಭುಕ್ತಪೂರ್ವೀ ಓದನಮ್ । ಇತ್ಯಾದಿ.

ಇಷ್ಟಾದಿ ಶಬ್ದಗಳಿಗೆ ಇನಿಪ್ರತ್ಯಯ ಹೇಳುವ ಸೂತ್ರ.

### ೧೧೮೭. **ಇಷ್ಟಾದಿಭ್ಯಶ್ಚ** ॥ ೫-೨-೮೮ ॥ **ಇಷ್ಟಮನೇನ ಇಷ್ಟೀ । ಅಧೀತೀ** ॥

ಇತಿ ಭವನಾದ್ಯರ್ಥಕಾಃ ॥ ೧೨ ॥

ದ್ವಿಪದ ಸೂತ್ರ. ಇಷ್ಟಾದಿ ಶಬ್ದಗಳಮೇಲೆ 'ಅನೇನ' ಎಂಬರ್ಥದಲ್ಲಿ ಇನಿ ಪ್ರತ್ಯಯ ಬರುತ್ತದೆ. ಯಜ ಧಾತುವಿಗೆ ಭೂತಕಾಲದಲ್ಲಿ ಭಾವಾರ್ಥದಲ್ಲಿ ಕ್ತಪ್ರತ್ಯಯ ಬಂದು ಇಷ್ಟ ಎಂದಾಗಿದೆ. ಇವನಿಂದ ಹೋಮಿಸಲ್ಪಟ್ಟಿದೆ. ಇಷ್ಟ+ಇನ್. ಅಲೋಪ. ಇಷ್ಟೀ. ಅಧೀತಮನೇನ । ಇವನಿಂದ ಓದಿದೆ. ಅಧೀತ+ಇನ್. ಅಧೀತೀ. ಈ ರೀತಿ ತದ್ಧಿತದಲ್ಲಿ ಭವನಾದ್ಯರ್ಥವುಳ್ಳ ಹನ್ನೆರಡನೇ ಪ್ರಕರಣ ಮುಗಿದಿದೆ.

# ೩೫. ಅಥ ಮತ್ವರ್ಥೀಯಾಃ

ಮತುಪ್ ಪ್ರತ್ಯಯ ವಿಧಾಯಕ ಸೂತ್ರ.

**೧೧೮೮. ತದಸ್ಯಾಸ್ತ್ಯಸ್ಮಿನ್ನಿತಿ ಮತುಪ್ ॥ ೫-೨-೯೪ ॥**

**ಗಾವೋಽಸ್ಯಾಸ್ಮಿನ್ವಾ ಸನ್ತಿ ಗೋಮಾನ್ ॥**

ತತ್, ಅಸ್ಯ, ಅಸ್ತಿ, ಅಸ್ಮಿನ್, ಇತಿ, ಮತುಪ್ ॥ ಆರು ಪದಗಳುಳ್ಳ ಸೂತ್ರ. 'ಅಸ್ತಿ' ಎಂಬಲ್ಲಿ ಪುರುಷವಚನಗಳು ವಿವಕ್ಷಿತವಲ್ಲ. ವರ್ತಮಾನಕಾಲ ಮಾತ್ರ ವಿವಕ್ಷಿತ. **ಸೂತ್ರಾರ್ಥ**—ಅಸ್ತಿಕ್ರಿಯೆಯಲ್ಲಿ ಯಾವುದು ಕರ್ತೃವೋ ಅದನ್ನು ಹೇಳುವ ಪ್ರಥಮಾಂತದ ಮೇಲೆ ಇವನಿಗೆ ಅಥವಾ ಇವನಲ್ಲಿ ಎಂಬರ್ಥದಲ್ಲಿ ಮತುಪ್ ಪ್ರತ್ಯಯ ಬರುತ್ತದೆ. ಗಾವಃ ಅಸ್ಯ, ಅಸ್ಮಿನ್ ವಾ ಸಂತಿ । ಗೋವುಗಳು ಇವನಿಗೆ ಅಥವಾ ಇವನಲ್ಲಿ ಇವೆ. ಅಸ್ತಿಕ್ರಿಯೆಯಲ್ಲಿ ಕರ್ತೃ ಗೋವು. ಗೋ+ಜಸ್+ಮತುಪ್. ಉಕಾರಪಕಾರಗಳು ಇತ್ತಾಗಿ ಲೋಪವಾಗುತ್ತವೆ. ಗೋಮತ್ ಶಬ್ದ. ಸುವಿನಲ್ಲಿ ಉಪಧಾದೀರ್ಘ. ನುಮ್, ಸುಲೋಪ, ತಲೋಪ. ಗೋಮಾನ್=ಹಸು ಉಳ್ಳವನು.

ಮತ್ವರ್ಥದಲ್ಲಿ ಭಸಂಜ್ಞೆ ಹೇಳುವ ಸೂತ್ರ.

**೧೧೮೯. ತಸೌ ಮತ್ವರ್ಥೇ ॥ ೧-೪-೧೯ ॥**

**ತಾಂತಸಾಂತೌ ಭಸಂಜ್ಞೌ ಸ್ತೋ ಮತ್ವರ್ಥೇ ಪ್ರತ್ಯಯೇ ಪರೇ । ಗರುತ್ಮಾನ್ । ವಸೋಃ ಸಂಪ್ರಸಾರಣಮ್ । ವಿದುಷ್ಮಾನ್ ।**

**ವಾ ॥ (ಗುಣವಚನೇಭ್ಯೋ ಮತುಪೋ ಲುಗಿಷ್ಟಃ)**

**ಶುಕ್ಲೋ ಗುಣೋಽಸ್ಯಾಸ್ತೀತಿ ಶುಕ್ಲಃ ಪಟಃ । ಕೃಷ್ಣಃ ॥**

ದ್ವಿಪದ ಸೂತ್ರ. ಮತ್ವರ್ಥಪ್ರತ್ಯಯದಿಂದ ಪ್ರಾತಿಪದಿಕ ಆಕ್ಷಿಪ್ತವಾಗುವುದರಿಂದ ಅದಕ್ಕೆ ತಸೌ ವಿಶೇಷಣ. ತದಂತಲಾಭ. **ಸೂತ್ರಾರ್ಥ**—ತಕಾರಾಂತ ಸಕಾರಾಂತ ಪ್ರಾತಿಪದಿಕಗಳಿಗೆ ಮತ್ವರ್ಥಪ್ರತ್ಯಯ ಪರದಲ್ಲಿರುವಾಗ ಭಸಂಜ್ಞೆ ಬರುತ್ತದೆ. 'ಭಮ್' ಅನುವೃತ್ತಿ. ವಿದ್ವಾಂಸಃ ಸಂತಿ ಅಸ್ಯ ಅಸ್ಮಿನ್ ವಾ । ವಿದ್ವಸ್+ಮತ್. ಹಲಾದಿ ಪ್ರತ್ಯಯ ಪರವಾದುದರಿಂದ ಪದಸಂಜ್ಞಾ ಬರುತ್ತಿರುವಾಗ ಅದಕ್ಕೆ ಅಪವಾದವಾಗಿ ಭಸಂಜ್ಞೆ ಹೇಳಿದೆ. ಇದರಿಂದ 'ವಸೋಃ ಸಂಪ್ರಸಾರಣಮ್' ಸೂತ್ರದಿಂದ ಸಂಪ್ರಸಾರಣ ಬರುತ್ತದೆ. ವಿದು+ಅಸ್+ಮತ್. ಪೂರ್ವರೂಪ. ವಿದುಸ್+ಮತ್. 'ಶಾಸಿವಸಿ—' ಸೂತ್ರದಿಂದ ಷತ್ವ. ವಿದುಷ್ಮತ್ ಶಬ್ದ. ಸುವಿನಲ್ಲಿ ವಿದುಷ್ಮಾನ್

ಎಂದಾಗುತ್ತದೆ. ಗರುತಃ ಸಂತಿ ಅಸ್ಯ ಗರುತ್ಮಾನ್ । ಶುಕ್ಲಃ ಅಸ್ಯ ಅಸ್ತಿ । ಎಂದು ವಿಗ್ರಹಮಾಡಿದಾಗ ಶುಕ್ಲ ಶಬ್ದದ ಮೇಲೆ ಮತುಪ್ ಬಂದಾಗ ಅದಕ್ಕೆ ವಾರ್ತಿಕದಿಂದ ಲೋಪ ಹೇಳುತ್ತಾನೆ. ವಾರ್ತಿಕಾರ್ಥ—ಗುಣ, ಗುಣವುಳ್ಳ ಅರ್ಥವನ್ನು ಹೇಳುವ ಯಾವ ಶುಕ್ಲ ಕೃಷ್ಣಾದಿ ಶಬ್ದಗಳಿವೆಯೋ ಅವು ಗುಣವಚನಗಳು; ಅವುಗಳ ಮೇಲೆ ಬಂದಿರುವ ಮತುಪಿಗೆ ಲುಕ್ ಬರುತ್ತದೆ. ಶುಕ್ಲಃ ಗುಣಃ ಅಸ್ಯ ಅಸ್ತಿ । ಶುಕ್ಲ+ ಮತ್. ಮತುಪಿಗೆ ಲುಕ್ ಬಂದರೆ ಶುಕ್ಲಃ ಎಂದಾಗುತ್ತದೆ. ಬಿಳಿ ಬಣ್ಣವುಳ್ಳದ್ದು. ಹೀಗೇ ಕೃಷ್ಣಃ ಅಸ್ಯ ಅಸ್ತಿ ಕೃಷ್ಣಃ । ಕಪ್ಪು ಬಣ್ಣವುಳ್ಳದ್ದು.

ಮತ್ವರ್ಥದಲ್ಲಿ ಲಚ್ ಹೇಳುವ ಸೂತ್ರ.

**೧೯೯೦. ಪ್ರಾಣಿಸ್ಥಾದಾತೋ ಲಜನ್ಯತರಸ್ಯಾಮ್ ॥ ೫-೨-೯೬ ॥**

**ಚೂಡಾಲಃ । ಚೂಡಾವಾನ್ । ಪ್ರಾಣಿಸ್ಥಾತ್ ಕಿಮ್ ? ಶಿಖಾವಾನ್ ದೀಪಃ । ಪ್ರಾಣ್ಯಙ್ಗಾದೇವ । ಮೇಧಾವಾನ್ ॥**

ಪ್ರಾಣಿಸ್ಥಾತ್, ಆತಃ, ಲಚ್, ಅನ್ಯತರಸ್ಯಾಮ್ ॥ ನಾಲ್ಕು ಪದಗಳುಳ್ಳ ಸೂತ್ರ. ಅಸ್ತಿಕ್ರಿಯೆಯಲ್ಲಿ ಕರ್ತೃವಾದ, ಆಕಾರಾಂತಪ್ರಾಣ್ಯಂಗವಾಚಕವಾದ ಶಬ್ದ ಗಳ ಮೇಲೆ, ಅಸ್ಯ, ಅಸ್ಮಿನ್ ಅರ್ಥಗಳಲ್ಲಿ ಲಚ್ ಪ್ರತ್ಯಯ ವಿಕಲ್ಪವಾಗಿ ಬರುತ್ತದೆ. ಚೂಡಾ ಆದಂತವಾದ ಪ್ರಾಣ್ಯಂಗವಾಚಕ. ಚೂಡಾ (ಜುಟ್ಟು) ಅಸ್ಯ ಅಸ್ತಿ । ಚೂಡಾ+ಲಚ್. ಚೂಡಾಲಃ । ವಿಕಲ್ಪವಾದುದರಿಂದ ಸಾಮಾನ್ಯ ಸೂತ್ರದಿಂದ ಮತುಪ್. ಚೂಡಾ+ಮತ್. 'ಮಾದುಪಧಾಯಾಃ—' ಸೂತ್ರದಿಂದ ಮತುಪಿನ ಮಕಾರಕ್ಕೆ ವಕಾರಾದೇಶ. ಚೂಡಾವತ್ । ಸುವಿನಲ್ಲಿ ನುಮಾಗಮ, ದೀರ್ಘ, ಸುಲೋಪ, ತಲೋಪ. ಚೂಡಾವಾನ್ । ಪ್ರಾಣಿಸ್ಥವಾಗಬೇಕೆಂದುದೇಕೆ? ಶಿಖಾ ವಾನ್ ದೀಪಃ । ಶಿಖಾ ಶಬ್ದವು ಇಲ್ಲಿ ದೀಪದ ಜ್ವಾಲೆಯನ್ನು ತಿಳಿಸುತ್ತದೆ. ಪ್ರಾಣ್ಯಂಗವಾಗದಿರುವುದರಿಂದ ಲಚ್ ಬರುವುದಿಲ್ಲ. ಪ್ರಾಣಿಸ್ಥಪದದಿಂದ ಪ್ರಾಣಿಯಲ್ಲಿ ಇರುವುದು ಎಂದರ್ಥವಾಗುತ್ತದೆ. ಆಗ ಮೂರ್ತಿಮತ್ತಾದದ್ದು, ಆಗದಿರುವುದು ಎಲ್ಲಾ ಆಗಬಹುದು. ಇಲ್ಲಿ ಹಾಗೆ ಆಗಬಾರದು. ಪ್ರಾಣಿಯಲ್ಲಿದ್ದು ಮೂರ್ತಿಮತ್ತಾದ ಅಂಗವಾಚಕ ಶಬ್ದವೇ ಆಗಬೇಕು. ಮೇಧಾ ಪ್ರಾಣಿಯಲ್ಲಿದೆ. ಇದು ಮೂರ್ತಿ ಮತ್ತಾಗದಿರುವುದರಿಂದ ಇದರಮೇಲೆ ಲಚ್ ಬರುವುದಿಲ್ಲ. ಅಸ್ತ್ಯರ್ಥದಲ್ಲಿ ಮತುಪ್. ಮೇಧಾವಾನ್=ಬುದ್ಧಿಯುಳ್ಳವನು.

ಮತ್ವರ್ಥದಲ್ಲಿ ಶ, ನ, ಇಲಚ್ ಹೇಳುವ ಸೂತ್ರ.

**೧೯೯೧. ಲೋಮಾದಿಪಾಮಾದಿಪಿಚ್ಛಾದಿಭ್ಯಃ ಶನೇಲಚಃ ॥ ೫-೨-೧೦೦ ॥**

**ಲೋಮಾದಿಭ್ಯಃ ಶಃ । ಲೋಮಶಃ । ಲೋಮವಾನ್ । ರೋಮಶಃ । ರೋಮವಾನ್ । ಪಾಮಾದಿಭ್ಯೋ ನಃ । ಪಾಮನಃ । (ಗ. ಸೂತ್ರ) ಅಂಗಾತ್ ಕಲ್ಯಾಣೇ ಅಂಗನಾ ॥ (ಗ. ಸೂತ್ರ) ಲಕ್ಷ್ಮ್ಯಾ ಅಚ್ಚ । ಲಕ್ಷ್ಮಣಃ । ಪಿಚ್ಛಾದಿಭ್ಯ ಇಲಚ್ । ಪಿಚ್ಛಿಲಃ । ಪಿಚ್ಛಾವಾನ್ ॥**

ದ್ವಿಪದ ಸೂತ್ರ. ಶಶ್ಚ, ನಶ್ಚ, ಇಲಚ್ ಚ ಶನೇಲಚಃ ॥ ಲೋಮಾದಿಗಣ ಪಠಿತ ಶಬ್ದಗಳಿಗೆ ಶಪ್ರತ್ಯಯವೂ, ಪಾಮಾದಿಗಳಿಗೆ ನಪ್ರತ್ಯಯವೂ, ಪಿಚ್ಛಾದಿಗಳಿಗೆ ಇಲಚ್ ಪ್ರತ್ಯಯವೂ ಮತ್ವರ್ಥದಲ್ಲಿ ವಿಕಲ್ಪವಾಗಿ ಬರುತ್ತದೆ. ಲೋಮಾನಿ ಸಂತಿ ಅಸ್ಯ । ಲೋಮ+ಶ=ಲೋಮಶಃ । ರೋಮವುಳ್ಳವನು. ಬಾರದಿದ್ದರೆ ಲೋಮ ವಾನ್. ಮತುಪ್. ರೋಮಾಣಿ ಸಂತಿ ಅಸ್ಯ । ರೋಮಶಃ । ರೋಮವಾನ್. ಪಾಮಃ ಅಸ್ಯ ಅಸ್ತಿ । ಪಾಮ+ನ. ಪಾಮನಃ । ರೋಗವಿಶೇಷವುಳ್ಳವನು. ಪಾಮಾದಿಗಣದಲ್ಲಿರುವ ಸೂತ್ರವನ್ನು ಹೇಳುತ್ತಾನೆ. ಅಂಗಾತ್ ಕಲ್ಯಾಣೇ । ಕಲ್ಯಾಣ ಎಂದರೆ ಸುಂದರ. ಸುಂದರವಾದ ಅಂಗವುಳ್ಳವ ಎಂಬರ್ಥದಲ್ಲಿ ಅಂಗ ಶಬ್ದದ ಮೇಲೆ ನಪ್ರತ್ಯಯ. ಅಂಗನಾ. ಕಲ್ಯಾಣಾನಿ ಅಂಗಾನಿ ಅಸ್ಯಾಃ । ಎಂದು ವಿಗ್ರಹ. ಸಾಮಾನ್ಯಾಂಗವುಳ್ಳವ ಅಂಗೀ. ಮುಂದೆ ಇನಿ ಪ್ರತ್ಯಯ ಹೇಳುತ್ತಾನೆ. ಲಕ್ಷ್ಮ್ಯಾಃ ಅತ್, ಚ. ಇದೂ ಗಣಸೂತ್ರ. ಲಕ್ಷ್ಮೀ ಶಬ್ದದಮೇಲೆ ಮತ್ವರ್ಥದಲ್ಲಿ ನಪ್ರತ್ಯಯವೂ ಅಕಾರ ಅಂತಾದೇಶವೂ ಬರುತ್ತದೆ. ಲಕ್ಷ್ಮೀಃ ಅಸ್ಯ ಅಸ್ತಿ । ಲಕ್ಷ್ಮ್+ಅ+ನ. ಲಕ್ಷ್ಮನ. 'ಅಟ್‌ಕುಪ್ವಾಙ್—' ಸೂತ್ರದಿಂದ ಣತ್ವ. ಲಕ್ಷ್ಮಣಃ । ಪಿಚ್ಛಾದಿಗಳಿಗೆ ಇಲಚ್ ಪ್ರತ್ಯಯ. ಪಿಚ್ಛಾ ಅಸ್ಯ ಅಸ್ತಿ । ಪಿಚ್ಛಾ+ಇಲ. 'ಯಸ್ಯೇತಿ ಚ' ಪಿಚ್ಛಿಲಃ । ಇಲಚ್ ಬಾರದಿದ್ದರೆ ಮತುಪ್. ಪಿಚ್ಛಾವಾನ್=ನವಿಲುಗರಿ; ಕೆಸರಿನಿಂದ ಕೂಡಿದ ದಾರಿ.

ಮತ್ವರ್ಥದಲ್ಲಿ ಉರಚ್ ಪ್ರತ್ಯಯ ಹೇಳುವ ಸೂತ್ರ.

**೧೯೯೨. ದನ್ತ ಉನ್ನತ ಉರಚ್ ॥ ೫-೨-೧೦೬ ॥**

**ಉನ್ನತಾ ದನ್ತಾಃ ಸನ್ತ್ಯಸ್ಯ ದನ್ತುರಃ ॥**

ತ್ರಿಪದ ಸೂತ್ರ. ಉನ್ನತ ವಿಶೇಷಣದಿಂದ ಕೂಡಿದ ದಂತ ಶಬ್ದದ ಮೇಲೆ ಮತ್ವರ್ಥದಲ್ಲಿ ಉರಚ್ ಪ್ರತ್ಯಯ ಬರುತ್ತದೆ. ಎತ್ತರವಾದ ಹಲ್ಲು ಇವನಿಗೆ ಇದೆ. ದಂತ+ಉರಚ್. 'ಯಸ್ಯೇತಿ ಚ' ಅಲೋಪ. ದಂತುರಃ=ಉಬ್ಬಾದ ಹಲ್ಲು ಉಳ್ಳವನು.

ಮತ್ವರ್ಥದಲ್ಲಿ ವಪ್ರತ್ಯಯ ಹೇಳುವ ಸೂತ್ರ.

**೧೯೯೩. ಕೇಶಾದ್ವೋಽನ್ಯತರಸ್ಯಾಮ್ ॥ ೫-೨-೧೦೯ ॥**

**ಕೇಶವಃ । ಕೇಶೀ । ಕೇಶಿಕಃ । ಕೇಶವಾನ್ । (ಅನ್ಯೇಭ್ಯೋಽಪಿ ದೃಶ್ಯತೇ) ಮಣಿವಃ । (ಅರ್ಣಸೋ ಲೋಪಶ್ಚ) ಅರ್ಣವಃ ॥**

ಕೇಶಾತ್, ವಃ, ಅನ್ಯತರಸ್ಯಾಮ್ ॥ ಕೇಶ ಶಬ್ದವೇ ಪ್ರಕೃತಿಯಾಗಿರುವ ಪ್ರಥಮಾಂತದಮೇಲೆ ಮತ್ವರ್ಥದಲ್ಲಿ ವಪ್ರತ್ಯಯವು ವಿಕಲ್ಪವಾಗಿ ಬರುತ್ತದೆ. 'ವಾ' ಅಧಿಕಾರದಿಂದಲೇ ಬರುತ್ತಿರುವಾಗ ಪುನಃ ವಿಕಲ್ಪಸೂಚಕ 'ಅನ್ಯತರಸ್ಯಾಮ್' ಪದ ಹೇಳಿರುವುದರಿಂದ ಮುಂದೆ ಹೇಳುವ ಇನಿ, ಠನ್ ಪ್ರತ್ಯಯಗಳೂ ಬರುತ್ತವೆಯೆಂದು ಸೂಚಿತವಾಗುತ್ತದೆ. ಕೇಶಾಃ ಸಂತಿ ಅಸ್ಯ ಅಸ್ಮಿನ್ ವಾ । ಕೇಶ+ವ=ಕೇಶವಃ । ಇನಿ ಪ್ರತ್ಯಯ ಬಂದಾಗ ಅಲೋಪ. ಕೇಶ+ಇನ್. ಕೇಶೀ. ಠನ್ ಬಂದಾಗ ಅದಕ್ಕೆ ಇಕಾದೇಶ. ಕೇಶಿಕಃ । ಇವು ಮೂರು ಬಾರದಿರುವಾಗ ಮತುಪ್. ಕೇಶವಾನ್. ಇನ್ನೂ ಕೆಲವು ಶಬ್ದಗಳು ವಪ್ರತ್ಯಯಾಂತವಾಗಿ ಲೋಕದಲ್ಲಿರುವುದರಿಂದ ವಾರ್ತಿಕಕಾರರು ಇತರ ಶಬ್ದಕ್ಕೂ ವಪ್ರತ್ಯಯ ವಿಧಿಸುತ್ತಾರೆ. **ವಾರ್ತಿಕಾರ್ಥ—** ಕೇಶ ಶಬ್ದಕ್ಕಿಂತಲೂ ಇತರ ಶಬ್ದಗಳಮೇಲೆ ಮತ್ವರ್ಥದಲ್ಲಿ ವಪ್ರತ್ಯಯ ತೋರುತ್ತದೆ. ಮಣಿಃ ಅಸ್ಯ ಅಸ್ತಿ ಮಣಿವಃ । ಮಣಿಯುಳ್ಳ ನಾಗವಿಶೇಷ.

ಅರ್ಣಸ್ ಶಬ್ದದ ಮೇಲೆ ಮತ್ವರ್ಥದಲ್ಲಿ ವಪ್ರತ್ಯಯವೂ ಅರ್ಣಸಿನ ಸಕಾರಕ್ಕೆ ಲೋಪವೂ ಬರುತ್ತದೆ. ಅರ್ಣಾಂಸಿ ಸಂತಿ ಅಸ್ಮಿನ್ । ಅರ್ಣಸ್+ವ. ಸಲೋಪ. ಅರ್ಣವಃ । ನೀರು ಇರುವುದು ಸಮುದ್ರ. (ಅರ್ಣಃ=ನೀರು).

ಮತ್ವರ್ಥದಲ್ಲಿ ಇನಿ, ಠನ್ ಹೇಳುವ ಸೂತ್ರ.

**೧೯೯೪. ಅತ ಇನಿಠನೌ ॥ ೫-೨-೧೧೫ ॥ ದಣ್ಡೀ । ದಣ್ಡಿಕಃ ॥**

ದ್ವಿಪದ ಸೂತ್ರ. ಹ್ರಸ್ವಾಕಾರಾಂತ ಪ್ರಾತಿಪದಿಕಪ್ರಕೃತಿಕ ಪ್ರಥಮಾಂತದ ಮೇಲೆ ಮತ್ವರ್ಥದಲ್ಲಿ ಇನಿ ಮತ್ತು ಠನ್ ಪ್ರತ್ಯಯಗಳು ಬರುತ್ತವೆ. ದಂಡಃ ಅಸ್ಯ ಅಸ್ತಿ । ದಂಡ+ಇನಿ. ಇಕಾರ ಉಚ್ಚಾರಣಾರ್ಥ. ಅಲೋಪ. ದಂಡಿನ್ ಶಬ್ದ. ಸುಪರವಾದಾಗ ಉಪಧಾದೀರ್ಘ. ಸುಲೋಪ, ನಲೋಪ. ಠನ್ ಬಂದರೆ 'ಠಸ್ಯೇಕಃ' ಸೂತ್ರದಿಂದ ಅದಕ್ಕೆ ಇಕಾದೇಶ. ದಂಡ+ಇಕ. ಅಲೋಪ. ದಂಡಿಕಃ=ದಂಡವುಳ್ಳವನು.

ವ್ರೀಹ್ಯಾದಿಗಳಿಗೆ ಇನಿ, ಠನ್ ಹೇಳುವ ಸೂತ್ರ.

**೧೯೯೫. ವ್ರೀಹ್ಯಾದಿಭ್ಯಶ್ಚ ॥ ೫-೨-೧೧೬ ॥ ವ್ರೀಹೀ । ವ್ರೀಹಿಕಃ ॥**

ದ್ವಿಪದ ಸೂತ್ರ. ವ್ರೀಹಿ ಮುಂತಾದ ಪ್ರಾತಿಪದಿಕಗಳೇ ಪ್ರಕೃತಿಯಾಗಿರುವ ಪ್ರಥಮಾಂತದ ಮೇಲೆ ಮತ್ವರ್ಥದಲ್ಲಿ ಇನಿ, ಠನ್ ಪ್ರತ್ಯಯಗಳು ಬರುತ್ತವೆ. ವ್ರೀಹಿಃ

ಅಸ್ಯ ಅಸ್ತಿ. ವ್ರೀಹಿ+ಇನ್. 'ಯಸ್ಯೇತಿ ಚ' ಇಕಾರಲೋಪ. ವ್ರೀಹಿನ್. ಸುವಿನಲ್ಲಿ ವ್ರೀಹೀ. ಠನ್ ಬಂದಾಗ ವ್ರೀಹಿ+ಇಕ. ಇಲೋಪ. ವ್ರೀಹಿಕಃ=ಬತ್ತ ವುಳ್ಳವ.

ಮತ್ವರ್ಥದಲ್ಲಿ ವಿನಿ ಪ್ರತ್ಯಯ ಹೇಳುವ ಸೂತ್ರ.

**೧೯೯೬. ಅಸ್ಮಾಯಾಮೇಧಾಸ್ರಜೋ ವಿನಿಃ || ೫-೨-೧೨೧ ||**

**ಯಶಸ್ವೀ | ಯಶಸ್ವಾನ್ | ಮಾಯಾವೀ | ಮೇಧಾವೀ | ಸ್ರಗ್ವೀ ||**

ದ್ವಿಪದ ಸೂತ್ರ. ಅಸ್ ಚ, ಮಾಯಾ ಚ, ಮೇಧಾ ಚ, ಸ್ರಜ್ ಚ, ಅಸ್ಮಾಯಾಮೇಧಾಸ್ರಜಃ | ಅಸ್ ಪ್ರಾತಿಪದಿಕಕ್ಕೆ ವಿಶೇಷಣವಾದುದರಿಂದ ತದಂತ ಲಾಭ. **ಸೂತ್ರಾರ್ಥ**—ಅಸಂತ ಶಬ್ದ, ಮಾಯಾ, ಮೇಧಾ, ಸ್ರಜ್ ಶಬ್ದಗಳಿಗೆ ಮತ್ವರ್ಥದಲ್ಲಿ ವಿನಿಪ್ರತ್ಯಯ ಬರುತ್ತದೆ. ವಿನಿನಲ್ಲಿ ಇಕಾರ ಉಚ್ಚಾರಣಾರ್ಥ. ಅಸಂತಕ್ಕೆ—ಯಶಃ ಅಸ್ಯ ಅಸ್ತಿ | ಯಶಸ್+ವಿನ್. ಯಶಸ್ವಿನ್. ಪ್ರಥಮಾಸುವಿನಲ್ಲಿ ದೀರ್ಘಾದಿ. ಯಶಸ್ವೀ=ಕೀರ್ತಿಯುಳ್ಳವನು. ಮತುಪ್ ಬಂದರೆ ಯಶಸ್+ಮತ್. ಅಕಾರ ಉಪಧೆಯಾಗಿರುವ ಶಬ್ದದ ಮೇಲೆ ಮತುಪ್ ಇರುವುದರಿಂದ 'ಮಾದುಪಧಾಯಾಃ—' ಸೂತ್ರದಿಂದ ಮಕಾರಕ್ಕೆ ವಕಾರಾದೇಶ. ಯಶಸ್ವತ್. ಸುವಿನಲ್ಲಿ ಯಶಸ್ವಾನ್. ಮಾಯಾ ಅಸ್ಯ ಅಸ್ತಿ ಮಾಯಾವಿನ್ | ಮಾಯಾವೀ | ಮೇಧಾ ಅಸ್ಯ ಅಸ್ತಿ ಮೇಧಾವೀ | ಬುದ್ಧಿವಂತ. ಸ್ರಕ್ ಅಸ್ಯ ಅಸ್ತಿ. ಸ್ರಜ್+ವಿನ್. 'ಚೋಃಕುಃ' ಸೂತ್ರದಿಂದ ಪದಾಂತದಲ್ಲಿ ಕುತ್ವ. ಸ್ರಗ್ವೀ=ಮಾಲೆಯುಳ್ಳವನು.

ಮತ್ವರ್ಥದಲ್ಲಿ ಗ್ಮಿನಿ ಪ್ರತ್ಯಯ ಹೇಳುವ ಸೂತ್ರ.

**೧೯೯೭. ವಾಚೋ ಗ್ಮಿನಿಃ || ೫-೨-೧೨೪ || ವಾಗ್ಮೀ ||**

ದ್ವಿಪದ ಸೂತ್ರ. ವಾಕ್ ಶಬ್ದಕ್ಕೆ ಮತ್ವರ್ಥದಲ್ಲಿ ಗ್ಮಿನಿ ಪ್ರತ್ಯಯ ಬರುತ್ತದೆ. ವಾಚಃ ಸಂತಿ ಅಸ್ಮಿನ್ | ವಾಚ್+ಗ್ಮಿನಿ. ಇಕಾರ ಉಚ್ಚಾರಣಾರ್ಥ. 'ಚೋಃಕುಃ' ಸೂತ್ರದಿಂದ ಚಕಾರಕ್ಕೆ ಕುತ್ವ. ವಾಕ್+ಗ್ಮಿನ್. 'ಝಲಾಂ ಜಶೋಽನ್ತೇ' ಕಕಾರಕ್ಕೆ ಗಕಾರಾದೇಶ. ವಾಗ್ಗ್ಮಿನ್. ಎರಡು ಗಕಾರ ಶ್ರವಣವಾಗುತ್ತದೆ. ಸುಪರವಾದಾಗ ದೀರ್ಘಾದಿ. ವಾಗ್ಗ್ಮೀ=ಮಾತುಗಾರ.

ಮತ್ವರ್ಥದಲ್ಲಿ ಅಚ್ ಹೇಳುವ ಸೂತ್ರ.

**೧೯೯೮. ಅರ್ಶಆದಿಭ್ಯೋಽಚ್ || ೫-೨-೧೨೭ ||**

**ಅರ್ಶಃ ಅಸ್ಯ ವಿದ್ಯತೇ ಅರ್ಶಸಃ || ಆಕೃತಿಗಣೋಽಯಮ್ ||**

ದ್ವಿಪದ ಸೂತ್ರ. ಅರ್ಶ ಆದಿ ಗಣಪಠಿತ ಪ್ರಾತಿಪದಿಕಪ್ರಕೃತಿಕ ಪ್ರಥಮಾಂತದ ಮೇಲೆ ಮತ್ವರ್ಥದಲ್ಲಿ ಅಚ್ ಪ್ರತ್ಯಯ ಬರುತ್ತದೆ. ಅರ್ಶಸ್ ಸಾಂತಶಬ್ದ. ಮೂಲ ವ್ಯಾಧಿ. ಅರ್ಶಃ ಅಸ್ಯ ಅಸ್ತಿ | ಅರ್ಶಸ್ + ಅ. ಅರ್ಶಸಃ = ಮೂಲವ್ಯಾಧಿ ಉಳ್ಳವ. ಈ ಗಣದಲ್ಲಿ ಇಷ್ಟೇ ಶಬ್ದಗಳೆಂದು ನಿಯಮವಿಲ್ಲ. ಆಕೃತಿಗಣ. ಇದರಂತೆ ಮತ್ವರ್ಥ ದಲ್ಲಿ ಅಜಂತವಾಗಿ ದೃಷ್ಟವಾದ ಪದಗಳೆಲ್ಲಾ ಈ ಗಣದಲ್ಲಿ ಸೇರಿವೆಯೆಂದು ತಿಳಿಯ ಬೇಕು.

ಮತ್ವರ್ಥದಲ್ಲಿ ಯುಸ್ ಪ್ರತ್ಯಯ ಹೇಳುವ ಸೂತ್ರ.

**೧೯೯. ಅಹಂಶುಭಮೋರ್ಯುಸ್ || ೫-೨-೧೪೦ ||**

**ಅಹಂಯುಃ, ಅಹಙ್ಕಾರವಾನ್ | ಶುಭಂಯುಸ್ತು ಶುಭಾನ್ವಿತಃ ||**

**ಇತಿ ಮತ್ವರ್ಥೀಯಾಃ || ೧೩ ||**

ದ್ವಿಪದ ಸೂತ್ರ. ಅಹಮ್, ಶುಭಮ್ ಶಬ್ದಗಳ ಮೇಲೆ ಮತ್ವರ್ಥದಲ್ಲಿ ಯುಸ್ ಪ್ರತ್ಯಯ ಬರುತ್ತದೆ. ಅಹಮ್, ಶುಭಮ್—ಮಕಾರಾಂತ ವಿಭಕ್ತಿಪ್ರತಿರೂಪಕ ಅವ್ಯಯಗಳು. ಅಹಮ್ ಅಸ್ಯ ಅಸ್ತಿ | ಅಹಮ್ + ಯುಸ್. ಮಕಾರಕ್ಕೆ ಅನುಸ್ವಾರ. ಅಹಂಯುಃ = ಅಹಂಕಾರವುಳ್ಳವನು. ಶುಭಮ್ ಅಸ್ಯ ಅಸ್ತಿ | ಶುಭಮ್ + ಯು. ಹಿಂದಿನಂತೆ ಅನುಸ್ವಾರ. ಶುಭಂಯುಃ = ಮಂಗಳದಿಂದ ಕೂಡಿದವನು. ಈ ರೀತಿ ತದ್ಧಿತದಲ್ಲಿ ಮತ್ವರ್ಥೀಯವೆಂಬ ಹದಿಮೂರನೇ ಪ್ರಕರಣ ಮುಗಿದಿದೆ.

## ೩೬. ಅಥ ಪ್ರಾಗ್ದಿಶೀಯಾಃ

ತದ್ಧಿತದಲ್ಲಿ ವಿಭಕ್ತಿಸಂಜ್ಞೆ ಹೇಳುವ ಸೂತ್ರ.

**೧೨೦೦. ಪ್ರಾಗ್ದಿಶೋ ವಿಭಕ್ತಿಃ || ೫-೩-೧ ||**

ತ್ರಿಪದ ಸೂತ್ರ. ದಿಕ್ ಶಬ್ದದಿಂದ ದಿಕ್‌ಶಬ್ದಘಟಿತ ಸೂತ್ರ ವಿವಕ್ಷಿತವಾಗಿದೆ. 'ದಿಕ್‌ಶಬ್ದೇಭ್ಯಃ ಸಪ್ತಮೀಪಂಚಮೀ—' ಸೂತ್ರದವರೆಗೆ ಇಲ್ಲಿಂದ ಮುಂದೆ ವಿಹಿತ ವಾಗುವ ಪ್ರತ್ಯಯಗಳಿಗೆ ವಿಭಕ್ತಿಸಂಜ್ಞಾ ಬರುತ್ತದೆ. ಇದರಿಂದ ಆ ಪ್ರತ್ಯಯಗಳಲ್ಲಿ ತವರ್ಗ ಸಕಾರ ಮಕಾರಗಳಿದ್ದರೆ ಅವುಗಳಿಗೆ ಇತ್‌ಸಂಜ್ಞೆ ಬರುವುದಿಲ್ಲ. 'ತ್ಯದಾದೀ ನಾಮಃ' ಸೂತ್ರದಿಂದ ವಿಭಕ್ತಿ ಪರವಾದಾಗ ಅತ್ವವೂ ಪ್ರಯೋಜನ. ಇವು ಮುಂದೆ ಅಲ್ಲಲ್ಲಿ ವಿವೃತವಾಗುತ್ತವೆ. ಈಗ ಮುಂದಿನ ಪ್ರತ್ಯಯಗಳಿಗೆಲ್ಲಾ ಪ್ರಕೃತಿನಿಯಮ ವನ್ನು ಅಧಿಕಾರದಿಂದ ತಿಳಿಸುತ್ತಾನೆ.

ಅಧಿಕಾರಸೂತ್ರ.

**೧೨೦೧. ಕಿಂ ಸರ್ವನಾಮಬಹುಭ್ಯೋಽದ್ವ್ಯಾದಿಭ್ಯಃ ॥ ೫-೩-೨ ॥**

**ಕಿಮಃ, ಸರ್ವನಾಮ್ನಃ, ಬಹುಶಬ್ದಾಚ್ಚೇತಿ ಪ್ರಾಗ್ದಿಶೋಽಧಿಕ್ರಿಯತೇ ॥**

ದ್ವಿಪದ ಸೂತ್ರ. 'ಪ್ರಾಗ್ದಿಶಃ' ಅನುವೃತ್ತಿ. ಇದೂ ಅಧಿಕಾರವನ್ನು ಸೂಚಿಸುತ್ತದೆ. 'ದಿಕ್‌ಶಬ್ದೇಭ್ಯಃ—' ಸೂತ್ರದವರೆಗೆ, ಕಿಮಃ, ಸರ್ವನಾಮ್ನಃ, ಬಹುಶಬ್ದಾತ್, ಈ ಮೂರು ಪಂಚಮ್ಯಂತಶಬ್ದಗಳು ಅನುವೃತ್ತವಾಗುತ್ತವೆ. ಮುಂದಿನ ಪ್ರತ್ಯಯಗಳು ಕಿಂ ಶಬ್ದದಮೇಲೂ ದ್ವಿ ಮುಂತಾದವುಗಳನ್ನು ಬಿಟ್ಟು ಸರ್ವನಾಮ ಶಬ್ದಗಳ ಮೇಲೂ, ಬಹು ಶಬ್ದದ ಮೇಲೂ ಬರುತ್ತವೆ ಎಂದರ್ಥವಾಗುತ್ತದೆ. ಕಿಂ ಶಬ್ದ ಸರ್ವನಾಮಶಬ್ದಗಳಲ್ಲಿ ಸೇರಿದ್ದರೂ ದ್ವಿ ಮುಂತಾದವುಗಳಲ್ಲಿ ಸೇರಿದೆ. 'ಅದ್ವ್ಯಾದಿಭ್ಯಃ' ನಿಷೇಧಮಾಡಿರುವುದರಿಂದ ಅದಕ್ಕೆ ಪ್ರತ್ಯಯ ಬರುವುದಕ್ಕೋಸ್ಕರ ಪುನಃ ಹೇಳಿರುತ್ತಾನೆ.

ತಸಿಲ್ ಪ್ರತ್ಯಯ ಹೇಳುವ ಸೂತ್ರ.

**೧೨೦೨. ಪಞ್ಚಮ್ಯಾಸ್ತಸಿಲ್ ॥ ೫-೩-೭ ॥**

**ಪಞ್ಚಮ್ಯಂತೇಭ್ಯಃ ಕಿಮಾದಿಭ್ಯಸ್ತಸಿಲ್ ವಾ ಸ್ಯಾತ್ ॥**

ಪಂಚಮ್ಯಾಃ, ತಸಿಲ್ ॥ ದ್ವಿಪದ ಸೂತ್ರ. 'ಕಿಂ ಸರ್ವನಾಮಬಹುಭ್ಯಃ' ಎಂಬುದಕ್ಕೆ ಪಂಚಮ್ಯಾಃ ಎಂಬುದು ವಿಶೇಷಣವಾದುದರಿಂದ ತದಂತಲಾಭ. ಅರ್ಥ ನಿರ್ದೇಶವಿಲ್ಲವಾದುದರಿಂದ ಸ್ವಾರ್ಥದಲ್ಲಿ ಬರುತ್ತದೆಂದು ತಿಳಿಯಬೇಕು. **ಸೂತ್ರಾರ್ಥ**—ಪಂಚಮ್ಯಂತವಾದ ಕಿಮ್ ಶಬ್ದದ ಮೇಲೂ, ದ್ವ್ಯಾದಿವರ್ಜಿತ ಸರ್ವನಾಮಶಬ್ದಗಳ ಮೇಲೂ, ಬಹುಶಬ್ದದ ಮೇಲೂ ಸ್ವಾರ್ಥದಲ್ಲಿ ತಸಿಲ್ ಪ್ರತ್ಯಯ ವಿಕಲ್ಪವಾಗಿ ಬರುತ್ತದೆ. ಕಸ್ಮಾತ್ ವಿಗ್ರಹ. ಕಿಮ್ + ಙಸಿ + ತಸಿಲ್. ತಸಿಲಿನಲ್ಲಿ ಇಕಾರ, ಲಕಾರ ಇತ್. ತಸ್ ಉಳಿಯುತ್ತದೆ. 'ಸುಪೋ ಧಾತುಪ್ರಾತಿಪದಿಕಯೋಃ' ಸುಬ್ಲುಕ್. ಕಿಮ್ + ತಸ್ ಎಂದಿರುವಾಗ ಕಿಮಿಗೆ ಕು ಆದೇಶ ಹೇಳುತ್ತಾನೆ.

ಕಿಮಿಗೆ ಕು ಆದೇಶ ಹೇಳುವ ಸೂತ್ರ.

**೧೨೦೩. ಕು ತಿಹೋಃ ॥ ೭-೨-೧೦೪ ॥**

**ಕಿಮಃ ಕು ಸ್ಯಾತ್ತಾದೌ ಹಾದೌ ಚ ವಿಭಕ್ತೌ ಪರತಃ । ಕುತಃ, ಕಸ್ಮಾತ್ ॥**

ದ್ವಿಪದ ಸೂತ್ರ. ಕು ಲುಪ್ತಪ್ರಥಮಾವಿಭಕ್ತಿಯುಳ್ಳ ಶಬ್ದ. 'ಕಿಮಃ ಕಃ' ಸೂತ್ರದಿಂದ 'ಕಿಮಃ', 'ಅಷ್ಟನ ಆವಿಭಕ್ತೌ' ಸೂತ್ರದಿಂದ 'ವಿಭಕ್ತೌ' ಪದಗಳು

ಅನುವೃತ್ತವಾಗುತ್ತವೆ. ತಿಶ್ಚ ಹ್ ಚ ತಿಹೌ | ತಯೋಃ, ತಿಹೋಃ | ಸಪ್ತಮೀ ದ್ವಿವಚನ. ವಿಭಕ್ತಿಗೆ ವಿಶೇಷಣವಾಗಿ ಸಪ್ತಮ್ಯಂತವಾದುದರಿಂದ ತದಾದಿಲಾಭ. **ಸೂತ್ರಾರ್ಥ**—ಕಿಮ್ ಶಬ್ದಕ್ಕೆ ತಕಾರ, ಹಕಾರಾದಿಯಾದ ವಿಭಕ್ತಿ ಪರದಲ್ಲಿರುವಾಗ ಕು ಆದೇಶ ಬರುತ್ತದೆ. ಪ್ರಕೃತ ಕಿಮಿಗೆ ತಸ್ ಪರವಾಗಿದೆ. ಇದು ತಕಾರಾದಿಯಾಗಿ ವಿಭಕ್ತಿಸಂಜ್ಞೆ ಹೊಂದಿರುವುದರಿಂದ ಕು ಆದೇಶ ಬಂದರೆ ಕುತಃ ಎಂದಾಗುತ್ತದೆ. ಕುತಃ ಎಂಬುದು ಸ್ವರಾದಿಗಣದಲ್ಲಿ ಪಠಿತವಾದುದರಿಂದ ಅವ್ಯಯಸಂಜ್ಞೆ ಹೊಂದುತ್ತದೆ. ತಸಿಲ್ ವಿಕಲ್ಪವಾದುದರಿಂದ ಬಾರದಿದ್ದರೆ ಕಸ್ಮಾತ್ ಎಂದೇ ಇರುತ್ತದೆ.

ಇದಮಿಗೆ ಇಶಾದೇಶ ಹೇಳುವ ಸೂತ್ರ.

**೧೨೦೪. ಇದಮ ಇಶ್ ॥ ೫-೩-೩ ॥**

**ಪ್ರಾಗ್ದಿಶೀಯೇ ಪರೇ | ಇತಃ ॥**

ದ್ವಿಪದ ಸೂತ್ರ. 'ಅಸ್ಮಾತ್' ಎಂದು ವಿಗ್ರಹ ಮಾಡಿದಾಗ ಹಿಂದಿನ ಸೂತ್ರದಿಂದ ತಸಿಲ್. ಇದಮ್ + ತಸ್ ಎಂದಿರುವಾಗ ಈ ಸೂತ್ರದ ಕಾರ್ಯ. **ಸೂತ್ರಾರ್ಥ**—ಇದಮ್ ಶಬ್ದಕ್ಕೆ ಪ್ರಾಗ್ದಿಶೀಯ ಪ್ರತ್ಯಯಗಳು ಪರದಲ್ಲಿರುವಾಗ ಇಶ್ ಆದೇಶ ಬರುತ್ತದೆ. ನಿಮಿತ್ತ ಸೂತ್ರದಲ್ಲಿ ಹೇಳದಿದ್ದರೂ ಪ್ರಕರಣದಿಂದ ಪ್ರತ್ಯಯಗಳು ಪರವಾದಾಗ ಎಂದು ಲಬ್ಧವಾಗುತ್ತದೆ. ಇಶ್ ಶಿತ್ತಾದುದರಿಂದ 'ಅನೇಕಾಲ್ ಶಿತ್ ಸರ್ವಸ್ಯ' ಪರಿಭಾಷೆಯಿಂದ ಸರ್ವಾದೇಶ. ಇ + ತಸ್. ಇತಃ | 'ಏತಸ್ಮಾತ್' ವಿಗ್ರಹಮಾಡಿದಾಗ ಏತದ್ ಶಬ್ದಕ್ಕೆ ತಸಿಲ್ ಪ್ರತ್ಯಯ. ಏತದ್ + ತಸ್ ಎಂದಿರುವಾಗ ಪ್ರಕೃತಿಗೆ ಆದೇಶ ಹೇಳುತ್ತಾನೆ.

ಏತದಿಗೆ ಅನ್ ಆದೇಶ ಹೇಳುವ ಸೂತ್ರ.

**೧೨೦೫. ಅನ್ ॥ ೫-೩-೫ ॥**

**ಏತದಃ ಪ್ರಾಗ್ದಿಶೀಯೇ | ಅನೇಕಾಲ್ತ್ವಾತ್ಸರ್ವಾದೇಶಃ | ಅತಃ | ಅಮುತಃ | ಯತಃ | ತತಃ | ಬಹುತಃ | ದ್ವ್ಯಾದೇಸ್ತು ದ್ವಾಭ್ಯಾಮ್.॥**

ಏಕಪದ ಸೂತ್ರ. 'ಏತದಃ' ಅನುವೃತ್ತಿ. **ಸೂತ್ರಾರ್ಥ**—ಪ್ರಾಗ್ದಿಶೀಯ ಪ್ರತ್ಯಯಗಳಾದ ತಸಿಲಾದಿಗಳು ಪರದಲ್ಲಿರುವಾಗ ಏತದ್ ಶಬ್ದಕ್ಕೆ ಅನ್ ಆದೇಶ ಬರುತ್ತದೆ. ಅನೇಕಾಲಾದುದರಿಂದ ಸರ್ವಾದೇಶ. ಅನ್ + ತಸ್. 'ನಲೋಪಃ ಪ್ರಾತಿಪದಿಕಾಂತಸ್ಯ' ನಲೋಪ. ಅತಃ | ತಸಿಲ್ ಬಾರದಿದ್ದರೆ ಏತಸ್ಮಾತ್ | 'ಅಮುಷ್ಮಾತ್' ವಿಗ್ರಹಮಾಡಿದಾಗ ಅದಸ್ ಶಬ್ದಕ್ಕೆ ತಸಿಲ್. ಅದಸ್ + ತಸ್. 'ತ್ಯದಾದೀನಾಮಃ' ಸಕಾರಕ್ಕೆ ಅಕಾರಾದೇಶ. ಅದ + ಅ + ತಸ್. 'ಅತೋ

ಗುಣೇ' ಪರರೂಪ. ಅದ+ತಸ್. 'ಅದಸೋಽಸೇರ್ದಾದು ದೋ ಮಃ' ಸೂತ್ರ ದಿಂದ ದಕಾರಕ್ಕೆ ಮಕಾರಾದೇಶ. ದಕಾರದ ಅಕಾರಕ್ಕೆ ಉತ್ವ. ಅಮುತಃ। 'ಯಸ್ಮಾತ್' ಯಚ್ಛಬ್ದದ ಮೇಲೆ ತಸಿಲ್. ಯದ್+ತಸ್. ತ್ಯದಾದ್ಯತ್ವ, ಪರರೂಪ. ಯತಃ। 'ತಸ್ಮಾತ್' ತಚ್ಛಬ್ಧದಮೇಲೆ ತಸಿಲ್. ತತಃ। ಬಹೋಃ। ಬಹು ಶಬ್ದದಮೇಲೆ ತಸಿಲ್. ಬಹುತಃ। ದ್ವಿ ಮುಂತಾದ, ಸರ್ವನಾಮಗಳಿಗೆ ಬರುವುದಿಲ್ಲವೆಂದುದರಿಂದ ದ್ವಾಭ್ಯಾಮ್ ಎಂಬ ಪಂಚಮ್ಯಂತದ ಮೇಲೆ ತಸಿಲ್ ಬರುವುದಿಲ್ಲ.

ಪರಿ, ಅಭಿಗಳಿಗೆ ತಸಿಲ್ ಹೇಳುವ ಸೂತ್ರ.

**೧೨೦೬. ಪರ್ಯಭಿಭ್ಯಾಂ ಚ ॥ ೫-೩-೯ ॥**

**ಆಭ್ಯಾಂ ತಸಿಲ್ ಸ್ಯಾತ್ । ಪರಿತಃ । ಸರ್ವತ ಇತ್ಯರ್ಥಃ । ಅಭಿತಃ । ಉಭಯತ ಇತ್ಯರ್ಥಃ ॥**

ದ್ವಿಪದ ಸೂತ್ರ. ಪರಿ, ಅಭಿ ಶಬ್ದಗಳಮೇಲೂ ತಸಿಲ್ ಪ್ರತ್ಯಯ ಬರುತ್ತದೆ. ಇವು ಸರ್ವನಾಮದಲ್ಲಿ ಸೇರದಿರುವುದರಿಂದ ಪ್ರತ್ಯೇಕ ಹೇಳಿದೆ. ಪರಿತಃ, ಅಭಿತಃ। ಸರ್ವ, ಉಭಯಾರ್ಥಕಗಳಾದ ಪರಿ, ಅಭಿಗಳಿಗೇ ತಸಿಲ್ ಎಂದು ವಾರ್ತಿಕಕಾರರು ನಿಯಮಮಾಡಿರುವುದರಿಂದ ಕ್ರಮವಾಗಿ ಸರ್ವತಃ, ಉಭಯತಃ ಎಂದು ಅರ್ಥ ತೋರಿಸಿರುತ್ತಾನೆ. ಪರಿತಃ=ಸುತ್ತಲೂ, ಅಭಿತಃ=ಎರಡು ಕಡೆಯಿಂದಲೂ.

ಸಪ್ತಮ್ಯಂತಕ್ಕೆ ತ್ರಲ್ ಹೇಳುವ ಸೂತ್ರ.

**೧೨೦೭. ಸಪ್ತಮ್ಯಾಸ್ತ್ರಲ್ ॥ ೫-೩-೧೦ ॥**

**ಕುತ್ರ । ಯತ್ರ । ತತ್ರ । ಬಹುತ್ರ ।**

ಸಪ್ತಮ್ಯಾಃ, ತ್ರಲ್ ॥ ದ್ವಿಪದ ಸೂತ್ರ. ಸಪ್ತಮ್ಯಂತವಾದ ಕಿಂ ಶಬ್ದಕ್ಕೂ, ದ್ವ್ಯಾದಿವರ್ಜಿತ ಸರ್ವನಾಮಗಳಿಗೂ, ಬಹು ಶಬ್ದಕ್ಕೂ ಸ್ವಾರ್ಥದಲ್ಲಿ ತ್ರಲ್ ಪ್ರತ್ಯಯ ಬರುತ್ತದೆ. ಕಸ್ಮಿನ್ ಎಂಬರ್ಥದಲ್ಲಿ ಕಿಮ್+ತ್ರ ಎಂದಿರುವಾಗ ತಾದಿಪ್ರತ್ಯಯ ಪರವಾದುದರಿಂದ 'ಕುತಿಹೋಃ' ಸೂತ್ರದಿಂದ ಕಿಮಿಗೆ ಕು ಆದೇಶ. ಕುತ್ರ। ಯಸ್ಮಿನ್. ಯದ್+ತ್ರಲ್. ವಿಭಕ್ತಿ ಪರವಾದುದರಿಂದ ತ್ಯದಾದ್ಯತ್ವ, ಪರರೂಪ. ಯತ್ರ। ತಸ್ಮಿನ್. ತದ್+ತ್ರಲ್. ತ್ಯದಾದ್ಯತ್ವ ಪರರೂಪ. ತತ್ರ। ಬಹುಷು. ಬಹು+ತ್ರಲ್. ಬಹುತ್ರ (ಎಲ್ಲಾ ಕಡೆಯಲ್ಲಿಯೂ).

ಇದಮಿಗೆ ಹಪ್ರತ್ಯಯ ಹೇಳುವ ಸೂತ್ರ.

**೧೨೦೮. ಇದಮೋ ಹಃ ॥ ೫-೩-೧೧ ॥ ತ್ರಲೋಽಪವಾದಃ । ಇಹ ॥**

ದ್ವಿಪದ ಸೂತ್ರ. ಸಪ್ತಮ್ಯಂತವಾದ ಇದಮಿಗೆ ಹಪ್ರತ್ಯಯು ಬರುತ್ತದೆ. ಇದು ತ್ರಲಿಗೆ ಅಪವಾದ. ಅಸ್ಮಿನ್. ಇದಮ್ + ಹ. ಹ ಪ್ರಾಗ್ದಿಶೀಯಪ್ರತ್ಯಯವಾದುದರಿಂದ 'ಇದಮ ಇಶ್' ಸೂತ್ರದಿಂದ ಇದಮಿಗೆ ಇಶಾದೇಶ. ಇಹ= ಇಲ್ಲಿ.

ಕಿಮಿಗೆ ಅತ್ ಪ್ರತ್ಯಯ ಹೇಳುವ ಸೂತ್ರ.

### ೧೨೦೯. ಕಿಮೋಽತ್ ॥ ೫-೩-೧೨ ॥

**ವಾ ಗ್ರಹಣಮುಪಕೃಷ್ಯತೇ । ಸಪ್ತಮ್ಯಂತಾತ್ಕಿಮೋಽದ್ವಾ ಸ್ಯಾತ್ ಪಕ್ಷೇ ತ್ರಲ್ ॥**

ಕಿಮಃ, ಅತ್ ॥ ದ್ವಿಪದ ಸೂತ್ರ. 'ವಾ ಹ ಚ ಛಂದಸಿ' ಮುಂದಿನ ಸೂತ್ರದಿಂದ 'ವಾ' ಪದವು ಅಪಕೃಷ್ಟವಾಗುತ್ತದೆ. **ಸೂತ್ರಾರ್ಥ**—ಸಪ್ತಮ್ಯಂತವಾದ ಕಿಮ್ ಶಬ್ದಕ್ಕೆ ಸ್ವಾರ್ಥದಲ್ಲಿ ವಿಕಲ್ಪವಾಗಿ ಅತ್ ಪ್ರತ್ಯಯ ಬರುತ್ತದೆ. ಇದು ಬಾರದಿದ್ದರೆ ಸಾಮಾನ್ಯ ಸೂತ್ರದಿಂದ ತ್ರಲ್ ಪ್ರತ್ಯಯ. 'ಕಸ್ಮಿನ್' ಎಂದು ವಿಗ್ರಹಮಾಡಿದಾಗ ಕಿಮ್ + ಅ. ಅತಿನಲ್ಲಿ ತಕಾರ ಇತ್. ಈಗ ಕಿಮಿಗೆ ಆದೇಶ ಹೇಳುತ್ತಾನೆ.

ಕಿಮಿಗೆ ಕ್ವಾದೇಶ ಹೇಳುವ ಸೂತ್ರ.

### ೧೨೧೦. ಕ್ವಾತಿ ॥ ೭-೨-೧೦೫ ॥

**ಕಿಮಃ ಕ್ವಾದೇಶಃ ಸ್ಯಾದತಿ । ಕ್ವ । ಕುತ್ರ ॥**

ಕ್ವ, ಅತಿ ॥ ದ್ವಿಪದ ಸೂತ್ರ. 'ಕಿಮಃ ಕಃ' ಸೂತ್ರದಿಂದ 'ಕಿಮಃ' ಅನುವೃತ್ತಿ. ಕ್ವ ಲುಪ್ತಪ್ರಥಮಾಕಪದ. **ಸೂತ್ರಾರ್ಥ**—ಕಿಮ್ ಶಬ್ದಕ್ಕೆ ಅತ್ ಪ್ರತ್ಯಯ ಪರವಾದಾಗ ಕ್ವ ಆದೇಶ ಬರುತ್ತದೆ. ಕ್ವ+ಅ. 'ಅತೋ ಗುಣೇ' ಪರರೂಪ. ಕ್ವ. ಅತ್ ಬಾರದಿದ್ದರೆ ತ್ರಲ್. ತಾದಿ ಪ್ರತ್ಯಯ ಪರವಾದುದರಿಂದ 'ಕುತಿಹೋಃ' ಸೂತ್ರದಿಂದ ಕಿಮಿಗೆ ಕು ಆದೇಶ. ಕುತ್ರ=ಎಲ್ಲಿ?

ಇತರ ವಿಭಕ್ತ್ಯಂತಗಳ ಮೇಲೆ ತಸಿಲಾದಿಗಳನ್ನು ಹೇಳುವ ಸೂತ್ರ.

### ೧೨೧೧. ಇತರಾಭ್ಯೋಽಪಿ ದೃಶ್ಯನ್ತೇ ॥ ೫-೩-೧೪ ॥

**ಪಂಚಮೀಸಪ್ತಮೀತರವಿಭಕ್ತ್ಯಾನ್ತಾದಪಿ ತಸಿಲಾದಯೋ ದೃಶ್ಯನ್ತೇ। ದೃಶಿಗ್ರಹಣಾದ್ಭವದಾದಿಯೋಗ ಏವ। ಸ ಭವಾನ್। ತತೋ ಭವಾನ್। ತತ್ರ ಭವಾನ್। ತಂ ಭವನ್ತಮ್। ತತೋ ಭವನ್ತಮ್। ತತ್ರ ಭವನ್ತಮ್। ಏವಂ ದೀರ್ಘಾಯುಃ। ದೇವಾನಾಂ ಪ್ರಿಯಃ। ಆಯುಷ್ಮಾನ್ ॥**

ತ್ರಿಪದ ಸೂತ್ರ. ಪಂಚಮ್ಯಾಃ, ಸಪ್ತಮ್ಯಾಃ ಎಂದು ಎರಡು ವಿಭಕ್ತ್ಯಂತದ ಮೇಲೆ ತಸಿಲಾದಿಗಳನ್ನು ಇದುವರೆಗೆ ಹೇಳಿದೆ. ಇತರಾಭ್ಯಃ ಅಂದರೆ ಪಂಚಮೀ ಸಪ್ತಮೀತರವಿಭಕ್ತಿಭ್ಯಃ ಎಂದರ್ಥವಾಗುತ್ತದೆ. ಪ್ರತ್ಯಯವಾದುದರಿಂದ ತದಂತಗ್ರಹಣ. **ಸೂತ್ರಾರ್ಥ**—ಪಂಚಮೀಸಪ್ತಮೀತರವಿಭಕ್ತ್ಯಂತಗಳಮೇಲೂ ತಸಿಲಾದಿಪ್ರತ್ಯಯ ಗಳು ಬರುತ್ತವೆ. ಇಲ್ಲಿ ದೃಶ್ಯನ್ತೇ ಪದ ಹೇಳಿರುವುದರಿಂದ ವಿಶೇಷಾರ್ಥ ಪ್ರತಿಪಾದಿತ ವಾಗುತ್ತದೆ. ಭವತ್ ಮುಂತಾದ ಪದಗಳ ಸಂಬಂಧವಿರುವಾಗ ಮಾತ್ರ ಇತರ ವಿಭಕ್ತ್ಯಂತದಮೇಲೆ ತಸಿಲಾದಿಪ್ರತ್ಯಯ. ಕೇವಲವಾಗಿದ್ದರೆ ಬರುವುದಿಲ್ಲ. ಭವಚ್ಛಬ್ದ ಯೋಗವಿರುವಾಗ ಪ್ರಥಮಾಂತದ ಮೇಲೆ ಬಂದಿರುವ ತಸಿಲಾದಿಗಳನ್ನು ತೋರಿಸು ತ್ತಾನೆ. ತತೋ ಭವಾನ್ । ತತ್ರ ಭವಾನ್ । ದ್ವಿತೀಯಾಂತದಮೇಲೆ ಬಂದ ತಸಿಲಾ ದಿಗಳಿಗೆ ಉದಾಹರಣೆ. ತತೋ ಭವಂತಮ್ । ತತ್ರ ಭವನ್ತಮ್ । ಭವದಾದಿ ಶಬ್ದಗಳನ್ನು ತೋರಿಸುತ್ತಾನೆ. ದೀರ್ಘಾಯುಃ, ದೇವಾನಾಂ ಪ್ರಿಯಃ, ಆಯುಷ್ಮಾನ್ ಇವುಗಳ ಯೋಗವಿರುವಾಗಲೂ ಹಿಂದಿನಂತೆ ಉದಾಹರಣೆ ತಿಳಿಯಬೇಕು. ಸಃ ದೀರ್ಘಾಯುಃ, ತತೋ ದೀರ್ಘಾಯುಃ, ತತ್ರ ದೀರ್ಘಾಯುಃ ॥ ಇತ್ಯಾದಿ.

ಸಪ್ತಮ್ಯಂತಗಳ ಮೇಲೆ ದಾಪ್ರತ್ಯಯ ಹೇಳುವ ಸೂತ್ರ.

**೧೨೧೨. ಸರ್ವೈಕಾನ್ಯಕಿಂಯತ್ತದಃ ಕಾಲೇ ದಾ ॥ ೫-೩-೧೫ ॥**

**ಸಪ್ತಮ್ಯಂತೇಭ್ಯಃ ಕಾಲಾರ್ಥೇಭ್ಯಃ ಸ್ವಾರ್ಥೇ ದಾ ಸ್ಯಾತ್ ॥**

ತ್ರಿಪದ ಸೂತ್ರ. 'ಸಪ್ತಮ್ಯಾಃ' ಅನುವೃತ್ತಿ. ಅದು ಸರ್ವಾದಿಗಳಲ್ಲಿ ಅನ್ವಿತ ವಾಗುವುದರಿಂದ ಸಪ್ತಮ್ಯಂತವಾದ ಸರ್ವಾದಿಗಳು ಎಂದರ್ಥವಾಗುತ್ತದೆ. **ಸೂತ್ರಾರ್ಥ**—ಕಾಲಾರ್ಥವನ್ನು ಕೊಡುವ ಸಪ್ತಮ್ಯಂತವಾದ ಸರ್ವ, ಏಕ, ಅನ್ಯ, ಕಿಂ, ಯತ್, ತದ್ ಶಬ್ದಗಳಮೇಲೆ ಸ್ವಾರ್ಥದಲ್ಲಿ ದಾಪ್ರತ್ಯಯ ಬರುತ್ತದೆ. 'ಸರ್ವಸ್ಮಿನ್ ಕಾಲೇ' ಎಂಬರ್ಥದಲ್ಲಿ ಸರ್ವ ಶಬ್ದದಮೇಲೆ ದಾಪ್ರತ್ಯಯ ಬಂದಾಗ ಸರ್ವ ಶಬ್ದಕ್ಕೆ ಆದೇಶ ಹೇಳುತ್ತಾನೆ.

ಸರ್ವ ಶಬ್ದಕ್ಕೆ ಸಾದೇಶ ಹೇಳುವ ಸೂತ್ರ.

**೧೨೧೩. ಸರ್ವಸ್ಯ ಸೋಽನ್ಯತರಸ್ಯಾಂ ದಿ ॥ ೫-೩-೬ ॥**

**ದಾದೌ ಪ್ರಾಗ್ದಿಶೀಯೇ ಸರ್ವಸ್ಯ ಸೋ ವಾ ಸ್ಯಾತ್ । ಸರ್ವಸ್ಮಿನ್ ಕಾಲೇ ಸದಾ । ಸರ್ವದಾ । ಅನ್ಯದಾ । ಕದಾ । ಯದಾ । ತದಾ । ಕಾಲೇ ಕಿಮ್ ? ಸರ್ವತ್ರ ದೇಶೇ ॥**

ನಾಲ್ಕು ಪದಗಳುಳ್ಳ ಸೂತ್ರ. ಪ್ರಕರಣಲಬ್ಧವಾದ ಪ್ರಾಗ್ದಿಶೀಯ ಪ್ರತ್ಯಯಕ್ಕೆ

ಸಪ್ತಮ್ಯಂತ ' ದಿ ' ವರ್ಣವಿಶೇಷಣವಾದುದರಿಂದ ತದಾದಿಲಾಭ. **ಸೂತ್ರಾರ್ಥ**— ದಕಾರಾದಿ ಪ್ರಾಗ್ದಿಶೀಯಪ್ರತ್ಯಯು ಪರದಲ್ಲಿರುವಾಗ ಸರ್ವ ಶಬ್ದಕ್ಕೆ ಸಕಾರಾದೇಶ ಬರುತ್ತದೆ. ಪ್ರಕೃತ ದಾದಿಪ್ರತ್ಯಯು ಪರವಾದುದರಿಂದ ಸಾದೇಶ ಬಂದರೆ ಸದಾ ಎಂದಾಗುತ್ತದೆ. ಸಾದೇಶ ವಿಕಲ್ಪವಾದುದರಿಂದ ಬಾರದಿದ್ದರೆ ಸರ್ವದಾ । ಅನ್ಯಸ್ಮಿನ್ ಕಾಲೇ—ಅನ್ಯದಾ । ಕಸ್ಮಿನ್ ಕಾಲೇ—ಕಿಮ್ + ದಾ ಎಂದಿರುವಾಗ ದಾಪ್ರತ್ಯಯಕ್ಕೆ ವಿಭಕ್ತಿಸಂಜ್ಞೆಯಿರುವುದರಿಂದ ' ಕಿಮಃ ಕಃ ' ಸೂತ್ರದಿಂದ ಕಿಮಿಗೆ ಕಾದೇಶ. ಕದಾ (ಯಾವಾಗ). ಯಸ್ಮಿನ್ ಕಾಲೇ—ಯದ್ + ದಾ. ತ್ಯದಾದ್ಯತ್ವಪರರೂಪ. ಯದಾ । ತಸ್ಮಿನ್ ಕಾಲೇ—ತದ್ + ದಾ = ತದಾ. ಕಾಲಾರ್ಥಕವಾಗಬೇಕೆಂದುದೇಕೆ ? ಇತರ ಅರ್ಥತೋರುವುದಾದರೆ ಬರುವುದಿಲ್ಲ. ದೇಶರೂಪಾರ್ಥ ತೋರುವುದಾದರೆ 'ಸಪ್ತಮ್ಯಾ ಸ್ತ್ರಲ್ ' ಸೂತ್ರದಿಂದ ತ್ರಲ್ ಪ್ರತ್ಯಯ. ಸರ್ವತ್ರ ದೇಶೇ । ಎಲ್ಲಾ ದೇಶದಲ್ಲಿಯೂ. ಹೀಗೇ ಕುತ್ರಾದಿ.

ಇದಮ್ ಶಬ್ದಕ್ಕೆ ರ್ಹಿಲ್ ಪ್ರತ್ಯಯ ಹೇಳುವ ಸೂತ್ರ.

**೧೨೧೪. ಇದಮೋ ರ್ಹಿಲ್ ॥ ೫-೩-೧೬ ॥**

**ಸಪ್ತಮ್ಯನ್ತಾತ್ ಕಾಲ ಇತ್ಯೇವ ॥**

ಇದಮಃ, ರ್ಹಿಲ್ ॥ ದ್ವಿಪದ ಸೂತ್ರ. ' ಸಪ್ತಮ್ಯಾಃ ', ' ಕಾಲೇ ' ಅನುವೃತ್ತಿ. ಕಾಲಾರ್ಥವನ್ನು ಕೊಡುವ ಸಪ್ತಮ್ಯಂತವಾದ ಇದಮ್ ಶಬ್ದಕ್ಕೆ ಸ್ವಾರ್ಥದಲ್ಲಿ ರ್ಹಿಲ್ ಪ್ರತ್ಯಯ ಬರುತ್ತದೆ. ಅಸ್ಮಿನ್ ಕಾಲೇ ಎಂಬರ್ಥದಲ್ಲಿ ಇದಮಿಗೆ ರ್ಹಿಲ್ ಬಂದರೆ ಇದಮ್ + ರ್ಹಿ ಎಂದಿರುವಾಗ ಇದಮಿಗೆ ಆದೇಶ ಹೇಳುತ್ತಾನೆ.

ಇದಮಿಗೆ ಏತ, ಇತ್ ಆದೇಶ ಹೇಳುವ ಸೂತ್ರ.

**೧೨೧೫. ಏತೇತೌ ರಥೋಃ ॥ ೫-೩-೪ ॥**

**ಇದಮ್ ಶಬ್ದಸ್ಯ ಏತ ಇತ್ ಇತ್ಯಾದೇಶೌ ಸ್ತೋ ರೇಫಾದೌ ಥಕಾರಾದೌ ಚ ಪ್ರಾಗ್ದಿಶೀಯೇ ಪರೇ । ಅಸ್ಮಿನ್ ಕಾಲೇ ಏತರ್ಹಿ । ಕಾಲೇ ಕಿಮ್ ? ಇಹ ದೇಶೇ ॥**

ದ್ವಿಪದ ಸೂತ್ರ. ಪ್ರಕರಣದಿಂದ ಲಬ್ಧವಾದ ಪ್ರಾಗ್ದಿಶೀಯ ಪ್ರತ್ಯಯಕ್ಕೆ ಸಪ್ತಮ್ಯಂತವಾದ ರಥೋಃ ವಿಶೇಷಣ. ಏತಶ್ಚ, ಇತ್ ಚ ಏತೇತೌ । **ಸೂತ್ರಾರ್ಥ**— ರೇಫಾದಿಯಾದ, ಥಕಾರಾದಿಯಾದ ಪ್ರಾಗ್ದಿಶೀಯ ಪ್ರತ್ಯಯ ಪರದಲ್ಲಿರುವಾಗ ಇದಮ್ ಶಬ್ದಕ್ಕೆ ಏತ ಇತ್ ಆದೇಶಗಳು ಬರುತ್ತವೆ. ' ಇದಮ ಇಶ್ ' ಸೂತ್ರದಿಂದ ' ಇದಮಃ ' ಅನುವೃತ್ತಿ. ಯಥಾಸಂಖ್ಯ ಪರಿಭಾಷೆಯಿಂದ ರೇಫಾದಿ

ಪ್ರತ್ಯಯ ಪರವಾದಾಗ ಏತಾದೇಶ. ಥಕಾರಾದಿಪ್ರತ್ಯಯ ಪರವಾದಾಗ ಇತಾದೇಶ. ಇದಮ್+ರ್ಹಿಲ್ ಎಂದಿರುವಾಗ ರೇಫಾದಿಪ್ರತ್ಯಯ ಪರವಾದುದರಿಂದ ಏತಾದೇಶ. ಏತ+ರ್ಹಿ=ಏತರ್ಹಿ. ಕಾಲಾರ್ಥ ತೋರುವಾಗ ಮಾತ್ರವೆಂದು ಏಕೆ ಹೇಳಬೇಕು? ದೇಶಾದ್ಯರ್ಥ ತೋರುವಾಗ ರ್ಹಿಲ್ ಬರುವುದಿಲ್ಲ. 'ಇದಮೋಹಃ' ಸೂತ್ರದಿಂದ ತ್ರಲಿಗೆ ಅಪವಾದವಾಗಿ ಬಂದ ಹಪ್ರತ್ಯಯ ಬಂದು ಪ್ರಕೃತಿಗೆ ಇಶ್ ಆದೇಶದಿಂದ ಇಹ ಎಂದಾಗುತ್ತದೆ. ಇಲ್ಲಿ, ಈ ದೇಶದಲ್ಲಿ ಎಂದು ತಾತ್ಪರ್ಯ.

ಅನದ್ಯತನಕಾಲದಲ್ಲಿ ರ್ಹಿಲ್ ಹೇಳುವ ಸೂತ್ರ.

**೧೨೧೬. ಅನದ್ಯತನೇ ರ್ಹಿಲನ್ಯತರಸ್ಯಾಮ್ ॥ ೫-೩-೨೧ ॥**

**ಕರ್ಹಿ, ಕದಾ । ಯರ್ಹಿ, ಯದಾ । ತರ್ಹಿ, ತದಾ ॥**

ತ್ರಿಪದ ಸೂತ್ರ. 'ಕಿಂ ಸರ್ವನಾಮಬಹುಭ್ಯೋಽದ್ವ್ಯಾದಿಭ್ಯಃ' ಅಧಿಕಾರ. 'ಸಪ್ತಮ್ಯಾಃ', 'ಕಾಲೇ' ಅನುವೃತ್ತಿ. **ಸೂತ್ರಾರ್ಥ**—ಅನದ್ಯತನಕಾಲವಾಚಕಗಳಾದ ಸಪ್ತಮ್ಯಂತಗಳಾದ, ಕಿಮ್ ಶಬ್ದದ ಮೇಲೂ, ದ್ವ್ಯಾದಿವರ್ಜಿತ ಸರ್ವನಾಮಗಳ ಮೇಲೂ ಬಹು ಶಬ್ದದ ಮೇಲೂ ವಿಕಲ್ಪವಾಗಿ ರ್ಹಿಲ್ ಪ್ರತ್ಯಯ ಬರುತ್ತದೆ. ಕಸ್ಮಿನ್ ಕಾಲೇ ಎಂದರ್ಥವಿವಕ್ಷಾಮಾಡಿದಾಗ ಕಿಮ್ ಶಬ್ದಕ್ಕೆ ರ್ಹಿಲ್. ಅದಕ್ಕೆ ವಿಭಕ್ತಿಸಂಜ್ಞೆಯಿರುವುದರಿಂದ 'ಕಿಮಃ ಕಃ' ಸೂತ್ರದಿಂದ ಕಿಮಿಗೆ ಕಾದೇಶ. ಕರ್ಹಿ। ಕಳೆದ ರಾತ್ರಿಯ ಕೊನೆಯ ಅರ್ಧಭಾಗದಿಂದ ಮುಂದೆ ಬರುವ ರಾತ್ರಿಯ ಮೊದಲಿನ ಅರ್ಧಭಾಗದ ಕಾಲವು ಅದ್ಯತನವೆಂದೂ ಅದಕ್ಕಿಂತ ಭಿನ್ನವಾದ ಕಾಲ ಅನದ್ಯತನವೆಂದೂ ಭ್ವಾದಿಯಲ್ಲಿ ವಿವೃತವಾಗಿದೆ. ರ್ಹಿಲ್ ಬಾರದಿದ್ದರೆ 'ಸರ್ವೈಕಾನ್ಯ—' ಸೂತ್ರದಿಂದ ದಾಪ್ರತ್ಯಯ. ಕದಾ। ಯಸ್ಮಿನ್ ಕಾಲೇ—ಯದ್+ರ್ಹಿಲ್. ತ್ಯದಾದ್ಯತ್ವ, ಪರರೂಪ. ಯರ್ಹಿ। ತಸ್ಮಿನ್ ಕಾಲೇ—ತದ್+ರ್ಹಿಲ್. ತರ್ಹಿ। ಏತಸ್ಮಿನ್ ಕಾಲೇ—ಏತದ್+ರ್ಹಿಲ್ ಎಂದಿರುವಾಗ ಪ್ರಕೃತಿಗೆ ಆದೇಶ ಹೇಳುತ್ತಾನೆ.

ಏತಚ್ಛಬ್ದಕ್ಕೆ ಆದೇಶ ಹೇಳುವ ಸೂತ್ರ.

**೧೨೧೭. ಏತದಃ ॥ ೫-೩-೫ ॥**

**ಏತ ಇತ್ ಏತೌ ಸ್ತೋ ರೇಫಾದೌ ಥಾದೌ ಚ ಪ್ರಾಗ್ದಿಶೀಯೇ । ಏತಸ್ಮಿನ್ ಕಾಲೇ ಏತರ್ಹಿ ॥**

ಏಕಪದ ಸೂತ್ರ. 'ಏತೇತೌ ರಥೋಃ' ಸೂತ್ರಾನುವೃತ್ತಿ. **ಸೂತ್ರಾರ್ಥ**—ರೇಫಾದಿ, ಥಾದಿ ಪ್ರಾಗ್ದಿಶೀಯ ಪ್ರತ್ಯಯ ಪರದಲ್ಲಿರುವಾಗ ಏತದ್ ಶಬ್ದಕ್ಕೆ ಏತ, ಇತ್ ಆದೇಶಗಳು ಬರುತ್ತವೆ. ಪ್ರಕೃತ ರೇಫಾದಿಪ್ರತ್ಯಯ ಪರದಲ್ಲಿರುವುದರಿಂದ ಏತಾದೇಶ. ಏತರ್ಹಿ=ಈ ಕಾಲದಲ್ಲಿ.

ಥಾಲ್ ಪ್ರತ್ಯಯು ಹೇಳುವ ಸೂತ್ರ.

**೧೨೧೮. ಪ್ರಕಾರವಚನೇ ಥಾಲ್ ॥ ೫-೩-೨೩ ॥**

**ಪ್ರಕಾರವೃತ್ತಿಭ್ಯಃ ಕಿಮಾದಿಭ್ಯಸ್ಥಾಲ್ ಸ್ಯಾತ್ ಸ್ವಾರ್ಥೇ । ತೇನ ಪ್ರಕಾರೇಣ ತಥಾ । ಯಥಾ ॥**

ದ್ವಿಪದ ಸೂತ್ರ. ಪಂಚಮ್ಯರ್ಥದಲ್ಲಿ ಸಪ್ತಮೀ ಬಂದಿದೆ. ಇಲ್ಲಿ ಪ್ರಕಾರ ಎಂದರೆ ಸಾದೃಶ್ಯವಲ್ಲ. ಸಾಮಾನ್ಯಕ್ಕೆ ಭೇದಕವಾದ ವಿಶೇಷವೇ ಪ್ರಕಾರ (ರೀತಿ ವಿಶೇಷ). ನಾನಾ ಪ್ರಕಾರ ಊಟ ಮಾಡುತ್ತಾನೆ ಎಂದರೆ ಎಲ್ಲರ ಊಟ ಮಾಡುವ ರೀತಿಯಿಂದ ವಿಶೇಷ ತೋರುತ್ತದೆ. **ಸೂತ್ರಾರ್ಥ**—ಪ್ರಕಾರವಾಚಕಗಳಾದ ಕಿಮಾದಿಗಳಿಗೆ ಸ್ವಾರ್ಥದಲ್ಲಿ ಥಾಲ್ ಪ್ರತ್ಯಯ ಬರುತ್ತದೆ. ತೇನ ಪ್ರಕಾರೇಣ ವಿಶಿಷ್ಟಃ ಎಂದು ಅಧ್ಯಾಹಾರಮಾಡಿಕೊಳ್ಳಬೇಕು. ತದ್+ಥಾ. ತ್ಯದಾದ್ಯತ್ವ ಪರರೂಪ. ತಥಾ । ಯೇನ ಪ್ರಕಾರೇಣ ವಿಶಿಷ್ಟಃ—ಯದ್+ಥಾ. ಯಥಾ । ಸಾಮಾನ್ಯ ರೂಪದಿಂದ ನೋಡಿದ ದೇವದತ್ತ ಈಗ ಯಾವ ಅವಸ್ಥೆಯಲ್ಲಿರುವನೆಂದು ತಿಳಿಯಲು ಒಬ್ಬನು 'ದೇವದತ್ತನು ಈಗ ಹೇಗಿರುವನು' ಎಂದು ಕೇಳಿದಾಗ ಆಗ ಉತ್ತರವಾಗಿ 'ತಥಾ ದೇವದತ್ತಃ' 'ಹಾಗೆಯೇ ದೇವದತ್ತನಿರುತ್ತಾನೆ' ಎನ್ನುತ್ತಾನೆ. ನಿನ್ನಿಂದ ಹೇಗೆ ಹಿಂದೆ ತಿಳಿಯಲ್ಪಟ್ಟಿರುವನೋ ಆ ಅವಸ್ಥಾವಿಶೇಷದಿಂದಲೇ ಇರುವನೆಂದರ್ಥ. ಇದೇ ಪ್ರಕಾರಾರ್ಥ.

ಇದಮಿಗೆ ಪ್ರಕಾರಾರ್ಥದಲ್ಲಿ ಥಮು ಪ್ರತ್ಯಯ ಹೇಳುವ ಸೂತ್ರ.

**೧೨೧೯. ಇದಮಸ್ಥಮುಃ ॥ ೫-೩-೨೪ ॥**

**ಥಾಲೋಽಪವಾದಃ ॥ (ಏತದೋಽಪಿ ವಾಚ್ಯಃ) ಅನೇನ ಏತೇನ ವಾ ಪ್ರಕಾರೇಣ ಇತ್ಥಮ್ ॥**

ದ್ವಿಪದ ಸೂತ್ರ. ಪ್ರಕಾರವಾಚಕ ಇದಮ್ ಶಬ್ದಕ್ಕೆ ಸ್ವಾರ್ಥದಲ್ಲಿ ಥಮು ಪ್ರತ್ಯಯ ಬರುತ್ತದೆ. ಉಕಾರ ಉಚ್ಚಾರಣಾರ್ಥ. ವಾರ್ತಿಕಕಾರರು ಏತದ್ ಶಬ್ದಕ್ಕೂ ಈ ಪ್ರತ್ಯಯ ಬರುತ್ತದೆಂದು ಹೇಳುತ್ತಾರೆ. ಅನೇನ ಪ್ರಕಾರೇಣ । ಏತೇನ ಪ್ರಕಾರೇಣ । ಇದಮ್+ಥಮ್. 'ಏತೇತೌ ರಥೋಃ' ಸೂತ್ರದಿಂದ ಥಾದಿ ಪ್ರತ್ಯಯಪರವಾದುದರಿಂದ ಇದಮಿಗೆ ಇತಾದೇಶ. ಇತ್+ಥಮ್. ಇತ್ಥಮ್ (ಈ ರೀತಿಯಾಗಿ). ಏತ+ಥಮ್. 'ಏತದಃ' ಸೂತ್ರದಿಂದ ಏತದಿಗೆ ಇತಾದೇಶ. ಇತ್ಥಮ್. ಎರಡು ಶಬ್ದಗಳಿಗೂ ಒಂದೇ ರೂಪ.

ಕಿಮ್ ಶಬ್ದಕ್ಕೆ ಥಮು ಪ್ರತ್ಯಯ ಹೇಳುವ ಸೂತ್ರ.

**೧೨೨೦. ಕಿಮಶ್ಚ ॥ ೫-೩-೨೫ ॥**

**ಕೇನ ಪ್ರಕಾರೇಣ ಕಥಮ್ ॥**

**ಇತಿ ಪ್ರಾಗ್ದಿಶೀಯಾಃ ॥ ೧೪ ॥**

ದ್ವಿಪದ ಸೂತ್ರ. ಪ್ರಕಾರವಾಚಿ ಕಿಮ್ ಶಬ್ದದ ಮೇಲೆ ಸ್ವಾರ್ಥದಲ್ಲಿ ಥಮು ಪ್ರತ್ಯಯ ಬರುತ್ತದೆ. ಕೇನ ಪ್ರಕಾರೇಣ (ವಿಶಿಷ್ಟಃ)। ಕಿಮ್+ಥಮ್. ಪ್ರತ್ಯಯಕ್ಕೆ ವಿಭಕ್ತಿಸಂಜ್ಞೆಯಿರುವುದರಿಂದ 'ಕಿಮಃ ಕಃ' ಸೂತ್ರದಿಂದ ಕಾದೇಶ. ಕಥಮ್ (ಹೇಗೆ?). ಈ ರೀತಿ ತದ್ಧಿತದಲ್ಲಿ ಪ್ರಾಗ್ದಿಶೀಯವೆಂಬ ಹದಿನಾಲ್ಕನೇ ಪ್ರಕರಣ ಮುಗಿದಿದೆ.

## ೩೭. ಅಥ ಪ್ರಾಗಿವೀಯಾಃ

ಅತಿಶಯದಲ್ಲಿ ತಮಪ್, ಇಷ್ಠನ್ ಪ್ರತ್ಯಯ ಹೇಳುವ ಸೂತ್ರ.

**೧೨೨೧. ಅತಿಶಾಯನೇ ತಮಬಿಷ್ಠನೌ ॥ ೫-೩-೫೫ ॥**

**ಅತಿಶಯವಿಶಿಷ್ಟಾರ್ಥವೃತ್ತೇಃ ಸ್ವಾರ್ಥ ಏತೌ ಸ್ತಃ। ಅಯಮೇಷಾಮತಿಶಯೇನಾಢ್ಯಃ ಆಢ್ಯತಮಃ। ಲಘುತಮಃ, ಲಘಿಷ್ಠಃ ॥**

ದ್ವಿಪದ ಸೂತ್ರ. ಅತಿಶೇತೇ ಇತಿ ಅತಿಶಯನಮ್ । ಅತಿಶಯನಮೇವ ಅತಿಶಾಯನಮ್ । ಬಹುಲಗ್ರಹಣದಿಂದ ಶೀಙ್ ಧಾತುವಿಗೆ ಕರ್ತರಿಯಲ್ಲಿ ಲ್ಯುಟ್. ಬಹುಲಗ್ರಹಣದಿಂದಲೆ ದೀರ್ಘ. ಪ್ರಕರ್ಷವೆಂದರ್ಥ. ಇತರವನ್ನು ಕಡಿಮೆಮಾಡುವುದು. ಅತಿಶಾಯನೇ ಪ್ರಕೃತ್ಯರ್ಥಕ್ಕೆ ವಿಶೇಷಣ. **ಸೂತ್ರಾರ್ಥ**—ಅತಿಶಯವಿಶಿಷ್ಟಾರ್ಥ ಪ್ರತಿಪಾದಕ ಪ್ರಾತಿಪದಿಕಪ್ರಕೃತಿಕ ಪ್ರಥಮಾಂತದ ಮೇಲೆ ಸ್ವಾರ್ಥದಲ್ಲಿ ತಮಪ್, ಇಷ್ಠನ್ ಪ್ರತ್ಯಯಗಳು ಬರುತ್ತವೆ. ಎಲ್ಲರಲ್ಲಿಯೂ ಸಮಾನಪ್ರಕರ್ಷವಿರುವುದಿಲ್ಲ. ಎಲ್ಲಿ ಸರ್ವಾಪೇಕ್ಷೆಯಿಂದ ಅತಿಶಯವಿದೆಯೋ ಆ ಅತಿಶಯವನ್ನು ತಮಪ್ ತಿಳಿಸುತ್ತದೆ. ಅಯಮೇಷಾಮತಿಶಯೇನ ಆಢ್ಯಃ ಆಢ್ಯತಮಃ ॥ ಇವನು ಇವರಲ್ಲಿ ಅತಿಶಯ ಐಶ್ವರ್ಯವಂತನು. ಮುಂದೆ ತರಪ್ ಹೇಳುವಾಗ ದ್ವಯೋಃ ಎನ್ನುವುದರಿಂದ ಇಲ್ಲಿ ಅನೇಕರ ಮಧ್ಯದಲ್ಲಿ ಅತಿಶಯ ಹೇಳುವಾಗಲೇ ತಮಪ್, ಇಷ್ಠನ್ ಬರುತ್ತವೆಂದು ತಿಳಿಯಬೇಕು. ಆದಕ್ಕೆ ಹೀಗೆ ಅರ್ಥ ಹೇಳಬೇಕು. ಅಯಮಾಢ್ಯಃ, ಅಯಮಾಢ್ಯಃ, ಅಯಮಾಢ್ಯಃ ಅಯಮೇಷಾಮತಿಶಯೇನ ಆಢ್ಯಃ, ಆಢ್ಯತಮಃ। ದ್ರವ್ಯಗಳಿಗೆ

ಗುಣಮೂಲಕವಾಗಿಯೇ ಪ್ರಕರ್ಷ ಹೇಳಬೇಕು. ಇಲ್ಲಿ ಉತ್ಕರ್ಷವಿಶಿಷ್ಟ ಆಥ್ಯತ್ವ ಪ್ರಕೃತ್ಯರ್ಥ. ತಮಪ್ ದ್ಯೋತಕ. ಆ ಅರ್ಥವನ್ನು ಪ್ರಕಾಶಪಡಿಸುತ್ತದೆ. ಅಯಂ ಲಘುಃ, ಅಯಂ ಲಘುಃ, ಅಯಂ ಲಘುಃ, ಅಯಮೇಷಾಂ ಅತಿಶಯೇನ ಲಘುಃ, ಲಘುತಮಃ। ಅತ್ಯಂತ ಲಾಘವವುಳ್ಳವನು. ಇಷ್ಠನ್ ಬಂದರೆ ಲಘು+ಇಷ್ಠ ಎಂದಿರುವಾಗ 'ಟೇಃ' ಸೂತ್ರದಿಂದ ಟಿ(ಉ)ಲೋಪ. ಲಘಿಷ್ಠಃ।

ತಿಙಂತದಮೇಲೆ ತಮಪ್ ಹೇಳುವ ಸೂತ್ರ.

**೧೨೨೨. ತಿಙಶ್ಚ ॥ ೫-೩-೫೬ ॥**

**ತಿಙನ್ತಾದತಿಶಯೇ ದ್ಯೋತ್ಯೇ ತಮಪ್ ಸ್ಯಾತ್ ॥**

ತಿಙಃ, ಚ ॥ ದ್ವಿಪದ ಸೂತ್ರ. ತಿಙ್ ಪ್ರತ್ಯಯವಾದುದರಿಂದ ತದಂತಗ್ರಹಣ. 'ಅತಿಶಾಯನೇ—' ಅನುವೃತ್ತಿ. **ಸೂತ್ರಾರ್ಥ**—ತಿಙನ್ತದಮೇಲೆ ಅತಿಶಯಾರ್ಥ ತೋರುವಾಗ ತಮಪ್ ಪ್ರತ್ಯಯ ಬರುತ್ತದೆ. ಇಷ್ಠನಿಗೆ ಇಲ್ಲಿ ಅನುವೃತ್ತಿಯಿಲ್ಲ. ಗುಣವಾಚಕ ಶಬ್ದದ ಮೇಲೆ ಮಾತ್ರ ಇಷ್ಠನ್ ಪ್ರತ್ಯಯ. ಅತಿಶಯೇನ ಪಚತಿ ಎಂದರ್ಥವಿವಕ್ಷಾ ಮಾಡಿದಾಗ ಅತಿಶಯಾರ್ಥ ತೋರುವುದರಿಂದ ಪಚತಿ ತಿಙನ್ತದ ಮೇಲೆ ತಮಪ್. ಪಚತಿತಮ ಎಂದಿರುವಾಗ ಅದರ ಮೇಲೆ ಆಮ್ ಹೇಳುತ್ತಾನೆ. ಮೊದಲು ಅದಕ್ಕೆ ಉಪಯುಕ್ತವಾದ ಘಸಂಜ್ಞೆ ಹೇಳುತ್ತಾನೆ.

ಘಸಂಜ್ಞೆ ಹೇಳುವ ಸೂತ್ರ.

**೧೨೨೩. ತರಪ್ತಮಪೌ ಘಃ ॥ ೧-೧-೨೨ ॥**

**ಏತೌ ಘಸಂಜ್ಞೌ ಸ್ತಃ ॥**

ದ್ವಿಪದ ಸೂತ್ರ. ತರಪ್ ಚ ತಮಪ್ ಚ ತರಪ್ತಮಪೌ। **ಸೂತ್ರಾರ್ಥ**—ತರಪ್, ತಮಪ್ ಪ್ರತ್ಯಯಗಳಿಗೆ ಘ ಎಂಬ ಸಂಜ್ಞೆ ಬರುತ್ತದೆ. ಮುಂದೆ ಘ ಎಂದು ಹೇಳಿದರೆ ಈ ಎರಡು ಪ್ರತ್ಯಯಗಳನ್ನು ತೆಗೆದುಕೊಳ್ಳಬೇಕು.

ಘದ ಮೇಲೆ ಆಮ್ ವಿಧಿಸುವ ಸೂತ್ರ.

**೧೨೨೪. ಕಿಮೇತ್ತಿಙವ್ಯಯಘಾದಾಮ್ವದ್ರವ್ಯಪ್ರಕರ್ಷೇ ॥ ೫-೪-೧೧ ॥**

**ಕಿಮ ಏದನ್ತಾತ್ತಿಙೋಽವ್ಯಯಾಚ್ಚ ಯೋ ಘಸ್ತದನ್ತಾದಾಮುಃ ಸ್ಯಾನ್ನ ತು ದ್ರವ್ಯಪ್ರಕರ್ಷೇ। ಕಿನ್ತಮಾಮ್। ಪ್ರಾಹ್ಣೇತಮಾಮ್। ಪಚತಿತಮಾಮ್। ಉಚ್ಚೈಸ್ತಮಾಮ್। ದ್ರವ್ಯಪ್ರಕರ್ಷೇ ತು ಉಚ್ಚೈಸ್ತಮಸ್ತರುಃ ॥**

ಕಿಮೇತ್ತಿಙವ್ಯಯಘಾತ್, ಆಮು, ಅದ್ರವ್ಯಪ್ರಕರ್ಷೇ ‖ ತ್ರಿಪದ ಸೂತ್ರ. ಕಿಮ್ ಚ, ಏತ್ ಚ, ತಿಙ್ ಚ, ಅವ್ಯಯಂ ಚ, ಕಿಮೇತ್ತಿಙವ್ಯಯಾನಿ । ಕಿಮೇತ್ತಿಙವ್ಯಯಪ್ರಕೃತಿಕಃ ಯಃ ಘಃ ಕಿಮೇತ್ತಿಙವ್ಯಯಘಃ । ತಸ್ಮಾತ್. ಏತ್ ಪ್ರಾತಿಪದಿಕಕ್ಕೆ ವಿಶೇಷಣವಾದುದರಿಂದ ತದಂತಲಾಭ. **ಸೂತ್ರಾರ್ಥ**—ಕಿಮ್ ಶಬ್ದದ ಮೇಲೆ, ಏದಂತ ಪ್ರಾತಿಪದಿಕದ ಮೇಲೆ, ತಿಙನ್ತದ ಮೇಲೆ, ಅವ್ಯಯದ ಮೇಲೆ ಯಾವ ಘ (ತರಪ್, ತಮಪ್) ವಿಹಿತವಾಗಿದೆಯೋ ಅದೇ ಅಂತವಾದ ಶಬ್ದಸ್ವರೂಪದಮೇಲೆ ಆಮು ಪ್ರತ್ಯಯ ಬರುತ್ತದೆ; ದ್ರವ್ಯಪ್ರಕರ್ಷ ತೋರಬಾರದು. ಅಯಮೇಷಾಮತಿಶಯೇನ ಕಿಮ್ ಎಂದು ವಿಗ್ರಹ ಮಾಡಿದಾಗ ಕಿಮ್ ಶಬ್ದದಮೇಲೆ ತಮಪ್. ಕಿಂತಮ. ಕಿಂ ಶಬ್ದದಮೇಲೆ ಘ ಬಂದಿರುವುದರಿಂದ ಇದರ ಮೇಲೆ ಆಮು ಪ್ರತ್ಯಯ. ಉಕಾರ ಉಚ್ಚಾರಣಾರ್ಥ. ಕಿಂತಮ + ಆಮ್. 'ಯಸ್ಯೇತಿ ಚ' ಅಲೋಪ. ಕಿನ್ತಮಾಮ್. ಆಮನ್ತ ಸ್ವರಾದಿಪಠಿತವಾದುದರಿಂದ ಅವ್ಯಯಸಂಜ್ಞೆ ಹೊಂದುವುದರಿಂದ ಪರದಲ್ಲಿ ಬಂದ ಸುಪಿಗೆ ಲುಕ್. ಏದಂತಕ್ಕೆ—ಪ್ರಾಹ್ಣೇತಮಾಮ್. 'ಘಕಾಲತನೇಷು ಕಾಲನಾಮ್ನಃ' ಸೂತ್ರದಿಂದ ಘಪರವಾದುದರಿಂದ ಸಪ್ತಮಿಗೆ ಅಲುಕ್. ಅತಿಶಯಿತವಾದ ಪೂರ್ವಾಹ್ಣವೆಂದರ್ಥ. ಕಾಲವಾಚಕವಾದುದರಿಂದ ವಸ್ತುಪ್ರಕರ್ಷವಲ್ಲ. ತಿಙನ್ತಕ್ಕೆ—ಪಚತಿತಮಾಮ್. ಅತಿಶಯಿತವಾದ ಪಾಕಕ್ರಿಯೆ. ಕ್ರಿಯಾಪ್ರಾಧಾನ್ಯವಿರುವುದರಿಂದ ಇಲ್ಲಿಯೂ ದ್ರವ್ಯಪ್ರಕರ್ಷವಿಲ್ಲ. ಅವ್ಯಯಕ್ಕೆ—ಉಚ್ಚೈಸ್ತಮಾಮ್. ಅತ್ಯಧಿಕವಾಗಿ (ಗಟ್ಟಿಯಾಗಿ) ಆಶಂಸತಿ ಎಂದು ಅಧ್ಯಾಹಾರ ಮಾಡಿಕೊಂಡ ಆಶಂಸನ ಕ್ರಿಯೆಗೆ ಪ್ರಾಧಾನ್ಯವಿರುವುದರಿಂದ ಇಲ್ಲಿಯೂ ದ್ರವ್ಯಪ್ರಕರ್ಷವಿಲ್ಲ. ವಸ್ತುವಿನ ಅತಿಶಯ ತೋರುವಲ್ಲಿ ತಮಪಿನ ಮೇಲೆ ಆಮು ಬರುವುದಿಲ್ಲ. ಉಚ್ಚೈಸ್ತಮಃ ತರುಃ ‖ ಇಲ್ಲಿ ಅತಿ ಎತ್ತರವಾದ ಮರ ಎಂಬರ್ಥ ತೋರುವುದರಿಂದ ದ್ರವ್ಯಪ್ರಕರ್ಷ ತೋರುತ್ತದೆ.

ತರಪ್, ಈಯಸುನ್ ಪ್ರತ್ಯಯವಿಧಾಯಕ ಸೂತ್ರ.

**೧೨೨೪. ದ್ವಿವಚನವಿಭಜ್ಯೋಪಪದೇ ತರಬೀಯಸುನೌ ‖ ೫-೩-೫೭ ‖**

**ದ್ವಯೋರೇಕಸ್ಯಾತಿಶಯೇ ವಿಭಕ್ತವ್ಯೇ ಚೋಪಪದೇ ಸುಪ್ತಿಙನ್ತಾದೇತೌ ಸ್ತಃ । ಪೂರ್ವಯೋರಪವಾದಃ । ಅಯಮನಯೋರತಿಶಯೇನ ಲಘುಃ ಲಘುತರೋ ಲಘೀಯಾನ್ । ಉದೀಚ್ಯಾಃ ಪ್ರಾಚ್ಯೇಭ್ಯಃ ಪಟುತರಾಃ ಪಟೀಯಾಂಸಃ ‖**

ದ್ವಿಪದ ಸೂತ್ರ. ಉಚ್ಯತೇ ಅನೇನ ಇತಿ ವಚನಮ್ । ದ್ವಯೋಃ (ಅರ್ಥಯೋಃ) ವಚನಮ್ ದ್ವಿವಚನಮ್ । ದ್ವ್ಯರ್ಥಪ್ರತಿಪಾದಕವೆಂದರ್ಥ. ದ್ವಿವಚನವಿಭಕ್ತಿಯಲ್ಲ. ವಿಭಕ್ತವ್ಯವಾದದ್ದು=ವಿಭಾಗಿಸಲು ಯೋಗ್ಯವಾದದ್ದು

ವಿಭಜ್ಯ. ದ್ವಿವಚನಂ ಚ ವಿಭಜ್ಯಂ ಚ ತಯೋಃ ಸಮಾಹಾರಃ ದ್ವಿವಚನವಿಭಜ್ಯಮ್ । ದ್ವಿವಚನವಿಭಜ್ಯಂ ಚ ತದುಪಪದಂ ಚ ದ್ವಿವಚನವಿಭಜ್ಯೋಪಪದಮ್ । ತಸ್ಮಿನ್. 'ಪ್ರಾತಿಪದಿಕಾತ್', 'ತಿಙಃ' ಅನುವೃತ್ತಿ. **ಸೂತ್ರಾರ್ಥ**—ದ್ವ್ಯರ್ಥಪ್ರತಿಪಾದಕ ಶಬ್ದವೂ, ವಿಭಾಗಿಸಲ್ಪಡುವ ಶಬ್ದವೂ ಉಪಪದವಾಗಿರುವಾಗ, ಇಬ್ಬರ ಮಧ್ಯದಲ್ಲಿ ಅತಿಶಯವಿಶಿಷ್ಟಾರ್ಥವಾಚಕವಾದ, ವಿಭಾಗಕ್ಕೆ ಪ್ರಯೋಜಕವಾದ ಧರ್ಮವಾಚಕ ವಾದ ಸುಬಂತತಿಙಂತಗಳಮೇಲೆ ಸ್ವಾರ್ಥದಲ್ಲಿ ತರಪ್, ಈಯಸುನ್ ಪ್ರತ್ಯಯಗಳು ಬರುತ್ತವೆ. ಉಪಪದವೆಂದರೆ ಸಮೀಪೋಚ್ಚರಿತವಾದ ಪದ. ದ್ವಿವಚನೋಪಪದಕ್ಕೆ ಉದಾಹರಣೆ—ಅಯಮನಯೋರಿತಿ । ಅಯಂ ಲಘುಃ, ಅಯಂ ಲಘುಃ, ಅಯ ಮನಯೋರತಿಶಯೇನ ಲಘುಃ । ಲಘು + ತರ. ಲಘುತರಃ । ಇಬ್ಬರಲ್ಲಿ ಅತಿಶಯ ಲಾಘವವುಳ್ಳವ. ಈಯಸುನ್ ಬಂದರೆ, ಲಘು + ಈಯಸುನ್. ಉನ್ ಇತ್. ಲಘು + ಈಯಸ್. 'ಟೇಃ' ಸೂತ್ರದಿಂದ ಟಿಲೋಪ. ಲಘೀಯಸ್. ಉಗಿತ್ತಾದುದ ರಿಂದ ಸುಪರವಾದಾಗ ನುಮ್. 'ಅತ್ವಸಂತಸ್ಯ—' ಸೂತ್ರದಿಂದ ಉಪಧಾದೀರ್ಘ. ಸುಲೋಪ, ಸಲೋಪ. ಲಘೀಯಾನ್. ಸಲೋಪ ಅಸಿದ್ಧವಾದುದರಿಂದ ನಲೋಪ ವಿಲ್ಲ. ವಿಭಜ್ಯೋಪಪದಕ್ಕೆ—ಉದೀಚ್ಯಾಃ ಇತಿ । ಉತ್ತರ ದೇಶದವರು ಪೂರ್ವ ದೇಶ ದವರಿಗಿಂತ ಚಟುವಟಿಕೆಯುಳ್ಳವರು. ವಿಭಾಜಕಪ್ರಯೋಜಕೀಭೂತವಾದ ಧರ್ಮ ಪಟುತ್ವ. ತರಪ್. ಪಟುತರಾಃ । ಈಯಸುನ್ ಬಂದಾಗ ಟಿಲೋಪ. ಪಟೀ ಯಾಂಸಃ । ಹಿಂದಿನಂತೆ ಸುವಿನಲ್ಲಿ ನುಮಾದಿಕಾರ್ಯವನ್ನು ತಿಳಿಯಬೇಕು. ಇಲ್ಲಿ ಅತಿಶಯಾರ್ಥವಿಲ್ಲ. ಪ್ರಾಚ್ಯೇಭ್ಯಃ ಎಂಬಲ್ಲಿ 'ಪಂಚಮೀ ವಿಭಕ್ತೇ' ಸೂತ್ರದಿಂದ ಪಂಚಮೀ ಬಂದಿದೆ.

ಪ್ರಶಸ್ಯ ಶಬ್ದಕ್ಕೆ ಶ್ರಾದೇಶ ಹೇಳುವ ಸೂತ್ರ.

### ೧೨೨೬. ಪ್ರಶಸ್ಯಸ್ಯ ಶ್ರಃ ॥ ೫-೩-೬೦ ॥

### ಅಸ್ಯ ಶ್ರಾದೇಶಃ ಸ್ಯಾದಜಾದ್ಯೋಃ ಪರತಃ ॥

ದ್ವಿಪದ ಸೂತ್ರ. 'ಅಜಾದೀಗುಣವಚನಾದೇವ' ಸೂತ್ರದಿಂದ 'ಅಜಾದೀ' ಪದವು ಅನುವೃತ್ತವಾಗಿ ಸಪ್ತಮ್ಯಂತವಾಗಿ ವಿಪರಿಣತವಾಗುತ್ತದೆ. ಅಜಾದಿಪ್ರತ್ಯಯ ವೆಂದರೆ ಈ ಪ್ರಕರಣದಲ್ಲಿ ಇಷ್ಠನ್, ಈಯಸುನ್ ಆಗುತ್ತವೆ. ಪ್ರಶಸ್ಯ ಶಬ್ದಕ್ಕೆ ಅಜಾದಿಪ್ರತ್ಯಯ (ಇಷ್ಠನ್, ಈಯಸುನ್) ಪರದಲ್ಲಿರುವಾಗ ಶ್ರ ಆದೇಶ ಬರುತ್ತದೆ. ಅನೇಕಾಚಾದುದರಿಂದ ಸರ್ವಾದೇಶ. ಅತಶಯೇನ ಪ್ರಶಸ್ಯಃ । ಪ್ರಶಸ್ಯ + ಇಷ್ಠ ಎಂದಿರುವಾಗ ಶ್ರಾದೇಶ. ಶ್ರ + ಇಷ್ಠ. 'ಯಸ್ಯೇತಿ ಚ' ಸೂತ್ರದಿಂದ ಅಲೋಪ ಪ್ರಾಪ್ತವಾದರೆ ಪ್ರಕೃತಿಭಾವ ಹೇಳುತ್ತಾನೆ.

ಇಷ್ಠಾದಿಗಳು ಪರವಾದಾಗ ಪ್ರಕೃತಿಭಾವ ಹೇಳುವ ಸೂತ್ರ.

**೧೨೨೭. ಪ್ರಕೃತ್ಯೈಕಾಚ್ ॥ ೬-೪-೧೬೩ ॥**

**ಇಷ್ಠಾದಿಷು ಏಕಾಚ್ ಪ್ರಕೃತ್ಯಾ ಸ್ಯಾತ್ ॥ ಶ್ರೇಷ್ಠಃ, ಶ್ರೇಯಾನ್ ॥**

ಪ್ರಕೃತ್ಯಾ, ಏಕಾಚ್ ॥ ದ್ವಿಪದ ಸೂತ್ರ. ತುರಿಷ್ಠೇಮೇಯಸ್ಸು' ಸೂತ್ರ ಅನುವೃತ್ತವಾಗುತ್ತದೆ. ಏಕಃ ಅಚ್ ಯಸ್ಯ ಸಃ ಏಕಾಚ್ । **ಸೂತ್ರಾರ್ಥ**— ಇಷ್ಠನ್, ಇಮನಿಚ್, ಈಯಸುನ್ ಪ್ರತ್ಯಯ ಪರದಲ್ಲಿರುವಾಗ ಒಂದು ಅಚ್ ಉಳ್ಳ ಶಬ್ದಕ್ಕೆ ಪ್ರಕೃತಿಭಾವ ಬರುತ್ತದೆ. ಶ್ರ ಏಕಾಚ್. ಅದಕ್ಕೆ ಇಷ್ಠನ್ ಪರವಾದುದರಿಂದ ಪ್ರಕೃತಿಭಾವ ಬಂದರೆ ಶ್ರ + ಇಷ್ಠ ಎಂದಿರುವಾಗ ಗುಣ. ಶ್ರೇಷ್ಠಃ । ಪ್ರಶಸ್ಯ ಶಬ್ದಕ್ಕೆ ಈಯಸುನ್ ಬಂದಾಗ ಪ್ರಶಸ್ಯ + ಈಯಸ್ ಎಂದಿರುವಾಗ ಶ್ರಾದೇಶ. ಶ್ರ + ಈಯಸ್. ಪ್ರಕೃತಿಭಾವ. ಗುಣ. ಶ್ರೇಯಸ್ ಸಾಂತಶಬ್ದ. ಸುಪರವಾದಾಗ ನುಮ್ ದೀರ್ಘಾದಿ. ಶ್ರೇಯಾನ್ ।

ಪ್ರಶಸ್ಯ ಶಬ್ದಕ್ಕೆ ಜ್ಯಾದೇಶ ಹೇಳುವ ಸೂತ್ರ.

**೧೨೨೮. ಜ್ಯ ಚ ॥ ೫-೩-೬೧ ॥**

**ಪ್ರಶಸ್ಯಸ್ಯ ಜ್ಯಾದೇಶಃ ಸ್ಯಾದಿಷ್ಠೇಯಸೋಃ । ಜ್ಯೇಷ್ಠಃ ॥**

ದ್ವಿಪದ ಸೂತ್ರ. ಹಿಂದಿನ ಸೂತ್ರದಿಂದ 'ಪ್ರಶಸ್ಯಸ್ಯ' ಅನುವೃತ್ತಿ. ಪ್ರಶಸ್ಯ ಶಬ್ದಕ್ಕೆ ಇಷ್ಠನ್, ಈಯಸುನ್ ಪ್ರತ್ಯಯಗಳು ಪರದಲ್ಲಿರುವಾಗ ಜ್ಯ ಎಂಬ ಆದೇಶ ಬರುತ್ತದೆ. ಪ್ರಶಸ್ಯ + ಇಷ್ಠ ಎಂದಿರುವಾಗ ಜ್ಯಾದೇಶ. ಜ್ಯ + ಇಷ್ಠ. ಏಕಾಚಾದುದ ರಿಂದ ಪ್ರಕೃತಿಭಾವ. ಗುಣ. ಜ್ಯೇಷ್ಠಃ । ಅತಿಶಯ ಪ್ರಾಶಸ್ತ್ಯವುಳ್ಳವನು. ಈಯಸುನ್ ಪರವಾದಾಗ ಜ್ಯಾದೇಶ ಬಂದರೆ ಜ್ಯ + ಈಯಸುನ್ ಎಂದಿರುವಾಗ ಈಕಾರಕ್ಕೆ ಆತ್ವ ಹೇಳುತ್ತಾನೆ.

ಈಯಸುನಿಗೆ ಆತ್ವ ಹೇಳುವ ಸೂತ್ರ.

**೧೨೨೯. ಜ್ಯಾದಾದೀಯಸಃ ॥ ೬-೪-೧೬೦ ॥**

**ಆದೇಃ ಪರಸ್ಯ । ಜ್ಯಾಯಾನ್ ॥**

ಜ್ಯಾತ್, ಆತ್, ಈಯಸಃ ॥ ತ್ರಿಪದ ಸೂತ್ರ. ಆತ್ ತಪರವಾಡಿರುವುದ ರಿಂದ ದೀರ್ಘಾಕಾರ ಮಾತ್ರಕ್ಕೆ ಗ್ರಹಣ. **ಸೂತ್ರಾರ್ಥ**—ಜ್ಯಾದೇಶದ ಪರದಲ್ಲಿರುವ ಈಯಸುನಿಗೆ ಆಕಾರಾದೇಶ ಬರುತ್ತದೆ. 'ಆದೇಃ ಪರಸ್ಯ' ಪರಿಭಾಷೆಯಿಂದ ಪರಕ್ಕೆ ವಿಹಿತವಾದುದರಿಂದ ಈಯಸುನಿನ ಆದಿ ಈಕಾರಕ್ಕೆ ಆದೇಶ. ಜ್ಯ + ಆಯಸ್. ಸವರ್ಣದೀರ್ಘ. ಜ್ಯಾಯಸ್ ಶಬ್ದ. ಸುಪರವಾದಾಗ ನುಮಾದಿ. ಜ್ಯಾಯಾನ್.

ಬಹು ಶಬ್ದದ ಪರದಲ್ಲಿ ಇಮೇಯಸ್‌ಗಳಿಗೆ ಲೋಪ ಹೇಳುವ ಸೂತ್ರ.

**೧೨೩೦. ಬಹೋರ್ಲೋಪೋ ಭೂ ಚ ಬಹೋಃ || ೬-೪-೧೫೮ ||**

**ಬಹೋಃ ಪರಯೋರಿಮೇಯಸೋರ್ಲೋಪಃ ಸ್ಯಾತ್, ಬಹೋಶ್ಚ ಭೂರಾದೇಶಃ | ಭೂಮಾ | ಭೂಯಾನ್ ||**

ಐದು ಪದಗಳುಳ್ಳ ಸೂತ್ರ. ಭೂ ಲುಪ್ತಪ್ರಥಮಾಕ. 'ಇಷ್ಠೇಮೇಯಸ್ಸು' ಅನುವೃತ್ತಿ. ಅದರಲ್ಲಿ ಇಷ್ಠನಿಗೆ ಇಲ್ಲಿ ಸಂಬಂಧವಿಲ್ಲ. ಬಹೋಃ ಪಂಚಮೀ. **ಸೂತ್ರಾರ್ಥ**—ಬಹುಶಬ್ದದ ಪರದಲ್ಲಿರುವ ಇಮನಿಚ್, ಈಯಸುನ್ ಪ್ರತ್ಯಯಗಳಿಗೆ ಲೋಪವೂ, ಬಹು ಶಬ್ದಕ್ಕೆ ಭೂ ಎಂಬ ಆದೇಶವೂ ಬರುತ್ತದೆ. ಬಹೂನಾಂ ಭಾವಃ ಎಂಬರ್ಥದಲ್ಲಿ ಬಹು ಶಬ್ದಕ್ಕೆ 'ಪೃಥ್ವಾದಿಭ್ಯಃ—' ಸೂತ್ರದಿಂದ ಭಾವಾರ್ಥದಲ್ಲಿ ಇಮನಿಚ್ ಪ್ರತ್ಯಯ. ಬಹು+ಇಮನ್. ಇಲ್ಲಿಯೂ ಪರದಲ್ಲಿರುವ ಪ್ರತ್ಯಯಗಳಿಗೆ ಲೋಪವೆಂದುದರಿಂದ 'ಆದೇಃ ಪರಸ್ಯ' ಪರಿಭಾಷೆಯಿಂದ ಆದಿಗೆ ಲೋಪ. ಆದಿ ಇಕಾರಕ್ಕೆ ಲೋಪ ಬಂದು ಬಹು ಶಬ್ದಕ್ಕೆ ಭೂ ಆದೇಶ ಬಂದರೆ ಭೂಮನ್ ಎಂದಾಗುತ್ತದೆ. ಸುವಿನಲ್ಲಿ ದೀರ್ಘಾದಿ. ಭೂಮಾ. ಈಯಸುನ್ ಬಂದಾಗ ಈಕಾರಲೋಪ ಬಂದು ಬಹುವಿಗೆ ಭೂಭಾವ ಬಂದರೆ ಭೂಯಸ್ ಎಂದಾಗುತ್ತದೆ. ಸುವಿನಲ್ಲಿ ನುಮಾದಿ. ಭೂಯಾನ್.

ಬಹು ಶಬ್ದದ ಪರದಲ್ಲಿರುವ ಇಷ್ಠನಿಗೆ ಲೋಪಾಗಮ ಹೇಳುವ ಸೂತ್ರ.

**೧೨೩೧. ಇಷ್ಠಸ್ಯ ಯಿಟ್ ಚ || ೬-೪-೧೫೯ ||**

**ಬಹೋಃ ಪರಸ್ಯ ಇಷ್ಠಸ್ಯ ಲೋಪಃ ಸ್ಯಾದ್ ಯಿಡಾಗಮಶ್ಚ| ಭೂಯಿಷ್ಠಃ ||**

ತ್ರಿಪದ ಸೂತ್ರ. 'ಬಹೋರ್ಲೋಪಃ' ಅನುವೃತ್ತಿ. **ಸೂತ್ರಾರ್ಥ**—ಬಹು ಶಬ್ದದ ಪರದಲ್ಲಿರುವ ಇಷ್ಠನ್ ಪ್ರತ್ಯಯಕ್ಕೆ ಲೋಪವೂ ಅದಕ್ಕೆ ಯಿಡಾಗಮವೂ ಬಹುವಿಗೆ ಭೂಭಾವವೂ ಬರುತ್ತದೆ. 'ಆದೇಃ ಪರಸ್ಯ' ಪರಿಭಾಷೆಯಿಂದ ಇಷ್ಠನಿನ ಆದಿ ಇಕಾರಕ್ಕೆ ಲೋಪ. ಬಹು+ಇಷ್ಠ. ಇಕಾರಕ್ಕೆ ಲೋಪ ಬಂದರೆ ಬಹು+ಷ್ಠ. ಯಿಡಾಗಮ. ಟಿತ್ತಾದುದರಿಂದ ಆದ್ಯವಯವ. ಬಹುವಿಗೆ ಭೂ ಆದೇಶ. ಭೂಯಿಷ್ಠಃ |

ವಿನ್ಮತುಪಿಗೆ ಲುಕ್ ಹೇಳುವ ಸೂತ್ರ.

**೧೨೩೨. ವಿನ್ಮತೋರ್ಲುಕ್ || ೫-೩-೬೫ ||**

**ವಿನೋ ಮತುಪಶ್ಚ ಲುಕ್ ಸ್ಯಾದಿಷ್ಠೇಯಸೋಃ | ಅತಿಶಯೇನ ಸ್ರಗ್ವೀ ಸ್ರಜಿಷ್ಠಃ | ಸ್ರಜೀಯಾನ್ | ಅತಿಶಯೇನ ತ್ವಗ್ವಾನ್ ತ್ವಚಿಷ್ಠಃ | ತ್ವಚೀಯಾನ್ ||**

ದ್ವಿಪದ ಸೂತ್ರ. ಅಜಾದೀ ಅನುವೃತ್ತವಾಗಿ ಸಪ್ತಮ್ಯಂತವಾಗಿ ಪರಿಣತವಾಗುತ್ತದೆ. ಅಜಾದಿಪ್ರತ್ಯಯಗಳು ಇಷ್ಠನ್, ಈಯಸುನ್ ಆಗುತ್ತವೆಯೆಂದು ಹಿಂದೆ ಹೇಳಿದೆ. ಇಷ್ಠನ್, ಈಯಸುನ್ ಪ್ರತ್ಯಯ ಪರದಲ್ಲಿರುವಾಗ ವಿನ್ ಪ್ರತ್ಯಯ ಮತುಪ್ ಪ್ರತ್ಯಯಗಳಿಗೆ ಲುಕ್ ಬರುತ್ತದೆ. ಅತಿಶಯೇನ ಸ್ರಗ್ವೀ। ಅಧಿಕವಾದ ಮಾಲೆಯುಳ್ಳವನು. 'ಅಸ್ಮಾಯಾಮೇ—' ಸೂತ್ರದಿಂದ ಮತ್ವರ್ಥದಲ್ಲಿ ಮೊದಲು ಸ್ರಜ್ ಶಬ್ದಕ್ಕೆ ವಿನಿಪ್ರತ್ಯಯ. ಸ್ರಗ್ವೀ. ಈಗ ಅತಿಶಯಾರ್ಥದಲ್ಲಿ ಅದರ ಮೇಲೆ 'ಅತಿಶಾಯನೇ—' ಸೂತ್ರದಿಂದ ಇಷ್ಠನ್ ಪ್ರತ್ಯಯ. ಸ್ರಜ್ + ವಿನ್ + ಇಷ್ಠ. ಇಷ್ಠನ್ ಪರವಾದಾಗ ವಿನಿಗೆ ಲೋಪ. ಸ್ರಜಿಷ್ಠಃ। ಅಜಾದಿಪ್ರತ್ಯಯ ಪರವಾದುದರಿಂದ ಪದಸಂಜ್ಞೆಗೆ ಅಪವಾದವಾಗಿ ಭಸಂಜ್ಞಾ ಬರುವುದರಿಂದ ಕುತ್ವ ಬರುವುದಿಲ್ಲ. 'ಚೋಃ ಕುಃ' ಸೂತ್ರದಿಂದ ಕುತ್ವವು ಪದಾಂತದಲ್ಲಿ ಮಾತ್ರ ಬರುತ್ತದೆ. ತ್ವಕ್ ಅಸ್ಯ ಅಸ್ತಿ, ಎಂದರ್ಥವಿವಕ್ಷಾಮಾಡಿದಾಗ ತ್ವಚ್ ಶಬ್ದದ ಮೇಲೆ ಮತುಪ್. ತ್ವಗ್ವಾನ್. 'ಮಾದುಪಧಾಯಾಶ್ಚ—' ಸೂತ್ರದಿಂದ ಮಕಾರಕ್ಕೆ ವಕಾರ ಬಂದಿದೆ. ಅತಿಶಯೇನ ತ್ವಗ್ವಾನ್। ಈಗ ಅತಿಶಯಾರ್ಥದಲ್ಲಿ ಇಷ್ಠನ್ ಬಂದಾಗ ಮತುಪಿಗೆ ಲುಕ್. ತ್ವಚ್ + ಮತ್ + ಇಷ್ಠ. ತ್ವಚಿಷ್ಠಃ। ಹೀಗೇ ಈಯಸುನ್ ಪರವಾದಾಗ ವಿನ್, ಮತುಪ್‌ಗಳಿಗೆ ಲುಕ್. ಸ್ರಜ್ + ವಿನ್ + ಈಯಸ್. ಸ್ರಜೀಯಸ್. ಸ್ರಜೀಯಾನ್. ತ್ವಚ್ + ಮತ್ + ಈಯಸ್. ತ್ವಚೀಯಸ್. ತ್ವಚೀಯಾನ್. ದಪ್ಪ ಚರ್ಮವುಳ್ಳವನು.

ಕಲ್ಪಬಾದಿಪ್ರತ್ಯಯಗಳನ್ನು ವಿಧಿಸುವ ಸೂತ್ರ.

**೧೨೩೩. ಈಷದಸಮಾಪ್ತೌ ಕಲ್ಪಬ್‌ದೇಶ್ಯದೇಶೀಯರಃ ॥ ೫-೩-೬೭ ॥**

**ಈಷದೂನೋ ವಿದ್ವಾನ್ ವಿದ್ವತ್‌ಕಲ್ಪಃ। ವಿದ್ವದ್ದೇಶ್ಯಃ। ವಿದ್ವದ್-ದೇಶೀಯಃ ಪಚತಿಕಲ್ಪಮ್ ॥**

ದ್ವಿಪದ ಸೂತ್ರ. ಈಷದಸಮಾಪ್ತಿವಿಶಿಷ್ಟಾರ್ಥವನ್ನು ಹೇಳುವ ಸುಬಂತದ ಮೇಲೂ ತಿಙನ್ತದಮೇಲೂ ಸ್ವಾರ್ಥದಲ್ಲಿ ಕಲ್ಪಪ್, ದೇಶ್ಯ, ದೇಶೀಯರ್ ಪ್ರತ್ಯಯಗಳು ಬರುತ್ತವೆ. ಈಷದಸಮಾಪ್ತಿ = ಸ್ವಲ್ಪ ಸಮಾಪ್ತಿಯಾಗದಿರುವುದು = ಪೂರ್ಣಕ್ಕೆ ಸ್ವಲ್ಪ ಕಡಿಮೆಯಾಗಿರುವುದು. ಈಷದೂನೋ ವಿದ್ವಾನ್। ವಿದ್ವತ್ಕಲ್ಪಃ। ಪೂರ್ಣ ವಿದ್ವತ್ತಿಗೆ ಸ್ವಲ್ಪ ಕಡಿಮೆಯಾದವನು. ವಿದ್ವಾಂಸನಿಗೆ ಸಮನು. ವಿದ್ವದ್ದೇಶ್ಯಃ। ವಿದ್ವದ್ದೇಶೀಯಃ। ತಿಙನ್ತಕ್ಕೆ ಪಚತಿಕಲ್ಪಮ್. ಸಂಪೂರ್ಣವಾಗದಿರುವ ಪಾಕಕ್ರಿಯೆ.

ಬಹುಚ್ ಪ್ರತ್ಯಯವಿಧಾಯಕ ಸೂತ್ರ.

**೧೨೩೪. ವಿಭಾಷಾ ಸುಪೋ ಬಹುಚ್ ಪುರಸ್ತಾತ್ ತು ॥ ೫-೩-೬೮ ॥**

**ಈಷದಸಮಾಪ್ತಿವಿಶಿಷ್ಟೇಽರ್ಥೇ ಸುಬನ್ತಾದ್ಬಹುಚ್ವಾ ಸ್ಯಾತ್ಸ ಚ ಪ್ರಾಗೇವ ನ ತು ಪರತಃ । ಈಷದೂನಃ ಪಟುರ್ಬಹುಪಟುಃ । ಪಟುಕಲ್ಪಃ । ಸುಪಃ ಕಿಮ್ ? ಜಯತಿಕಲ್ಪಮ್ ॥**

ಐದು ಪದಗಳುಳ್ಳ ಸೂತ್ರ. 'ಈಷದಸಮಾಪ್ತೌ' ಅನುವೃತ್ತಿ. ಈಷದಸಮಾಪ್ತಿ ವಿಶಿಷ್ಟಾರ್ಥಕ ಸುಬಂತಕ್ಕೆ ಬಹುಚ್ ಪ್ರತ್ಯಯ ವಿಕಲ್ಪವಾಗಿ ಬರುತ್ತದೆ; ಇದು ಸುಬಂತದ ಪೂರ್ವಕ್ಕೇ ಬರುವುದಲ್ಲದೆ ಇತರ ಪ್ರತ್ಯಯಗಳಂತೆ ಪರಕ್ಕೆ ಬರುವುದಿಲ್ಲ. ಸ್ವಲ್ಪ ಕಡಿಮೆಯಾದ ಪಟುತ್ವವುಳ್ಳವನು. ಬಹುಪಟುಃ । ಬಹುಚ್ ಬಾರದಿದ್ದರೆ ಹಿಂದಿನ ಸೂತ್ರದಿಂದ ಕಲ್ಪಬಾದಿ. ಪಟುಕಲ್ಪಃ । ಈ ಬಹುಚ್ ಪ್ರತ್ಯಯ ಸುಬಂತಕ್ಕೆ ಮಾತ್ರ ಹೇಳಿದುದೇಕೆ? ತಿಙಂತಕ್ಕೆ ಬರುವುದಿಲ್ಲ. ಈಷನ್ನ್ಯೂನಾರ್ಥದಲ್ಲಿ ತಿಙಂತಕ್ಕೆ ಹಿಂದಿನ ಸೂತ್ರದಿಂದ ಕಲ್ಪಪ್ ಪ್ರತ್ಯಯ. ಪಚತಿಕಲ್ಪಮ್. ಜಯತಿಕಲ್ಪಮ್. ಬಹುಪಟುಃ ಎಂಬಲ್ಲಿ ಬಹು, ಪಟು ಎರಡು ಪದಗಳಿದ್ದಂತೆ ತೋರುತ್ತದೆ. ಆದರೆ ಬಹುಚ್ ಪ್ರತ್ಯಯ.

ಕಪ್ರತ್ಯಯಾಧಿಕಾರವನ್ನು ಹೇಳುವ ಸೂತ್ರ.

**೧೨೩೫. ಪ್ರಾಗಿವಾತ್ಕಃ ॥ ೫-೩-೭೦ ॥**

**ಇವೇ ಪ್ರತಿಕೃತಾವಿತ್ಯತಃ ಪ್ರಾಕ್ಕಾಧಿಕಾರಃ ॥**

ತ್ರಿಪದ ಅಧಿಕಾರಸೂತ್ರ. 'ಇವೇ ಪ್ರತಿಕೃತೌ' ಸೂತ್ರದವರೆಗೆ ಕಪ್ರತ್ಯಯಕ್ಕೆ ವ್ಯಾಪ್ತಿ ಇರುತ್ತದೆ. ಅಲ್ಲಿಯವರೆಗೆ ಹೇಳುವ ಸೂತ್ರಗಳಲ್ಲಿ 'ಕಃ' ಎಂದು ಅನುವೃತ್ತ ವಾಗುತ್ತದೆ.

ಸರ್ವನಾಮಗಳಿಗೆ ಅಕಚ್ ಹೇಳುವ ಸೂತ್ರ.

**೧೨೩೬. ಅವ್ಯಯಸರ್ವನಾಮ್ನಾಮಕಚ್ ಪ್ರಾಕ್ ಟೇಃ ॥ ೫-೩-೭೧ ॥**

**ಕಾಪವಾದಃ । ತಿಙಶ್ಚೇತ್ಯನುವರ್ತತೇ ॥**

ನಾಲ್ಕು ಪದಗಳುಳ್ಳ ಸೂತ್ರ. ಅವ್ಯಯ, ಸರ್ವನಾಮ ಶಬ್ದಗಳ ಟಿಯ ಹಿಂದೆ ಸ್ವಾರ್ಥದಲ್ಲಿ ಅಕಚ್ ಪ್ರತ್ಯಯ ಬರುತ್ತದೆ. ಕಾಧಿಕಾರಕ್ಕೆ ಒಳಪಟ್ಟುದರಿಂದ ಕಪ್ರತ್ಯಯ ಬರುತ್ತಿರುವಾಗ ಅಕಚ್ ಹೇಳಿರುವುದರಿಂದ ಕಪ್ರತ್ಯಯಕ್ಕೆ ಅಕಚ್ ಅಪ ವಾದ. 'ತಿಙಶ್ಚ' ಸೂತ್ರ ಅನುವೃತ್ತವಾಗುವುದರಿಂದ ತಿಙಂತದ ಟಿಯ ಹಿಂದೆಯೂ ಅಕಚ್ ಪ್ರತ್ಯಯ ಬರುತ್ತದೆ. ಸರ್ವಕೇ ಮುಂತಾದ ಉದಾಹರಣೆಯನ್ನು ಮುಂದೆ ತೋರಿಸುತ್ತಾನೆ.

ಅಜ್ಞಾತಾರ್ಥದಲ್ಲಿ ಕಪ್ರತ್ಯಯ ಹೇಳುವ ಸೂತ್ರ.

**೧೨೩೭. ಅಜ್ಞಾತೇ ॥ ೫-೩-೭೩ ॥**

ಕಸ್ಯಾಯಮಶ್ವೋಽಶ್ವಕಃ । ಉಚ್ಚೈಕೈಃ । ನೀಚಕೈಃ । ಸರ್ವಕೇ ॥

ವಾ ॥ (ಓಕಾರಸಕಾರಭಕಾರಾದೌ ಸುಪಿ ಸರ್ವನಾಮ್ನಷ್ಟೇಃ ಪ್ರಾಗಕಚ್ । ಅನ್ಯತ್ರ ಸುಬನ್ತಸ್ಯ) ಯುಷ್ಮಕಾಭಿಃ । ಯುವಕಯೋಃ । ತ್ವಯಕಾ ॥

ಏಕಪದ ಸೂತ್ರ. 'ಕಃ', 'ಅಕಚ್' ಅಧಿಕಾರದಿಂದ ಅನುವೃತ್ತವಾಗುತ್ತವೆ. ಅಜ್ಞಾತತತ್ವವಿಶಿಷ್ಟಾರ್ಥವಾಚಕ ಸುಬಂತದ ಮೇಲೆ ಸ್ವಾರ್ಥದಲ್ಲಿ ಕಪ್ರತ್ಯಯವೂ, ಅವ್ಯಯ, ಸರ್ವನಾಮುಗಳಿಗೆ ಅಕಚ್ ಪ್ರತ್ಯಯವೂ ಬರುತ್ತದೆ. ನಿಶ್ಚಿತಜ್ಞಾನಕ್ಕೆ ವಿಷಯವಾಗದಿರುವುದು, ಚನ್ನಾಗಿ ತಿಳಿಯದಿರುವುದು ಅಜ್ಞಾತ. ಕಸ್ಯಾಯಮಶ್ವಃ। ಇದು ಯಾರ ಕುದುರೆಯೆಂದು ತಿಳಿಯದಿರುವುದರಿಂದ ಅಜ್ಞಾತತತ್ವವಿಶಿಷ್ಟಾರ್ಥಕ ವಾಚಕವಾಗಿದೆ. ಅಶ್ವ+ಕ. ಅಶ್ವಕಃ। ಯಾರದೆಂದು ತಿಳಿಯದಿರುವ ಕುದುರೆ. ಅವ್ಯಯಗಳಿಗೆ ಅಕಚ್. ಉಚ್ಚೈಃ। ಇಲ್ಲಿ ಟಿ ಐಃ। ಇದರ ಹಿಂದೆ ಅಕಚ್. ಅಕಚಿನಲ್ಲಿ ಅಕ್ ಉಳಿಯುತ್ತದೆ. ಉಚ್ಚ್+ಅಕ್+ಐಃ=ಉಚ್ಚಕೈಃ। ನೀಚೈಃ। ನೀಚ್+ಅಕ್+ಐಃ=ನೀಚಕೈಃ। ಸರ್ವನಾಮುಕ್ಕೆ ಅಕಚ್. ಸರ್ವೇ। ಇಲ್ಲಿ ಟಿ ಎ। ಸರ್ವ್+ಅಕ್+ಎ. ಸರ್ವಕೇ. ಸುಪಃ ಅನುವೃತ್ತವಾಗುವುದರಿಂದ ಸುಬಂತಸರ್ವನಾಮುಗಳ ಟಿಗೆ ಅಕಚ್ ಬರುತ್ತದೆಂದು ಸಾಮಾನ್ಯವಾಗಿ ಹೇಳುವುದಾದರೆ ಕೆಲವು ಕಡೆ ಇಷ್ಟರೂಪವಾಗುವುದಿಲ್ಲ. ಅದಕ್ಕೋಸ್ಕರ ವಾರ್ತಿಕಕಾರರು ಸರ್ವನಾಮುಗಳಿಗೆ ಅಕಚ್ ಬರಲು ನಿಯಮ ಹೇಳುತ್ತಾರೆ. ಓಕಾರ, ಸಕಾರ, ಭಕಾರಾದಿಯಾದ ಸುಪ್ ಪರದಲ್ಲಿರುವಾಗ ಸರ್ವನಾಮುದ ಟಿಯ ಹಿಂದೆ ಅಕಚ್. ಇನ್ನು ಉಳಿದ ವಿಭಕ್ತಿಗಳಲ್ಲಿ ಸುಬಂತವಾದ ಸರ್ವನಾಮುದ ಟಿಯ ಹಿಂದೆ ಅಕಚ್. ಯುಷ್ಮದ್+ಭಿಸ್. ಭಾದಿಪ್ರತ್ಯಯ ಪರವಾದುದರಿಂದ ಯುಷ್ಮದಿನ ಟಿ ಅದ್, ಅದರ ಹಿಂದೆ ಅಕಚ್. ಯುಷ್ಮ+ಅಕ್+ಅದ್+ಭಿಸ್. ಯುಷ್ಮಕದ್+ಭಿಸ್. 'ಯುಷ್ಮದಸ್ಮದೋರನಾದೇಶೇ' ಆತ್ವ. ಯುಷ್ಮಕಾಭಿಃ। ಯುಷ್ಮದ್+ಓಸ್. ಓಕಾರಾದಿ ಸುಪ್ ಪರವಾದುದರಿಂದ ಯುಷ್ಮದಿನ ಟಿಯ ಹಿಂದೆ ಅಕಚ್. ಯುಷ್ಮಕದ್+ಓಸ್. ಮಪರ್ಯಂತಕ್ಕೆ ಯುವಾದೇಶ. ತ್ಯದಾದ್ಯತ್ವ, ಪರರೂಪ. ಯುವಕ+ಓಸ್. 'ಓಸಿ ಚ' ಏತ್ವ. ಅಯಾದೇಶ. ಯುವಕಯೋಃ। ಇತರ ವಿಭಕ್ತಿಗಳಲ್ಲಿ ಸುಬಂತದ ಟಿಯ ಹಿಂದೆ ಅಕಚ್. ತ್ವಯಾ. ತೃತೀಯಾ ಏಕವಚನ ಟಾ ವಿಭಕ್ತ್ಯಂತ. ಇಲ್ಲಿ ಟಿ ಆ. ಅದರ ಹಿಂದೆ ಅಕಚ್ ಬಂದರೆ ತ್ವಯ್+ಅಕ್+ಆ. ತ್ವಯಕಾ.

ಕುತ್ಸಿತಾರ್ಥದಲ್ಲಿ ಕಪ್ರತ್ಯಯ ಹೇಳುವ ಸೂತ್ರ.

೧೨೩೮. ಕುತ್ಸಿತೇ ॥ ೫-೩-೭೪ ॥ ಕುತ್ಸಿತೋಽಶ್ವೋಽಶ್ವಕಃ ॥

ಏಕಪದ ಸೂತ್ರ. ಕುತ್ಸಿತಾರ್ಥಪ್ರತಿಪಾದಕ ಶಬ್ದದ ಮೇಲೆ ಸ್ವಾರ್ಥದಲ್ಲಿ ಕಪ್ರತ್ಯಯು ಬರುತ್ತದೆ. ಯಾವ ಧರ್ಮದಿಂದ ವಸ್ತು ಕುತ್ಸಿತವಾಗುತ್ತದೋ ಆ ಧರ್ಮ ದಿಂದ ಕೂಡಿರುವ ವಸ್ತುವಾಚಕ ಪದದಮೇಲೆ ಈ ಪ್ರತ್ಯಯು. ಕುತ್ಸಿತವಾದ ಕುದುರೆ. ಅಶ್ವಕಃ ಸರಿಯಾಗಿ ಓಡದಿರುವುದರಿಂದ ಕುತ್ಸಾ ತೋರುತ್ತದೆ.

ಡತರಚ್ ಪ್ರತ್ಯಯವಿಧಾಯಕ ಸೂತ್ರ.

**೧೨೩೯. ಕಿಂಯತ್ತದೋ ನಿರ್ಧಾರಣೇ ದ್ವಯೋರೇಕಸ್ಯ ಡತರಚ್**
|| ೫-೩-೯೨ ||

**ಅನಯೋಃ ಕತರೋ ವೈಷ್ಣವಃ । ಯತರಃ । ತತರಃ ।**

ಐದು ಪದಗಳುಳ್ಳ ಸೂತ್ರ. ಕಿಂ ಚ, ಯತ್ ಚ, ತತ್ ಚ ತೇಷಾಂ ಸಮಾಹಾರಃ ಕಿಂಯತ್ತದ್. ತಸ್ಮಾತ್. ಕಿಂಯತ್ತದಃ । **ಸೂತ್ರಾರ್ಥ**—ಇಬ್ಬರಲ್ಲಿ ಒಬ್ಬನ ಪೃಥಕ್ಕರಣವು ತೋರುವಾಗ (ಬೇರ್ಪಡೆ) ಪೃಥಕ್ಕರಿಸುವಾರ್ಥವನ್ನು (ನಿರ್ಧರಿಸುವ) ಕೊಡುವ ಕಿಂ, ಯತ್, ತತ್ ಶಬ್ದಗಳ ಮೇಲೆ ಡತರಚ್ ಪ್ರತ್ಯಯ ಬರುತ್ತದೆ. ಇವರಲ್ಲಿ ಯಾರು ವೈಷ್ಣವನು ? ಇಲ್ಲಿ ವೈಷ್ಣವತ್ವಗುಣದಿಂದ ಕಿಂ ಶಬ್ದಾರ್ಥವು ನಿರ್ಧರಿಸುತ್ತದೆ. ಕಿಮ್ + ಡತರಚ್. ಅತರ ಉಳಿಯುತ್ತದೆ. ಡಿತ್ತಾದುದರಿಂದ ಟಿ(ಇಮ್)ಲೋಪ. ಕ್ + ಅತರ. ಕತರಃ । ಹೀಗೆಯೇ ಯದ್, ತದ್ ಶಬ್ದಗಳಿಗೆ ಡತರಚ್ ಬಂದು ಟಿಲೋಪ ಬಂದರೆ ಯತರಃ, ತತರಃ ಎಂದಾಗುತ್ತದೆ.

ಡತಮುಚ್ ಪ್ರತ್ಯಯವಿಧಾಯಕ ಸೂತ್ರ.

**೧೨೪೦. ವಾ ಬಹೂನಾಂ ಜಾತಿಪರಿಪ್ರಶ್ನೇ ಡತಮುಚ್** || ೫-೩-೯೩ ||

**ಜಾತಿಪರಿಪ್ರಶ್ನೇ ಇತಿ ಪ್ರತ್ಯಾಖ್ಯಾತಮಾಕರೇ । ಬಹೂನಾಂ ಮಧ್ಯೇ ಏಕಸ್ಯ ನಿರ್ಧಾರಣೇ ಡತಮುಜ್ವಾ ಸ್ಯಾತ್ । ಕತಮೋ ಭವತಾಂ ಕಠಃ । ಯತಮಃ । ತತಮಃ । ವಾ ಗ್ರಹಣಮಕಜರ್ಥಮ್ । ಯಕಃ । ಸಕಃ ॥**

ಇತಿ ಪ್ರಾಗಿವೀಯಾಃ ॥ ೧೫ ॥

ನಾಲ್ಕು ಪದಗಳುಳ್ಳ ಸೂತ್ರ. ‘ಕಿಂಯತ್ತದಃ’, ‘ನಿರ್ಧಾರಣೇ’, ‘ಏಕಸ್ಯ’ ಅನುವೃತ್ತಿ. ಸೂತ್ರದಲ್ಲಿ ‘ಜಾತಿಪರಿಪ್ರಶ್ನೇ’ ಎಂಬ ಪದವು ಭಾಷ್ಯದಲ್ಲಿ ಪ್ರತ್ಯಾಖ್ಯಾತವಾಗಿದೆ. **ಸೂತ್ರಾರ್ಥ**—ಅನೇಕರ ಮಧ್ಯದಲ್ಲಿ ಒಬ್ಬನ ಪೃಥಕ್ಕರಣ ತೋರುವಾಗ, ನಿರ್ಧರಿಸುವಾರ್ಥವನ್ನು ಕೊಡುವ ಕಿಂ, ಯದ್, ತದ್ ಶಬ್ದಗಳ ಮೇಲೆ ಡತಮುಚ್ ಪ್ರತ್ಯಯು ವಿಕಲ್ಪವಾಗಿ ಬರುತ್ತದೆ. ನಿಮ್ಮ ಮಧ್ಯದಲ್ಲಿ ಯಾರು ಕಠಶಾಖೆಯನ್ನು ಓದುವವನು ? ಕಿಮ್ + ಡತಮುಚ್. ಡಿತ್ತಾದುದರಿಂದ ಟಿಲೋಪ. ಕತಮಃ ।

ಹೀಗೆಯೇ ಯದ್, ತದ್ ಶಬ್ದಗಳಿಗೆ ಡತಮಚ್ ಬಂದು ಟಿಲೋಪವಾದಾಗ ಯತಮಃ, ತತಮಃ ಎಂದಾಗುತ್ತದೆ. ವಾ ಎಂದುದರಿಂದ ಈ ಪ್ರತ್ಯಯು ಬಾರದಿದ್ದರೆ ಅಕಚ್ ಪ್ರತ್ಯಯು ಬರುತ್ತದೆ. ವಾ ಗ್ರಹಣವಿಲ್ಲದಿದ್ದರೆ ಅಕಜಿಗೆ ಅಪವಾದವಾಗಿ ಡತಮಚ್ ಬರುವುದರಿಂದ ಪುನಃ ಅಕಚ್ ಬಾರದೇ ಹೋಗಬೇಕಾಗುತ್ತದೆ. ಯಃ, ಅಕಚ್. ಯ್ + ಅಕ್ + ಅ. ಯಕಃ। ಸಃ, ಸ್ + ಅಕ್ + ಅ. ಸಕಃ ॥

ಹೀಗೆ ತದ್ಧಿತದಲ್ಲಿ ಪ್ರಾಗಿವೀಯವೆಂಬ ಹದಿನೈದನೇ ಪ್ರಕರಣ ಮುಗಿದಿದೆ.

## ೩೮. ಅಥ ಸ್ವಾರ್ಥಿಕಾಃ

ಇವಾರ್ಥದಲ್ಲಿ ಕನ್‌ಪ್ರತ್ಯಯ ಹೇಳುವ ಸೂತ್ರ.

**೧೨೪೧. ಇವೇ ಪ್ರತಿಕೃತೌ ॥ ೫-೩-೯೬ ॥**

**ಕನ್ ಸ್ಯಾತ್। ಅಶ್ವ ಇವ ಪ್ರತಿಕೃತಿರಶ್ವಕಃ।**

**ವಾ ॥ (ಸರ್ವಪ್ರಾತಿಪದಿಕೇಭ್ಯಃ ಸ್ವಾರ್ಥೇ ಕನ್) ಅಶ್ವಕಃ ॥**

ದ್ವಿಪದ ಸೂತ್ರ. 'ಅವಕ್ಷೇಪಣೇ ಕನ್' ಸೂತ್ರದಿಂದ 'ಕನ್' ಅನುವೃತ್ತಿ. ಇವಾರ್ಥ ಉಪಮಾನ. **ಸೂತ್ರಾರ್ಥ**—ಉಪಮಾನಾರ್ಥವಾಚಕ ಪ್ರಾತಿಪದಿಕದ ಮೇಲೆ ಕನ್‌ಪ್ರತ್ಯಯು ಬರುತ್ತದೆ. ಪ್ರತ್ಯಯಾಂತದಿಂದ ಪ್ರತಿಕೃತಿ = ಪ್ರತಿಮೆ ರೂಪಾರ್ಥವು ತೋರಬೇಕು; ಉಪಮೇಯು ಪ್ರತಿಮೆಯಾಗಿರಬೇಕೆಂದು ತಾತ್ಪರ್ಯ. ಅಶ್ವದಂತಿರುವ ಪ್ರತಿಕೃತಿ. ಅಶ್ವಕಃ = ಮಣ್ಣಿನಿಂದ ಮಾಡಿದ ಕುದುರೆ. ಪ್ರತಿಕೃತಿ ಸ್ತ್ರೀಲಿಂಗವಾದರೂ, ಸ್ವಾರ್ಥಿಕಪ್ರತ್ಯಯುಗಳು ಪ್ರಕೃತಿಯ ಲಿಂಗವಚನಗಳನ್ನು ಹೊಂದುತ್ತವೆಯೆಂಬ ನಿಯಮದಿಂದ ಪುಲ್ಲಿಂಗ ಬಂದಿದೆ.

ಎಲ್ಲಾ ಪ್ರಾತಿಪದಿಕಗಳ ಮೇಲೂ ಸ್ವಾರ್ಥದಲ್ಲಿ (ಪ್ರಕೃತ್ಯರ್ಥದಲ್ಲಿ) ಕನ್ ಪ್ರತ್ಯಯು ಬರುತ್ತದೆ. ಅಶ್ವ ಏವ ಅಶ್ವಕಃ। ಪ್ರತ್ಯಯುಪದಕ್ಕೆ ಅರ್ಥಬೋಧಕವೆಂದು ಅರ್ಥವಾಗುವುದರಿಂದ ಈ ಪ್ರತ್ಯಯುಗಳಿಗೆ ತಮ್ಮ ಪ್ರಕೃತಿಯ ಅರ್ಥವೇ ಅರ್ಥವಲ್ಲದೆ ಇತರ ಅರ್ಥವಿಲ್ಲ.

ಪ್ರಾಚುರ್ಯದಲ್ಲಿ ಮಯಟ್ ಹೇಳುವ ಸೂತ್ರ.

**೧೨೪೨. ತತ್ಪ್ರಕೃತವಚನೇ ಮಯಟ್ ॥ ೫-೪-೨೧ ॥**

**ಪ್ರಾಚುರ್ಯೇಣ ಪ್ರಸ್ತುತಂ ಪ್ರಕೃತಮ್, ತಸ್ಯ ವಚನಂ ಪ್ರತಿಪಾದನಮ್। ಭಾವೇ ಅಧಿಕರಣೇ ವಾ ಲ್ಯುಟ್। ಆದ್ಯೇ ಪ್ರಕೃತಮನ್ನಮನ್ನ-**

**ಮಯಮ್। ಅಪೂಪಮಯಮ್। ದ್ವಿತೀಯೇ ತು ಅನ್ನಮಯೋ ಯಜ್ಞಃ। ಅಪೂಪಮಯಂ ಪರ್ವ ॥**

ತತ್, ಪ್ರಕೃತವಚನೇ, ಮಯಟ್ ॥ ತ್ರಿಪದ ಸೂತ್ರ. ಪ್ರಕೃತಸ್ಯ ವಚನಂ ಪ್ರಕೃತವಚನಮ್. ಅಧಿಕವಾಗಿ ಪ್ರಸ್ತುತವಾದದ್ದು ಯಾವುದೋ ಅದು ಪ್ರಕೃತ. ಅದನ್ನು ಹೇಳುವುದು ಪ್ರಕೃತವಚನ. ವಚನ ಎಂಬಲ್ಲಿ ಎರಡು ಅರ್ಥಗಳಾಗುತ್ತವೆ. ಭಾವಾರ್ಥದಲ್ಲಿ ಬಂದ ಲ್ಯುಡಂತ ಪದವೆಂದರೆ 'ಹೇಳುವಿಕೆಯೆಂದೂ' ಅಧಿಕರಣಾರ್ಥದಲ್ಲಿ ಬಂದ ಲ್ಯುಡಂತವೆಂದರೆ 'ಎಲ್ಲಿ ಹೇಳಲ್ಪಡುವುದೋ' ಎಂದೂ, ಅರ್ಥವಾಗುತ್ತದೆ. ಎರಡು ರೀತಿಯಲ್ಲಿ ಹೇಳುವುದಕ್ಕೂ ಸೂತ್ರಾಭಿಪ್ರಾಯವಿರುವುದರಿಂದ ಎರಡು ಉದಾಹರಣೆ ತೋರಿಸುತ್ತಾನೆ. ಭಾವಾರ್ಥದಲ್ಲಿ **ಸೂತ್ರಾರ್ಥ**—ಪ್ರಾಚುರ್ಯಾರ್ಥವು ತೋರುವಾಗ ಪ್ರಾಚುರ್ಯವಿಶಿಷ್ಟವಸ್ತುವಾಚಕ ಪ್ರಥಮಾಂತದಮೇಲೆ ಮಯಟ್ ಪ್ರತ್ಯಯ. ಅನ್ನಮಯಮ್। ಅಧಿಕಪ್ರಸ್ತುತವಾದ ಅನ್ನ. ಸ್ವಾರ್ಥಿಕಪ್ರತ್ಯಯಗಳು ಪ್ರಕೃತಿಯ ಲಿಂಗವಚನಗಳನ್ನು ಅನುಸರಿಸುತ್ತವೆಯೆಂದುದರಿಂದ ಅನ್ನ ಶಬ್ದ ನಪುಂಸಕವಾದುದರಿಂದ ನಪುಂಸಕ ಏಕವಚನ ಬಂದಿದೆ. ಇಲ್ಲಿ ಅನ್ನ ಪದದಿಂದಲೇ ಅಧಿಕಾನ್ನ ಎಂಬರ್ಥ ತೋರುವುದರಿಂದ ಮಯಟ್ ಆ ಅರ್ಥಕ್ಕೆ ದ್ಯೋತಕ (ಪ್ರಕಾಶಕ). ಹೀಗೆಯೇ ಅಪೂಪಮಯಮ್ (ಅಧಿಕವಾದ ದೋಸೆ). ಅಧಿಕರಣಾರ್ಥದಲ್ಲಿ **ಸೂತ್ರಾರ್ಥ**—ಪ್ರಾಚುರ್ಯದಿಂದ ಕೂಡಿದ ವಸ್ತು ಎಲ್ಲಿ ಹೇಳಲ್ಪಡುತ್ತದೆಯೋ ಆ ಅರ್ಥ ತೋರುವಾಗ ಪ್ರಾಚುರ್ಯವಿಶಿಷ್ಟಾರ್ಥವಾಚಕ ಶಬ್ದದ ಮೇಲೆ ಮಯಟ್ ಪ್ರತ್ಯಯ. ಪ್ರಾಚುರ್ಯೇಣ ಪ್ರಸ್ತುತಾನಿ ಅನ್ನಾನಿ ಅಸ್ಮಿನ್ ಯಜ್ಞೇ ಸಃ ಅನ್ನಮಯಃ ಯಜ್ಞಃ॥ ಅಧಿಕ ಅನ್ನದಿಂದ ಕೂಡಿದ ಯಜ್ಞ. ಇಲ್ಲಿ ಪ್ರತ್ಯಯಾರ್ಥ ಪ್ರಕೃತ್ಯರ್ಥಕ್ಕಿಂತ ಭಿನ್ನವಾದ ಯಜ್ಞವನ್ನು ಹೇಳುವುದರಿಂದ ವಿಶೇಷ್ಯದ ಲಿಂಗ ಹೊಂದಿದೆ. ಪ್ರಾಚುರ್ಯೇಣ ಪ್ರಸ್ತುತಾಃ ಅಪೂಪಾಃ ಸಂತಿ ಅಸ್ಮಿನ್ ಪರ್ವಣಿ ಅಪೂಪಮಯಂ ಪರ್ವ। ಹುಣ್ಣಿಮೆ ಮುಂತಾದ ಪರ್ವಕಾಲದಲ್ಲಿ ಹೆಚ್ಚು ದೋಸೆ ಮಾಡುತ್ತಾರೆ. ದೋಸೆಯಿರುವ ಪರ್ವಕಾಲ.

ಸ್ವಾರ್ಥದಲ್ಲಿ ಅಣ್ ಪ್ರತ್ಯಯ ಹೇಳುವ ಸೂತ್ರ.

**೧೨೮೩. ಪ್ರಜ್ಞಾದಿಭ್ಯಶ್ಚ ॥ ೫-೪-೩೮ ॥**

**ಅಣ್ ಸ್ಯಾತ್। ಪ್ರಜ್ಞ ಏವ ಪ್ರಾಜ್ಞಃ। ಪ್ರಾಜ್ಞೀ ಸ್ತ್ರೀ। ದೈವತಃ। ಬಾಂಧವಃ ॥**

ದ್ವಿಪದ ಸೂತ್ರ. 'ತದ್ಯುಕ್ತಾತ್—' ಸೂತ್ರದಿಂದ 'ಅಣ್' ಅನುವೃತ್ತಿ. **ಸೂತ್ರಾರ್ಥ**—ಪ್ರಜ್ಞಾದಿಗಣಪಠಿತಗಳಾದ ಶಬ್ದಗಳಿಗೆ ಸ್ವಾರ್ಥದಲ್ಲಿ ಅಣ್ ಪ್ರತ್ಯಯ ಬರುತ್ತದೆ. ಪ್ರಜ್ಞನೇ ಪ್ರಾಜ್ಞನು. ಪ್ರಜ್ಞ+ಅ. ಆದಿವೃದ್ಧಿ, ಅಲೋಪ. ಪ್ರಾಜ್ಞಃ।

ಅಣಂತವಾದುದರಿಂದ ಸ್ತ್ರೀಲಿಂಗದಲ್ಲಿ 'ಟಿಡ್ಢಾಣಞ್—' ಸೂತ್ರದಿಂದ ಙೀಪ್. ಪ್ರಾಜ್ಞ+ಈ. 'ಯಸ್ಯೇತಿ ಚ' ಅಲೋಪ. ಪ್ರಾಜ್ಞೀ ಸ್ತ್ರೀ (ವಿದುಷಿ). ದೇವತಾ ಏವ ದೈವತಃ। ಆದಿವೃದ್ಧಿ, ಅಲೋಪ ಬಂದಿದೆ. ಬಂಧುರೇವ. ಬಂಧು+ಅ. ಆದಿ ವೃದ್ಧಿ. 'ಓರ್ಗುಣಃ' ಅವಾದೇಶ. ಬಾಂಧವಃ।

ಸ್ವಾರ್ಥದಲ್ಲಿ ಶಸ್‌ಪ್ರತ್ಯಯ ಹೇಳುವ ಸೂತ್ರ.

**೧೨೪೪. ಬಹ್ವಲ್ಪಾರ್ಥಾಚ್ಛಸ್ಕಾರಕಾದನ್ಯತರಸ್ಯಾಮ್ ॥ ೫-೪-೪೨ ॥**

**ಬಹೂನಿ ದದಾತಿ ಬಹುಶಃ। ಅಲ್ಪಶಃ।**

**ವಾ ॥ (ಆದ್ಯಾದಿಭ್ಯಸ್ತಸೇರುಪಸಂಖ್ಯಾನಮ್) ಆದೌ ಆದಿತಃ। ಮಧ್ಯತಃ। ಅಂತತಃ। ಪೃಷ್ಠತಃ। ಪಾರ್ಶ್ವತಃ। ಆಕೃತಿಗಣೋಽಯಮ್। ಸ್ವರೇಣ, ಸ್ವರತಃ। ವರ್ಣತಃ ॥**

ಬಹ್ವಲ್ಪಾರ್ಥಾತ್, ಶಸ್, ಕಾರಕಾತ್, ಅನ್ಯತರಸ್ಯಾಮ್ ॥ ನಾಲ್ಕು ಪದಗಳುಳ್ಳ ಸೂತ್ರ. ಬಹು, ಅಲ್ಪಾರ್ಥವನ್ನು ಹೇಳುವ ಕಾರಕವಾಚಕ ಶಬ್ದಗಳ ಮೇಲೆ ಸ್ವಾರ್ಥದಲ್ಲಿ ಶಸ್‌ಪ್ರತ್ಯಯ ವಿಕಲ್ಪವಾಗಿ ಬರುತ್ತದೆ. ಬಹೂನಿ ದದಾತಿ। ಬಹು ಶಬ್ದ ಕರ್ಮಕಾರಕವಾಗಿದೆ. ಬಹುಶಃ। ಅಲ್ಪಾನಿ ದದಾತಿ. ಅಲ್ಪಶಃ।

ಆದಿ ಮುಂತಾದ ಶಬ್ದಗಳ ಮೇಲೆ ತಸ್ ಪ್ರತ್ಯಯ ಬರುತ್ತದೆಂದು ಅಧಿಕ ವಚನ ಹೇಳಬೇಕು. ಇದು ಎಲ್ಲಾ ವಿಭಕ್ತ್ಯಂತದಮೇಲೆ ಬರುತ್ತದೆ. ಹಿಂದೆ ಪಂಚಮ್ಯಂತದ ಮೇಲೆ ಮಾತ್ರ ತಸಿಲ್ ಹೇಳಿದೆ. ಆದೌ—ಆದಿತಸ್. ರುತ್ವವಿಸರ್ಗ. ಆದಿತಃ=ಮೊದಲು. ಮಧ್ಯೇ—ಮಧ್ಯತಃ। ಅಂತೇ—ಅಂತತಃ। ಪೃಷ್ಠೇ—ಪೃಷ್ಠತಃ। ಪಾರ್ಶ್ವೇ—ಪಾರ್ಶ್ವತಃ। ಹೀಗೆ ಎಲ್ಲಾ ವಿಭಕ್ತಿಗಳಲ್ಲಿಯೂ ಬರುತ್ತದೆ. ಆದ್ಯಾದಿ ಆಕೃತಿಗಣ. ಇಲ್ಲಿ ಪಠಿತವಾಗದಿದ್ದರೂ ತಸಂತವಾಗಿ ದೃಷ್ಟವಾದ ಶಬ್ದಗಳು ಈ ಗಣದಲ್ಲಿ ಸೇರಿದವುಗಳೆಂದು ತಿಳಿಯಬೇಕು. ಸ್ವರೇಣ—ಸ್ವರತಃ। ವರ್ಣೇನ—ವರ್ಣತಃ। ಇವು ಅಲ್ಲಿ ಹೇಳದಿದ್ದರೂ ಅಲ್ಲಿ ಸೇರಿವೆಯೆಂದು ತಿಳಿಯಬೇಕು.

ಚ್ವಿಪ್ರತ್ಯಯ ಹೇಳುವ ಸೂತ್ರ.

**೧೨೪೫. ಕೃಭ್ವಸ್ತಿಯೋಗೇ ಸಂಪದ್ಯಕರ್ತರಿ ಚ್ವಿಃ ॥ ೫-೪-೫೦ ॥**

**ವಾ ॥ (ಅಭೂತತದ್ಭಾವ ಇತಿ ವಕ್ತವ್ಯಮ್) ವಿಕಾರಾತ್ಮತಾಂ ಪ್ರಾಪ್ನುವತ್ಯಾಂ ಪ್ರಕೃತೌ ವರ್ತಮಾನಾತ್ ವಿಕಾರಶಬ್ದಾತ್ ಸ್ವಾರ್ಥೇ ಚ್ವಿರ್ವಾ ಸ್ಯಾತ್ಕರೋತ್ಯಾದಿಭಿರ್ಯೋಗೇ ॥**

ತ್ರಿಪದ ಸೂತ್ರ. ಅಭೂತತದ್ಭಾವದಲ್ಲಿ ಈ ಪ್ರತ್ಯಯ ಹೇಳಬೇಕೆಂದು ವಾರ್ತಿಕ ವಿರುವುದರಿಂದ ಅದನ್ನು ಸೇರಿಸಿ ಸೂತ್ರಾರ್ಥ ಹೇಳಬೇಕು. ಯಾವ ರೂಪದಿಂದ ಹಿಂದೆ ಇರಲಿಲ್ಲವೋ ಈಗ ಆ ರೂಪ ಪ್ರಾಪ್ತಿ ಇದ್ದರೆ ಅದಕ್ಕೆ ಅಭೂತತದ್ಭಾವವೆಂದು ಹೆಸರು. ಸಂಪದ್ಯಸ್ಯ ಕರ್ತಾ. ತಸ್ಮಿನ್. ಹೊಂದುವುದರಲ್ಲಿ ಕರ್ತೃವೆಂದರ್ಥ. ಯಾವ ರೂಪದಿಂದ ಯಾವುದಕ್ಕೆ ಹೊಂದುವಿಕೆಯೆಂದರೆ, ಅಭೂತತದ್ಭಾವದಲ್ಲಿ ಎಂದು ಅನ್ವಯ. ಪ್ರಕೃತಿಯು ವಿಕಾರರೂಪವಾಗಿ ಪರಿಣತವಾಗುವುದು. **ಸೂತ್ರಾರ್ಥ—** ಅಭೂತತದ್ಭಾವವನ್ನು ಹೇಳುವಾಗ ಸಂಪತ್ತಿಯಲ್ಲಿ (ಪರಿಣತಿ) ಕರ್ತೃವಾದ ಪ್ರಾತಿ ಪದಿಕದ ಮೇಲೆ ಕೃ, ಭೂ, ಅಸ್ ಧಾತುಗಳ ಸಂಬಂಧವಿರುವಾಗ ಚ್ವಿಪ್ರತ್ಯಯ ಬರುತ್ತದೆ. ವಿಕಾರವನ್ನು ಹೊಂದುವ ಪ್ರಕೃತಿಯನ್ನು ಹೇಳುವ ವಿಕಾರವಾಚಕಪದದ ಮೇಲೆ ಸ್ವಾರ್ಥದಲ್ಲಿ ಈ ಪ್ರತ್ಯಯವೆಂದರ್ಥ. ಚ್ವಿಯಲ್ಲಿ ಇಕಾರ ಉಚ್ಚಾರಣಾರ್ಥ. 'ಚುಟೂ' ಸೂತ್ರದಿಂದ ಚಕಾರ ಇತ್. ವ್ ಉಳಿಯುತ್ತದೆ. ಕಪ್ಪಾಗದಿರುವುದನ್ನು ಈಗ ಕಪ್ಪನ್ನಾಗಿ ಮಾಡುತ್ತಾನೆ ಎಂಬರ್ಥದಲ್ಲಿ ಅಭೂತತದ್ಭಾವ ತೋರುತ್ತದೆ. ವಿಕಾರವಾಚಕಪದ ಕೃಷ್ಣ. ಇದು ಮೊದಲು ಅಕೃಷ್ಣವಾದ ವಸ್ತುವನ್ನು ಹೇಳಿದೆ. ಇದರಮೇಲೆ ಚ್ವಿ ಬಂದಾಗ ಈತ್ವ ಹೇಳುತ್ತಾನೆ.

ಚ್ವಿಪರವಾದಾಗ ಈತ್ವ ಹೇಳುವ ಸೂತ್ರ.

೧೨೮೭. ಅಸ್ಯ ಚ್ವೌ ॥ ೭-೪-೩೨ ॥

**ಅವರ್ಣಸ್ಯ ಈತ್ ಸ್ಯಾತ್ ಚ್ವೌ । ವೇರ್ಲೋಪೇ ಚ್ವ್ಯಂತತ್ವಾದ್ ಅವ್ಯಯತ್ವಮ್ । ಅಕೃಷ್ಣಃ ಕೃಷ್ಣಃ ಸಂಪದ್ಯತೇ ತಂ ಕರೋತಿ ಕೃಷ್ಣೀ-ಕರೋತಿ । ಬ್ರಹ್ಮೀಭವತಿ । ಗಙ್ಗೀಸ್ಯಾತ್ ।**

**ವಾ ॥ (ಅವ್ಯಯಸ್ಯ ಚ್ವಾವೀತ್ವಂ ನೇತಿ ವಾಚ್ಯಮ್) ದೋಷಾ-ಭೂತಮಹಃ । ದಿವಾಭೂತಾ ರಾತ್ರಿಃ ॥**

ದ್ವಿಪದ ಸೂತ್ರ. 'ಈಘ್ರಾಧ್ಮೋಃ' ಸೂತ್ರದಿಂದ 'ಈ' ಅನುವೃತ್ತಿ. ಅಕಾರಕ್ಕೆ ಚ್ವಿಪರಲ್ಲಿರುವಾಗ ಈತ್ವ ಬರುತ್ತದೆ. ಅಕೃಷ್ಣವಾದದ್ದು ಕೃಷ್ಣವಾಗುತ್ತದೆ (ಅಭೂತತದ್ಭಾವ) ಅದನ್ನು ಮಾಡುತ್ತಾನೆ. ಕೃಷ್ಣ + ವ್ + ಕರೋತಿ. 'ವೇರ ಪೃಕ್ತಸ್ಯ' ಸೂತ್ರದಿಂದ ವಕಾರಕ್ಕೆ ಲೋಪ. ಚ್ವಿಪರವಾದುದರಿಂದ ಈತ್ವ ಬಂದರೆ ಕೃಷ್ಣೀಕರೋತಿ ಎಂದಾಗುತ್ತದೆ. ಚ್ವ್ಯಂತವಾದುದರಿಂದ ಅವ್ಯಯವಾಗುತ್ತದೆ. ಕೃಷ್ಣನಾಗದಿರುವವನು ಕೃಷ್ಣನ ವೇಷವನ್ನು ಹೊಂದುವಾಗಲೂ ಕೃಷ್ಣೀಕರೋತಿ ಎಂದು ರೂಪವಾಗುತ್ತದೆ. ಅಬ್ರಹ್ಮ ಬ್ರಹ್ಮ ಸಂಪದ್ಯಮಾನಂ ಭವತಿ, ಬ್ರಹ್ಮೀಭವತಿ । ಬ್ರಹ್ಮನ್ ಶಬ್ದದಮೇಲೆ ಚ್ವಿಪ್ರತ್ಯಯ. ನ ಗಂಗಾ, ಅಗಂಗಾ । ಅಗಂಗಾ, ಗಂಗಾ ಸಂಪದ್ಯಮಾನಾ ಸ್ಯಾತ್ ಗಂಗೀಸ್ಯಾತ್ ।

ವಾ ‖ ಅವ್ಯಯಕ್ಕೆ ಚ್ವಿಪರದಲ್ಲಿರುವಾಗ ಅಕಾರಕ್ಕೆ ಈಕಾರಾದೇಶ ಬರುವುದಿಲ್ಲ. ದೋಷಾ ಆಕಾರಾಂತ ಅವ್ಯಯ. ಅದೋಷಾ ದೋಷಾ ಸಂಪದ್ಯಮಾನಂ ಭೂತವ್, ದೋಷಾಭೂತವ್. ಹಗಲು ಮೇಘಾದಿಗಳಿಂದ ಕೂಡಿರುವುದರಿಂದ ರಾತ್ರಿಯಂತಾಗಿದೆ. ಹೀಗೆ ದಿವಾ ಆಕಾರಾಂತ ಅವ್ಯಯ. ದಿವಾಭೂತಾ ರಾತ್ರಿಃ | ಹಗಲಲ್ಲದೇ ಇರುವ ರಾತ್ರಿ ಹಗಲಾಗಿದೆ. ಬೆಳದಿಂಗಳು ಚನ್ನಾಗಿರುವುದರಿಂದ ಹಗಲಿನಂತಾಗಿದೆ ಎಂದರ್ಥ.

ಚ್ವಿ ವಿಷಯದಲ್ಲಿ ಸಾತಿ ಪ್ರತ್ಯಯ ಹೇಳುವ ಸೂತ್ರ.

**೧೨೪೭. ವಿಭಾಷಾ ಸಾತಿ ಕಾರ್ತ್ಸ್ನ್ಯೇ ‖ ೫-೪-೫೨ ‖**

**ಚ್ವಿವಿಷಯೆ ಸಾತಿರ್ವಾ ಸ್ಯಾತ್ಸಾಕಲ್ಯೇ ‖**

ತ್ರಿಪದ ಸೂತ್ರ. ಅಭೂತತದ್ಭಾವೇ, ಸಂಪದ್ಯಕರ್ತರಿ, 'ಕೃಭ್ವಸ್ತಿಯೋಗೇ' ಅನುವೃತ್ತವಾಗುತ್ತದೆ. **ಸೂತ್ರಾರ್ಥ**—ಅಭೂತತದ್ಭಾವಾರ್ಥ ತೋರುವಾಗ ಸಂಪತ್ತಿಯಲ್ಲಿ ಕರ್ತೃಭೂತವಾದ ಪ್ರಾತಿಪದಿಕದ ಮೇಲೆ ಕೃ, ಭೂ, ಅಸ್ ಯೋಗವಿರುವಾಗ ಸಾತಿ ಪ್ರತ್ಯಯ ವಿಕಲ್ಪವಾಗಿ ಬರುತ್ತದೆ. ಸಾತಿಯಲ್ಲಿ ಇಕಾರ ಉಚ್ಚಾರಣಾರ್ಥ. ಕೃತ್ಸ್ನಂ ಶಸ್ತ್ರಮಗ್ನಿಃ ಸಂಪದ್ಯತೇ ಎಂದು ಮುಂದೆ ಉದಾಹರಿಸುತ್ತಾನೆ. ಅಗ್ನಿ ಸಂಬಂಧವಿಲ್ಲದಿರುವ ಶಸ್ತ್ರವು ಈಗ ಅಗ್ನ್ಯಧೀನವಾಗುತ್ತದೆ. ಅಗ್ನಿ + ಸಾತ್ ಎಂದಿರುವಾಗ ಪ್ರತ್ಯಯ ಸಕಾರವಾದುದರಿಂದ 'ಆದೇಶಪ್ರತ್ಯಯಯೋಃ' ಸೂತ್ರದಿಂದ ಷತ್ವ ಪ್ರಾಪ್ತವಾದರೆ ಅದಕ್ಕೆ ನಿಷೇಧ ಹೇಳುತ್ತಾನೆ.

ಷತ್ವನಿಷೇಧ ಹೇಳುವ ಸೂತ್ರ.

**೧೨೪೮. ಸಾತ್ಪದಾದ್ಯೋಃ ‖ ೮-೩-೧೧೧ ‖**

**ಸಸ್ಯ ಷತ್ವಂ ನ ಸ್ಯಾತ್ | ಕೃತ್ಸ್ನಂ ಶಸ್ತ್ರಮಗ್ನಿಃ ಸಂಪದ್ಯತೇ ಅಗ್ನಿಸಾದ್ಭವತಿ | ದಧಿ ಸಿಂಚತಿ ‖**

ಏಕಪದ ಸೂತ್ರ. 'ಅಪದಾಂತಸ್ಯ ಮೂರ್ಧನ್ಯಃ' ಅಧಿಕಾರ. 'ನರಪರ—' ಸೂತ್ರದಿಂದ ನ ಅನುವೃತ್ತಿ. **ಸೂತ್ರಾರ್ಥ**—ಸಾತ್‌ಸಂಬಂಧಿ ಸಕಾರಕ್ಕೂ ಪದಾದಿಯಲ್ಲಿರುವ ಸಕಾರಕ್ಕೂ ಷತ್ವ ಬರುವುದಿಲ್ಲ. ಪ್ರಕೃತ ಇಣಿನ ಪರದಲ್ಲಿದ್ದರೂ ಸಾತಿನ ಸಕಾರವಾದುದರಿಂದ ನಿಷೇಧ ಬಂದರೆ ಅಗ್ನಿಸಾತ್ ಎಂದೇ ಇರುತ್ತದೆ. ಪದಾದಿ ಸಕಾರಕ್ಕೆ—ದಧಿ + ಸಿಂಚತಿ | ಇಲ್ಲಿಯೂ ಪದಾದಿಯಲ್ಲಿ ಬಂದುದರಿಂದ ಷತ್ವವಿಲ್ಲ. ಸಾತಿಪ್ರತ್ಯಯ ಬಾರದಿದ್ದರೆ ಹಿಂದಿನ ಸೂತ್ರದಿಂದ ಚ್ವಿಪ್ರತ್ಯಯ. ಅನಗ್ನಿಃ ಅಗ್ನಿಃ ಸಂಪದ್ಯಮಾನಃ ಭವತಿ | ಅಗ್ನಿಭವತಿ ಎಂದಿರುವಾಗ ದೀರ್ಘ ಹೇಳುತ್ತಾನೆ.

ಚ್ವಿಪರವಾದಾಗ ದೀರ್ಘ ಹೇಳುವ ಸೂತ್ರ.

೧೨೪೯. ಚ್ವೌ ಚ || ೭-೪-೨೬ ||

**ಚ್ವೌ ಪರೇ ಪೂರ್ವಸ್ಯ ದೀರ್ಘಃ ಸ್ಯಾತ್ । ಅಗ್ನೀಭವತಿ ||**

ದ್ವಿಪದ ಸೂತ್ರ. 'ಅಕೃತ್ಸಾರ್ವಧಾತುಕಯೋಃ ದೀರ್ಘಃ' ಸೂತ್ರದಿಂದ 'ದೀರ್ಘಃ' ಅನುವೃತ್ತಿ. ಚ್ವಿಪ್ರತ್ಯಯ ಪರದಲ್ಲಿರುವಾಗ ಪೂರ್ವಕ್ಕೆ ದೀರ್ಘ ಬರುತ್ತದೆ. ಪ್ರಕೃತ ಅಗ್ನಿ ಶಬ್ದಕ್ಕೆ ದೀರ್ಘ ಬಂದರೆ ಅಗ್ನೀಭವತಿ ಎಂದಾಗುತ್ತದೆ.

ಡಾಚ್ ಪ್ರತ್ಯಯ ವಿಧಿಸುವ ಸೂತ್ರ.

**೧೨೫೦. ಅವ್ಯಕ್ತಾನುಕರಣಾದ್ದ್ವ್ಯಜವರಾರ್ಧಾದನಿತೌ ಡಾಚ್ || ೫-೪-೫೭ ||**

**ದ್ವ್ಯಜೇವಾವರಂ ನ್ಯೂನಂ ನ ತು ತತೋ ನ್ಯೂನಮೇಕಾಜಿತಿ ಯಾವತ್ । ತಾದೃಶಮರ್ಧಂ ಯಸ್ಯ ತಸ್ಮಾಡ್ಡಾಚ್ ಸ್ಯಾತ್ ಕೃಭ್ವಸ್ತಿಭಿರ್ಯೋಗೇ ।**

**ವಾ || (ಡಾಚಿ ವಿವಕ್ಷಿತೇ ದ್ವೇ ಬಹುಲಮ್ ।) ಇತಿ ಡಾಚಿ ವಿವಕ್ಷಿತೇ ದ್ವಿತ್ವಮ್ || ವಾ || (ನಿತ್ಯಮಾಮ್ರೇಡಿತೇ ಡಾಚೀತಿ ವಕ್ತವ್ಯಮ್) ಡಾಚ್ ಪರಂ ಯದಾಮ್ರೇಡಿತಂ ತಸ್ಮಿನ್ ಪರೇ ಪೂರ್ವಪರಯೋರ್ವರ್ಣಯೋಃ ಪರರೂಪಂ ಸ್ಯಾತ್ । ಇತಿ ತಕಾರಪಕಾರಯೋಃ ಪಕಾರಃ । ಪಟಾಪಟಾಕರೋತಿ । ಅವ್ಯಕ್ತಾನುಕರಣಾತ್ ಕಿಮ್ ? ಈಷತ್ಕರೋತಿ । ದ್ವ್ಯಜವರಾರ್ಧಾತ್ಕಿಮ್ ? ಶ್ರತ್ಕರೋತಿ । ಅವರೇತಿ ಕಿಮ್ ? ಖರಟಖರಟಾಕರೋತಿ । ಅನಿತೌ ಕಿಮ್ ? ಪಟಿತಿ ಕರೋತಿ ||**

ಇತಿ ಸ್ವಾರ್ಥಿಕಾಃ || ೧೬ ||

|| ಇತಿ ತದ್ಧಿತಾಃ ||

ನಾಲ್ಕು ಪದಗಳುಳ್ಳ ಸೂತ್ರ. ದ್ವ್ಯಜವರಪದಾರ್ಥವನ್ನು ವಿವರಿಸಿರುತ್ತಾನೆ. ಕಡಿಮೆಯೆಂದರೆ ಎರಡು ಅಚ್ ಇರುವುದು. ಅದರಿಂದ ಕಡಿಮೆಯಾಗಬಾರದು ಅಂದರೆ ಏಕಾಚ್ ಆಗಬಾರದು. ಎರಡು ಅಚ್ ಅಥವಾ ಅದಕ್ಕಿಂತ ಹೆಚ್ಚಿನ ಅಚ್ ಇರುವ ಪದವೇ ಅರ್ಧವಾಗಿರುವುದು ದ್ವ್ಯಜವರಾರ್ಧ. **ಸೂತ್ರಾರ್ಥ**—ಅನೇಕಾಚ್ ಉಳ್ಳ ಅರ್ಧಭಾಗವುಳ್ಳ ಅವ್ಯಕ್ತವಾದ ಅನುಕರಣವನ್ನು ಹೇಳುವ ಶಬ್ದದಮೇಲೆ ಕೃ, ಭೂ, ಅಸ್ ಧಾತುಗಳ ಸಂಬಂಧವಿರುವಾಗ ಡಾಚ್ ಪ್ರತ್ಯಯ ಬರುತ್ತದೆ; ಇತಿ ಶಬ್ದ ಪರದಲ್ಲಿದ್ದರೆ ಬರುವುದಿಲ್ಲ.

ವಾ || ಡಾಚ್ ವಿವಕ್ಷಾಮಾಡಿದಾಗ ಶಬ್ದಸ್ವರೂಪಕ್ಕೆ ದ್ವಿತ್ವ ಹೇಳಬೇಕು. ಪಟತ್ ಅವ್ಯಕ್ತಾನುಕರಣ ಶಬ್ದ. ಇದು ಒಂದು ವಸ್ತು ಬಿದ್ದಿರುವ ಧ್ವನಿಯನ್ನು ಅನುಕರಿಸುತ್ತದೆ. ಅದಕ್ಕೆ ಡಾಚ್ ಮಾಡಬೇಕೆಂದಿರುವುದರಿಂದ ಮೊದಲು ದ್ವಿತ್ವ. ಪಟತ್‌ಪಟತ್. ಇಲ್ಲಿ ಅರ್ಧ ಪಟತ್. ಇಲ್ಲಿ ಎರಡು ಅಚ್‌ಗಳಿವೆ. ಎರಡಕ್ಕಿಂತಲೂ ಕಡಿಮೆಯಿಲ್ಲ. ಇದು ಅರ್ಧವಾಗಿರುವ ಶಬ್ದ ಪಟತ್‌ಪಟತ್. ಇದರಮೇಲೆ ಡಾಚ್. ಪಟತ್‌ಪಟತ್ + ಡಾಚ್ + ಕರೋತಿ. ಡಾಚಿನಲ್ಲಿ ಆ ಉಳಿಯುತ್ತದೆ. ದ್ವಿತ್ವ ಬಂದಲ್ಲಿ ಪರಕ್ಕೆ 'ತಸ್ಯ ಪರಮಾಮ್ರೇಡಿತಮ್' ಸೂತ್ರದಿಂದ ಆಮ್ರೇಡಿತ ಸಂಜ್ಞೆ ಬರುತ್ತಿರುವಾಗ ಪರರೂಪ ಹೇಳುತ್ತಾನೆ.

ವಾ || ಡಾಚ್ ಪರದಲ್ಲಿರುವ ಆಮ್ರೇಡಿತವು ಪರದಲ್ಲಿರುವಾಗ ಪೂರ್ವಪರವರ್ಣ ಗಳಿಗೆ ಪರರೂಪವು ಏಕಾದೇಶವಾಗಿ ಬರುತ್ತದೆ. 'ಏಕಃ ಪೂರ್ವಪರಯೋಃ' ಅಧಿಕಾರದಲ್ಲಿ ಇದು ಹೇಳಿದೆ. ಪಟತ್‌ಪಟತ್ + ಆ + ಕರೋತಿ. ತ್ ಮತ್ತು ಪಕಾರಗಳಿಗೆ ಪರದ ಪಕಾರವು ಏಕಾದೇಶವಾಗಿ ಬಂದರೆ ಪಟಪಟತ್ + ಆ + ಕರೋತಿ ಎಂದಿರುವಾಗ ಡಿತ್ತಾದ ಪ್ರತ್ಯಯ ಪರವಾದುದರಿಂದ ಟ(ಅತ್)ಲೋಪ. ಪಟಪಟಾ-ಕರೋತಿ. ಸೂತ್ರದಲ್ಲಿರುವ ಪದಗಳಿಗೆ ಸಾರ್ಥಕ್ಯ ತೋರಿಸುತ್ತಾನೆ. ಅವ್ಯಕ್ತಾನುಕರಣ ಶಬ್ದವಾಗಬೇಕೆಂದುದೇಕೆ? ಈಷತ್‌ಕರೋತಿ. ಈಷತ್ ಅವ್ಯಕ್ತಾನುಕರಣ ಶಬ್ದವಲ್ಲ. ಸ್ವಲ್ಪವೆಂದರ್ಥ. ಇಲ್ಲಿ ಡಾಚ್ ಬರುವುದಿಲ್ಲ. ದ್ವ್ಯಜವರಾರ್ಧವಾಗಿದೆ. ದ್ವ್ಯಜವ ರಾರ್ಧವೆಂದುದೇಕೆ? ಶ್ರತ್‌ಕರೋತಿ. ಶ್ರತ್ ಅವ್ಯಕ್ತಾನುಕರಣ ಶಬ್ದ. ಇದಕ್ಕೆ ದ್ವಿತ್ವ ಬಂದಾಗ ಅರ್ಧ ಏಕಾಚೇ ಆಗುವುದರಿಂದ ಇಲ್ಲಿ ಡಾಚ್ ಬರುವುದಿಲ್ಲ. ಅವರ= ಕಡಿಮೆ ಎಂದರೆ ಎರಡು ಅಚ್ ಎಂದುದೇಕೆ? ಎರಡಕ್ಕಿಂತ ಹೆಚ್ಚಾಗಿದ್ದರೂ ಡಾಚ್ ಬರುತ್ತದೆ. ಎರಡು ಅಚ್ ಉಳ್ಳ ಅರ್ಧ ಭಾಗವೆಂದಿದ್ದರೆ ಎರಡಕ್ಕಿಂತ ಹೆಚ್ಚಾಗಿರುವ ಸ್ಥಳದಲ್ಲಿ ಬಾರದೇ ಹೋಗಬೇಕಾಗುತ್ತದೆ. ಖರಟಖರಟಾಕರೋತಿ. ಖರಟತ್ ಅವ್ಯಕ್ತಾನುಕರಣಶಬ್ದ. ಇಲ್ಲಿ ಅರ್ಧ ಮೂರು ಅಚ್‌ಗಳಿಂದ ಕೂಡಿದೆ. ಡಾಚ್ ಇಲ್ಲಿಯೂ ಬರುವುದಕ್ಕೋಸ್ಕರ ಕಡಿಮೆಯೆಂದರೆ ಎರಡು ಅಚ್ ಇರಬೇಕೆಂದು ಹೇಳಿದೆ. ಇತಿ ಶಬ್ದ ಪರದಲ್ಲಿರಬಾರದೆಂದುದೇಕೆ? ಪಟತಿ ಕರೋತಿ। ಇಲ್ಲಿ ಇತಿ ಶಬ್ದ ಪರದಲ್ಲಿರುವುದರಿಂದ ಡಾಚ್ ಬರುವುದಿಲ್ಲ. ಹೀಗೆ ತದ್ಧಿತದಲ್ಲಿ ಸ್ವಾರ್ಥಿಕವೆಂಬ ಹದಿನಾರನೆಯ ಪ್ರಕರಣವು ಮುಗಿದಿದೆ.

ತದ್ಧಿತಪ್ರಕರಣ ಮುಗಿದಿದೆ.

# ೩೯. ಅಥ ಸ್ತ್ರೀಪ್ರತ್ಯಯಾಃ

ಅಧಿಕಾರಸೂತ್ರ.

೧೨೫೧. ಸ್ತ್ರಿಯಾಮ್ || ೪-೧-೩ ||

**ಅಧಿಕಾರೋಽಯಮ್ । ಸಮರ್ಥಾನಾಮಿತಿ ಯಾವತ್ ||**

ಸಾಮಾನ್ಯವಾಗಿ ಸ್ತ್ರೀಪ್ರತ್ಯಯಗಳು ಕೃದಂತ, ತದ್ಧಿತಾಂತ, ಸಮಾಸಗಳ ಮೇಲೆಯೇ ಬರುವುದರಿಂದ ಅವುಗಳನ್ನು ಮೊದಲು ಹೇಳಿ ಈಗ ಸ್ತ್ರೀಪ್ರತ್ಯಯ ಹೇಳಲು ಆರಂಭಿಸಿರುತ್ತಾನೆ. ಇದು ಅಧಿಕಾರಸೂತ್ರ. 'ಸಮರ್ಥಾನಾಂ ಪ್ರಥಮಾದ್ವಾ' ಸೂತ್ರದವರೆಗೆ ಈ ಅಧಿಕಾರಕ್ಕೆ ಸಂಬಂಧ. ಅಲ್ಲಿಯವರೆಗೆ ವಿಹಿತವಾಗುವ ಪ್ರತ್ಯಯಗಳು ಸ್ತ್ರೀತ್ವದಲ್ಲಿ ಬರುತ್ತವೆಯೆಂದು ತಿಳಿಯಬೇಕು.

ಟಾಪ್ ಪ್ರತ್ಯಯ ಹೇಳುವ ಸೂತ್ರ.

೧೨೫೨. ಅಜಾದ್ಯತಷ್ಟಾಪ್ || ೪-೧-೪ ||

**ಅಜಾದೀನಾಮಕಾರಾಂತಸ್ಯ ಚ ವಾಚ್ಯಂ ಯತ್ ಸ್ತ್ರೀತ್ವಂ ತತ್ರ ದ್ಯೋತ್ಯೇ ಟಾಪ್ ಸ್ಯಾತ್ । ಅಜಾ । ಏಡಕಾ । ಅಶ್ವಾ । ಚಟಕಾ । ಮೂಷಿಕಾ । ಬಾಲಾ । ವತ್ಸಾ । ಹೋಡಾ । ಮನ್ದಾ । ವಿಲಾತಾ । ಇತ್ಯಾದಿ || ಮೇಧಾ । ಗಂಗಾ । ಸರ್ವಾ ||**

ಅಜಾದ್ಯತಃ, ಟಾಪ್ || ದ್ವಿಪದ ಸೂತ್ರ. ಅಜಃ ಆದಿಃ ಯೇಷಾಂ ತೇ ಅಜಾದಯಃ । ಅಜಾದಯಶ್ಚ ಅತ್ ಚ ತೇಷಾಂ ಸಮಾಹಾರಃ ಅಜಾದ್ಯತ್. ತಸ್ಮಾತ್. 'ಜ್ಯಾಪ್ ಪ್ರಾತಿಪದಿಕಾತ್' ಸೂತ್ರದಿಂದ ಪ್ರಾತಿಪದಿಕಾತ್ ಅನುವೃತ್ತಿ. ಅತ್ ಆದಕ್ಕೆ ವಿಶೇಷಣವಾದುದರಿಂದ ತದಂತಲಾಭ **ಸೂತ್ರಾರ್ಥ**—ಅಜಾದಿಗಣ ಪಠಿತವಾದ ಪ್ರಾತಿಪದಿಕದಿಂದಲೂ, ಅದಂತವಾದ ಪ್ರಾತಿಪದಿಕದಿಂದಲೂ ವಾಚ್ಯವಾದ ಲಿಂಗವು ಯಾವ ಸ್ತ್ರೀತ್ವವಿದೆಯೋ ಅದು ಪ್ರಕಾಶಿತವಾಗುವಾಗ ಟಾಪ್ ಬರುತ್ತದೆ. ಲಿಂಗವು ಪ್ರಾತಿಪದಿಕದಿಂದಲೇ ವಾಚ್ಯವಾಗುತ್ತದೆ. ಅದನ್ನು ಟಾಬಾದಿಗಳು ವ್ಯಕ್ತಪಡಿಸುತ್ತವೆ. ಅಜಾದಿಗಳು ಅದಂತವಾದರೂ ಅವು ಜಾತಿವಾಚಕವಾದುದರಿಂದ ಮುಂದೆ ಜಾತಿವಾಚಕ ಪ್ರಾತಿಪದಿಕಗಳಿಗೆ ಙೀಷ್ ಹೇಳುವುದರಿಂದ ಙೀಷನ್ನು ಬಾಧಿಸಿ ಇವುಗಳಿಗೆ ಟಾಪೇ ಬರುತ್ತದೆಂದು ತಿಳಿಸಲು ಪುನಃ ಹೇಳಿರುತ್ತಾನೆ. ಅಜ+ಟಾಪ್. ಟಾಪಿನಲ್ಲಿ ಆ ಉಳಿಯುತ್ತದೆ. 'ಯಸ್ಯೇತಿ ಚ' ಅಲೋಪ. ಅಜಾ. ಇದರಮೇಲೆ ಸು ಬಂದಾಗ 'ಹಲ್‌ಙ್ಯಾಭ್ಯೋ ದೀರ್ಘಾತ್—' ಸೂತ್ರದಿಂದ ಲೋಪ. ಅಜಾ. ಅಜಾದಿಗಣದಲ್ಲಿ ಹೇಳಿದ ಶಬ್ದಗಳಿಗೆ ಟಾಪ್. ಏಡಕಾ (ಹೆಣ್ಣುಕುರಿ) ಇತ್ಯಾದಿ. ಚಟಕಾ=ಹೆಣ್ಣು

ಗುಬ್ಬಚ್ಚಿ. ಮೂಷಿಕಾ=ಹೆಣ್ಣು ಇಲಿ. ಬಾಲಾದಿಶಬ್ದಗಳು ಮೊದಲನೇ ವಯಸ್ಸಿನ ಸ್ತ್ರೀಯನ್ನು ತಿಳಿಸುತ್ತವೆ. 'ವಯಸಿ ಪ್ರಥಮೇ' ಸೂತ್ರದಿಂದ ಬರುವ ಙೀಷಿಗೆ ಅಪವಾದವಾಗಿ ಇಲ್ಲಿ ಹೇಳಿದೆ. ಅದಂತಕ್ಕೆ ಉದಾಹರಣೆ. ಮೇಧಾ ಇತ್ಯಾದಿ.

ಉಗಿತ್ ಪ್ರಾತಿಪದಿಕಕ್ಕೆ ಙೀಪ್ ಹೇಳುವ ಸೂತ್ರ.

**೧೨೫೩. ಉಗಿತಶ್ಚ ‖ ೪-೧-೬ ‖**

**ಉಗಿದನ್ತಾತ್ಪ್ರಾತಿಪದಿಕಾತ್ ಸ್ತ್ರಿಯಾಂ ಙೀಪ್ ಸ್ಯಾತ್ । ಭವತೀ । ಭವನ್ತೀ । ಪಚನ್ತೀ । ದೀವ್ಯನ್ತೀ ‖**

ದ್ವಿಪದ ಸೂತ್ರ. ಉಕ್ ಪ್ರತ್ಯಾಹಾರ. ಉಕ್ ಇತ್ ಯಸ್ಯ ಸಃ ಉಗಿತ್. ತಸ್ಮಾತ್. ಪ್ರಾತಿಪದಿಕಕ್ಕೆ ಅದು ವಿಶೇಷಣವಾದುದರಿಂದ ತದಂತಲಾಭ. 'ಋನ್ನೇಭ್ಯೋ ಙೀಪ್' ಸೂತ್ರದಿಂದ ಙೀಪ್ ಅನುವೃತ್ತಿ. **ಸೂತ್ರಾರ್ಥ**—ಉಗಿದಂತವಾದ ಪ್ರಾತಿಪದಿಕದಮೇಲೆ ಸ್ತ್ರೀತ್ವದಲ್ಲಿ ಙೀಪ್ ಬರುತ್ತದೆ. ಉಗಿತ್ ಪ್ರಾತಿಪದಿಕವೂ, ಪ್ರತ್ಯಯವೂ ಆಗುತ್ತದೆ. ಪ್ರಾತಿಪದಿಕಕ್ಕೆ—ಭವತೀ. ಸರ್ವಾದಿಗಣದಲ್ಲಿ ಭವತು ಎಂಬ ಅವ್ಯುತ್ಪನ್ನ ಪ್ರಾತಿಪದಿಕ ಹೇಳಿದೆ. ಅಲ್ಲಿ ಉಕಾರ ಇತ್. ಭವತ್+ಙೀಪ್. ಙೀಪಿನಲ್ಲಿ ಈ ಉಳಿಯುತ್ತದೆ. ಭವತೀ. ವ್ಯಪದೇಶಿವದ್ಭಾವದಿಂದ ಉಗಿದಂತ ಪ್ರಾತಿಪದಿಕವೂ ಇದೇ ಆಗುತ್ತದೆ. ಉಗಿತ್ ಪ್ರತ್ಯಯಕ್ಕೆ—ಭವನ್ತೀ. ಭೂ ಧಾತುವಿಗೆ ಶತೃಪ್ರತ್ಯಯ. ಭೂ+ಅತ್. ಶಪ್. ಭೂ+ಅ+ಅತ್. 'ಸಾರ್ವಧಾತುಕಾರ್ಧಧಾತುಕಯೋಃ' ಗುಣ, ಅವಾದೇಶ. ಪರರೂಪ. ಭವತ್. ಶತೃ (ಋ) ಉಗಿತ್ತಾಗಿದೆ. ಭವತ್+ಈ. 'ಶ್ಯಪ್ಶ್ಯನೋರ್ನಿತ್ಯಮ್' ಸೂತ್ರದಿಂದ ನುಮಾಗಮ. ಭವನ್ತೀ (ಆಗುವವಳು). ಪಚ್+ಅ+ಅತ್. ಪಚತ್+ಈ. ನುಮ್. ಪಚನ್ತೀ. ದೀವ್ಯತ್+ಈ. ದೀವ್ಯನ್ತೀ (ಪ್ರಕಾಶಿಸುವವಳು).

ಟಿದಾದ್ಯಂತಕ್ಕೆ ಙೀಪ್ ಹೇಳುವ ಸೂತ್ರ.

**೧೨೫೪. ಟಿಡ್ಢಾಣಞ್ದ್ವಯಸಜ್ದಘ್ನಞ್ಮಾತ್ರಚ್ತಯಪ್ಠಕ್-ಠಞ್ಕಞ್ಕ್ವರಪಃ ‖ ೪-೧-೧೫ ‖**

**ಅನುಪಸರ್ಜನಂ ಯಟ್ಟಿದಾದಿ ತದನ್ತಂ ಯದದನ್ತಂ ಪ್ರಾತಿಪದಿಕಂ ತತಃ ಸ್ತ್ರಿಯಾಂ ಙೀಪ್ ಸ್ಯಾತ್ । ಕುರುಚರೀ । ನದಟ್ ನದೀ । ದೇವಟ್ ದೇವೀ । ಸೌಪರ್ಣೇಯೀ । ಐನ್ದ್ರೀ । ಔತ್ಸೀ । ಊರುದ್ವಯಸೀ । ಊರುದಘ್ನೀ । ಊರುಮಾತ್ರೀ । ಪಂಚತಯೀ । ಆಕ್ಷಿಕೀ । ಲಾವಣಿಕೀ । ಯಾದೃಶೀ । ಇತ್ವರೀ ।**

ವಾ॥ (ನಞ್‌ಸ್ನಞೀಕಕ್‌ಖ್ಯುಂಸ್ತರುಣತಲುನಾನಾಮುಪಸಂ- ಖ್ಯಾನಮ್) ಸ್ತ್ರೈಣೀ। ಪೌಂಸ್ನೀ। ಶಾಕ್ತೀಕೀ। ಯಾಷ್ಟೀಕೀ। ಆಢ್ಯ- ಙ್ಕರಿಣೀ। ತರುಣೀ। ತಲುನೀ॥

ಏಕಪದ ಸೂತ್ರ. ಟಿತ್, ಢ, ಅಣ್, ಅಞ್, ದ್ವಯಸಚ್, ದಘ್ನಚ್, ಮಾತ್ರಚ್, ತಯಪ್, ಠಕ್, ಠಞ್, ಕಞ್, ಕ್ವರಪ್ ಇವುಗಳಿಗೆ ಸಮಾಹಾರ ದ್ವಂದ್ವಮಾಡಿ ಅದರಮೇಲೆ ಪಂಚಮೀ ಹೇಳಿದೆ. 'ಸ್ತ್ರಿಯಾಮ್', 'ಅನುಪಸರ್ಜ ನಾತ್' ಅಧಿಕಾರ. ಟಿತ್ ಪ್ರತ್ಯಯ, ಶಬ್ದ ಎರಡೂ ಆಗುತ್ತದೆ. ಢಾದಿ ಹನ್ನೊಂದು ಪ್ರತ್ಯಯಗಳು. ಪ್ರತ್ಯಯಗ್ರಹಣಪರಿಭಾಷೆಯಿಂದ ತದಂತಲಾಭ. ಇವುಗಳು ಅಧಿ ಕೃತವಾದ ಪ್ರಾತಿಪದಿಕಕ್ಕೆ ವಿಶೇಷಣವಾದುದರಿಂದ ತದಂತಲಾಭ. 'ಅಜಾದ್ಯತಃ' ಸೂತ್ರದಿಂದ ಅನುವೃತ್ತವಾದ 'ಅತಃ' ಎಂಬುದು ಪ್ರಾತಿಪದಿಕಕ್ಕೆ ವಿಶೇಷಣವಾದುದ ರಿಂದ ಅದಂತಪ್ರಾತಿಪದಿಕವೆಂದು ಲಬ್ಧವಾಗುತ್ತದೆ. **ಸೂತ್ರಾರ್ಥ**—ಅನುಪಸರ್ಜನ ವಾದ ಯಾವ ಟಿದಾದಿಗಳಿವೆಯೋ ಅದೇ ಅಂತವಾದ ಯಾವ ಹ್ರಸ್ವಾಕಾರಾಂತ ಪ್ರಾತಿಪದಿಕವಿದೆಯೋ ಅದರಮೇಲೆ ಸ್ತ್ರೀತ್ವದಲ್ಲಿ ಙೀಪ್ ಬರುತ್ತದೆ. ಕುರುಷು ಚರತಿ ಇತಿ ಕುರುಚರೀ। 'ಚರೇಷ್ಟಃ' ಸೂತ್ರದಿಂದ ಚರ್ ಧಾತುವಿಗೆ ಟಪ್ರತ್ಯಯ. ಚರಃ ಇದು ಟಿತ್ತಾಗಿದೆ. ಇದೇ ಅಂತವಾದ ಅದಂತಪ್ರಾತಿಪದಿಕ ಕುರುಚರ. ಸ್ತ್ರೀಲಿಂಗದಲ್ಲಿ ಙೀಪ್ ಬಂದಾಗ 'ಯಸ್ಯೇತಿ ಚ' ಸೂತ್ರದಿಂದ ಅಕಾರಲೋಪ. ಕುರುಚರೀ= ಕುರುದೇಶದಲ್ಲಿ ತಿರುಗುವವಳು. ನದಟ್, ದೇವಟ್ ಇವು ಟಿತ್ತಾದ ಪ್ರಾತಿಪದಿಕ ಗಳು. ಅಲೋಪ ಬಂದು ನದೀ, ದೇವೀ ಎಂದಾಗುತ್ತವೆ. ಢಾಂತಕ್ಕೆ—'ಸ್ತ್ರೀಭ್ಯೋ ಢಕ್' ಸೂತ್ರದಿಂದ ಸುಪರ್ಣಾ ಶಬ್ದದಮೇಲೆ ಢಕ್. 'ಆಯನೇಯೀ—' ಸೂತ್ರ ದಿಂದ ಢಕ್ಕೆ ಏಯಾದೇಶ. ಸುಪರ್ಣಾ+ಏಯ. 'ಯಸ್ಯೇತಿ ಚ' ಆಲೋಪ. ಪ್ರತ್ಯಯ ಕಿತ್ತಾದುದರಿಂದ ಆದಿವೃದ್ಧಿ. ಸೌಪರ್ಣೇಯ. ಢಾಂತವಾದುದರಿಂದ ಙೀಪ್ ಬಂದರೆ ಸೌಪರ್ಣೇಯ+ಈ ಎಂದಿರುವಾಗ ಅಲೋಪ. ಸೌಪರ್ಣೇಯೀ (ಸುಪರ್ಣೆಯ ಮಗಳು). ಅಣಂತಕ್ಕೆ—ಇಂದ್ರಃ ದೇವತಾ ಅಸ್ಯ ಎಂಬರ್ಥದಲ್ಲಿ 'ಸಾಽಸ್ಯ ದೇವತಾ' ಸೂತ್ರದಿಂದ ಇಂದ್ರ ಶಬ್ದದ ಮೇಲೆ ಅಣ್. ಇಂದ್ರ+ಅ. ಆದಿವೃದ್ಧಿ, ಅಲೋಪ. ಐಂದ್ರ. ಸ್ತ್ರೀತ್ವವಿವಕ್ಷಾಮಾಡಿದಾಗ ಙೀಪ್. ಅಲೋಪ. ಐನ್ದ್ರೀ=ಇಂದ್ರದೇವತೆಯಾಗಿರುವ ಋಕ್ ಮುಂತಾದವು. ಅಞಂತಕ್ಕೆ— ಉತ್ಸಸ್ಯ ಇಯಮ್ ಎಂಬರ್ಥದಲ್ಲಿ 'ಉತ್ಸಾದಿಭ್ಯೋಽಞ್' ಸೂತ್ರದಿಂದ ಉತ್ಸ ಶಬ್ದದಮೇಲೆ ಅಞ್. ಆದಿವೃದ್ಧಿ, ಅಲೋಪ. ಔತ್ಸ. ಅಞಂತದಮೇಲೆ ಙೀಪ್. ಔತ್ಸೀ=ಉತ್ಸನ ಸ್ತ್ರೀ. ದ್ವಯಸಚ್, ದಘ್ನಚ್, ಮಾತ್ರಜಂತಕ್ಕೆ—ಊರೂ ಪ್ರಮಾಣಂ ಅಸ್ಯಾಃ ಎಂದು ಅರ್ಥವಿವಕ್ಷಾಮಾಡಿದಾಗ 'ಪ್ರಮಾಣೇ ದ್ವಯಸಜ್ ದಘ್ನಞ್‌ಮಾತ್ರಚಃ' ಸೂತ್ರದಿಂದ ದ್ವಯಸಚ್, ದಘ್ನಚ್, ಮಾತ್ರಚ್ ಪ್ರತ್ಯಯ. ಊರುದ್ವಯಸ+ಈ. ಅಲೋಪ. ಊರುದ್ವಯಸೀ. ಹೀಗೆ ಊರುದಘ್ನೀ, ಊರು

ಮಾತ್ರೀ (ತೊಡೆ ಪ್ರಮಾಣವುಳ್ಳವಳು) ಆಗುತ್ತದೆ. ತಯಬಂತಕ್ಕೆ—ಪಂಚ ಅವಯವಾಃ ಯಸ್ಯಾಃ ಸಾ | 'ಸಂಖ್ಯಾಯಾ ಅವಯವೇ ತಯಪ್' ಸೂತ್ರದಿಂದ ತಯಪ್. ಪಂಚತಯ + ಈ. ಅಲೋಪ. ಪಂಚತಯೀ = ಐದು ಭಾಗವುಳ್ಳದ್ದು. ಠಗಂತಕ್ಕೆ—ಅಕ್ಷೈರ್ದೀವ್ಯತಿ. 'ತೇನ ದೀವ್ಯತಿ ಖನತಿ ಜಯತಿ ಜಿತಮ್' ಸೂತ್ರದಿಂದ ಠಕ್. 'ಠಸ್ಯೇಕಃ' ಸೂತ್ರದಿಂದ ಅದಕ್ಕೆ ಇಕಾದೇಶ. ಕಿತ್ತಾದುದರಿಂದ ಆದಿ ವೃದ್ಧಿ. ಆಕ್ಷಿಕ + ಈ. ಆಕ್ಷಿಕೀ = ಪಗಡೆಯಾಡುವವಳು. ಠಞನ್ತಕ್ಕೆ–ಲವಣಂ ಪಣ್ಯಂ ಅಸ್ಯಾಃ | 'ಲವಣಾಟ್ಠಞ್' ಸೂತ್ರದಿಂದ ಲವಣ ಶಬ್ದದಮೇಲೆ ಠಞ್. ಇಕಾದೇಶ. ಆದಿವೃದ್ಧಿ. ಲಾವಣಿಕ + ಈ. ಲಾವಣಿಕೀ = ಉಪ್ಪನ್ನು ಮಾರುವವಳು. ಕಞನ್ತಕ್ಕೆ—'ತ್ಯದಾದಿಷು ದೃಶೋನಾಲೋಚನೇ ಕಞ್ಚ' ಸೂತ್ರದಿಂದ ಯಚ್ಛಬ್ದ ಉಪಪದವಾಗಿರುವಾಗ ದೃಶ್ ಧಾತುವಿಗೆ ಕಞ್. ಯದ್ + ದೃಶ್ + ಅ. 'ಆ ಸರ್ವನಾಮ್ನಃ' ಸೂತ್ರದಿಂದ ಸರ್ವನಾಮಕ್ಕೆ ಆಕಾರಾದೇಶ. ಯಾದೃಶ + ಈ. ಯಾದೃಶೀ. ಕ್ವರಬಂತಕ್ಕೆ—ಏತಿ ತಚ್ಛೀಲಾ | (ಹೋಗುವ ಸ್ವಭಾವದವಳು). 'ಇಣ್‌ನಶ್‌ಜಿಸರ್ತಿಭ್ಯಃ ಕ್ವರಪ್' ಸೂತ್ರದಿಂದ ಇಣ್ ಧಾತುವಿಗೆ ಕ್ವರಪ್ ಪ್ರತ್ಯಯ. ಇ + ವರ. ಪಿತ್ತಾದುದರಿಂದ 'ಹ್ರಸ್ವಸ್ಯ ಪಿತಿ ಕೃತಿ ತುಕ್' ಸೂತ್ರದಿಂದ ತುಗಾಗಮ. ಇತ್ವರ + ಈ. ಇತ್ವರೀ.

ವಾ || ನಞ್, ಸ್ನಞ್, ಈಕಕ್, ಖ್ಯುನ್ ಪ್ರತ್ಯಯಾಂತಗಳಮೇಲೆ, ತರುಣ ತಲುನ ಶಬ್ದಗಳ ಮೇಲೆ, ಸ್ತ್ರೀತ್ವದಲ್ಲಿ ಙೀಪ್ ಅಧಿಕವಾಗಿ ಹೇಳಬೇಕು. 'ಸ್ತ್ರೀಪುಂಸಾಭ್ಯಾಂ ನಞ್‌ಸ್ನಞೌ ಭವನಾತ್' ಸೂತ್ರದಿಂದ ಸ್ತ್ರೀ ಶಬ್ದದ ಮೇಲೆ ನಞ್ ಪ್ರತ್ಯಯ. ಸ್ತ್ರೀ + ನ. ಆದಿವೃದ್ಧಿ, ಣತ್ವ. ಙೀಪ್, ಅಲೋಪ. ಸ್ತ್ರೈಣೀ. ಪುಂಸ್ + ಸ್ನಞ್. ಆದಿವೃದ್ಧಿ. ಙೀಪ್, ಅಲೋಪ. ಪೌಂಸ್ನೀ. ಈಕಕಂತಕ್ಕೆ—ಶಕ್ತಿಃ ಪ್ರಹರಣಂ ಅಸ್ಯಾಃ | 'ಶಕ್ತಿಯಷ್ಟ್ಯೋರೀಕಕ್' ಸೂತ್ರದಿಂದ ಶಕ್ತಿ ಶಬ್ದದಮೇಲೆ ಈಕಕ್. ಕಿತ್ತಾದುದರಿಂದ ಆದಿವೃದ್ಧಿ. ಶಾಕ್ತೀಕ + ಈ. ಅಲೋಪ. ಶಾಕ್ತೀಕೀ. ಶಕ್ತಿಯೆಂಬ ಆಯುಧವಿಶೇಷವೇ ಹೊಡೆಯುವ ಸಾಧನವುಳ್ಳವಳು. ಖ್ಯುನ್ನಂತಕ್ಕೆ—ಅನಾಢ್ಯಃ ಆಢ್ಯಃ ಕ್ರಿಯತೇ ಅನಯಾ. ಐಶ್ವರ್ಯವಿಲ್ಲದವನು ಐಶ್ವರ್ಯವಂತನು ಇವಳಿಂದ ಮಾಡಲ್ಪಡುತ್ತಾನೆ. 'ಆಢ್ಯಸುಭಗಸ್ಥೂಲಪಲಿತ—' ಸೂತ್ರದಿಂದ ಆಢ್ಯ ಪದ ಉಪಪದವಾಗಿರುವಾಗ ಕೃಞಿಗೆ ಖ್ಯುನ್ ಪ್ರತ್ಯಯ. 'ಯುವೋರನಾಕೌ' ಸೂತ್ರದಿಂದ ಅನಾದೇಶ. ಕೃ ಧಾತುವಿಗೆ ಗುಣ. ಣತ್ವ. 'ಅರುರ್ದ್ವಿಷದಜಂತಸ್ಯ ಮುಮ್' ಸೂತ್ರದಿಂದ ಮುಮಾಗಮ. ಆಢ್ಯಂಕರಣ + ಈ. ಆಢ್ಯಂಕರಣೀ. ತರುಣ + ಈ. ತರುಣೀ. ತಲುನೀ (ಯುವತಿ).

ಯಞಂತದಮೇಲೆ ಙೀಪ್ ಹೇಳುವ ಸೂತ್ರ.

೧೨೫೫. ಯಞಶ್ಚ || ೪-೧-೧೬ ||

**ಯಞನ್ತಾತ್ ಸ್ತ್ರಿಯಾಂ ಙೀಪ್ ಸ್ಯಾತ್ । ಅಕಾರಲೋಪೇ ಕೃತೇ ॥**

ಯಞಃ, ಚ ॥ ದ್ವಿಪದ ಸೂತ್ರ. ಯಞ್ ಪ್ರತ್ಯಯವಾದುದರಿಂದ ತದಂತ ಗ್ರಹಣ. ಙೀಪ್ ಅನುವೃತ್ತಿ. **ಸೂತ್ರಾರ್ಥ**—ಯಞಂತಪ್ರಾತಿಪದಿಕದಮೇಲೆ ಸ್ತ್ರೀತ್ವದಲ್ಲಿ ಙೀಪ್ ಬರುತ್ತದೆ. ಗರ್ಗಸ್ಯ ಗೋತ್ರಾಪತ್ಯಂ ಸ್ತ್ರೀ. ಗರ್ಗನ ಹೆಣ್ಣು ಮಗಳು. ಗರ್ಗ ಶಬ್ದದ ಮೇಲೆ ಯಞ್. ಆದಿವೃದ್ಧಿ, ಅಲೋಪ. ಗಾರ್ಗ್ಯ. ಇದರ ಮೇಲೆ ಸ್ತ್ರೀತ್ವದಲ್ಲಿ ಙೀಪ್ ಬಂದಾಗ 'ಯಸ್ಯೇತಿ ಚ' ಸೂತ್ರದಿಂದ ಅಕಾರಲೋಪ ವಾದಮೇಲೆ ಗಾರ್ಗ್ಯ್+ಈ ಎಂದಿರುವಾಗ ಯಲೋಪ ಹೇಳುತ್ತಾನೆ.

ತದ್ಧಿತಯಕಾರಕ್ಕೆ ಲೋಪ ಹೇಳುವ ಸೂತ್ರ.

### ೧೨೫೬. ಹಲಸ್ತದ್ಧಿತಸ್ಯ ॥ ೬-೪-೧೫೦ ॥

**ಹಲಃ ಪರಸ್ಯ ತದ್ಧಿತಯಕಾರಸ್ಯೋಪಧಾಭೂತಸ್ಯ ಲೋಪ ಈತಿ ಪರೇ ॥ ಗಾರ್ಗೀ ॥**

ದ್ವಿಪದ ಸೂತ್ರ. ಹಲಃ ಪಂಚಮೀ. 'ಯಸ್ಯೇತಿ ಚ' ಸೂತ್ರದಿಂದ 'ಈತಿ', 'ಸೂರ್ಯತಿಷ್ಯಾ—' ಸೂತ್ರದಿಂದ 'ಯ ಉಪಧಾಯಾಃ', 'ಢೇ ಲೋಪೋ—' ಸೂತ್ರದಿಂದ 'ಲೋಪಃ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಹಲಿನ ಪರದಲ್ಲಿರುವ ಉಪಧಾಭೂತವಾದ ತದ್ಧಿತಯಕಾರಕ್ಕೆ ಈಕಾರ ಪರದಲ್ಲಿರುವಾಗ ಲೋಪ ಬರುತ್ತದೆ. ಗಾರ್ಗ್ಯ+ಈ ಎಂದಿರುವಾಗ ಯಕಾರ ಉಪಧೆಯಾಗಿದೆ. ಅಕಾರಲೋಪವಾದಮೇಲೆ ಈಕಾರ ಪರದಲ್ಲಿರುವುದರಿಂದ ಅದಕ್ಕೆ ಲೋಪ ಬಂದರೆ ಗಾರ್ಗ್+ಈ=ಗಾರ್ಗೀ ಎಂದಾಗುತ್ತದೆ. ಮುಂದೆ ಷಿತ್ತಾದುದಕ್ಕೆ ಙೀಷ್ ಹೇಳುತ್ತಾನೆ. ಅದಕ್ಕೋಸ್ಕರ ಷಿತ್ ಪ್ರತ್ಯಯವನ್ನು ಮೊದಲು ಹೇಳುತ್ತಾನೆ.

ಷ್ಫ ಪ್ರತ್ಯಯ ಹೇಳುವ ಸೂತ್ರ.

### ೧೨೫೭. ಪ್ರಾಚಾಂ ಷ್ಫ ತದ್ಧಿತಃ ॥ ೪-೧-೧೭ ॥

**ಯಞನ್ತಾತ್ ಷ್ಫೋ ವಾ ಸ್ಯಾತ್, ಸ ಚ ತದ್ಧಿತಃ ॥**

ತ್ರಿಪದ ಸೂತ್ರ. 'ಯಞಃ' ಅನುವೃತ್ತಿ. 'ಸ್ತ್ರಿಯಾಂ' ಅಧಿಕಾರ. ಷ್ಫ ಲುಪ್ತಪ್ರಥಮಾಕ. **ಸೂತ್ರಾರ್ಥ**—ಯಞನ್ತದ ಮೇಲೆ ಸ್ತ್ರೀತ್ವದಲ್ಲಿ ವಿಕಲ್ಪವಾಗಿ ಷ್ಫ ಪ್ರತ್ಯಯ ಬರುತ್ತದೆ. ಪ್ರಾಚಾಂ ಎಂದುದರಿಂದ ವಿಕಲ್ಪ. 'ಷಃ ಪ್ರತ್ಯಯಸ್ಯ' ಸೂತ್ರದಿಂದ ಷಕಾರ ಇತ್. 'ಆಯನೇಯೀನೀ—' ಸೂತ್ರದಿಂದ ಫಕಾರಕ್ಕೆ ಆಯನಾದೇಶ. ಗಾರ್ಗ್ಯ ಯಞನ್ತ. ಇದರಮೇಲೆ ಷ್ಫ ಬಂದರೆ ಗಾರ್ಗ್ಯ+ಆಯನ

ಎಂದಾಗುತ್ತದೆ. ಪ್ರತ್ಯಯಕ್ಕೆ ತದ್ಧಿತಸಂಜ್ಞೆ ಹೇಳಿರುವುದರಿಂದ 'ಯಸ್ಯೇತಿ ಚ' ಸೂತ್ರದಿಂದ ಅಲೋಪ. ತದ್ಧಿತಸಂಜ್ಞೆ ಹೇಳದಿದ್ದರೆ ಅಲೋಪ ಬರುತ್ತಿರಲಿಲ್ಲ. ಗಾರ್ಗ್ಯಾಯನ. 'ಅಟ್‌ಕುಪ್ವಾಙ್—' ಣತ್ವ. ಗಾರ್ಗ್ಯಾಯಣ ಎಂದಿರುವಾಗ ಇದರಮೇಲೆ ಙೀಷ್ ಹೇಳುತ್ತಾನೆ.

ಙೀಷ್‌ವಿಧಾಯಕ ಸೂತ್ರ.

**೧೫೭೮. ಷಿದ್ಗೌರಾದಿಭ್ಯಶ್ಚ ॥ ೪-೧-೪೧ ॥**

**ಷಿದ್ಭ್ಯೋ ಗೌರಾದಿಭ್ಯಶ್ಚ ಸ್ತ್ರಿಯಾಂ ಙೀಷ್ ಸ್ಯಾತ್। ಗಾರ್ಗ್ಯಾಯಣೀ। ನರ್ತಕೀ। ಗೌರೀ। ಅನಡುಹೀ। ಅನಡ್ವಾಹೀ। ಆಕೃತಿಗಣೋಽಯಮ್ ॥**

ದ್ವಿಪದ ಸೂತ್ರ. ಷ್ ಇತ್ ಯೇಷಾಂ ತೇ ಷಿತಃ। ಗೌರಃ ಆದಿಃ ಯೇಷಾಂ ತೇ ಗೌರಾದಯಃ। ಷಿತಶ್ಚ, ಗೌರಾದಯಶ್ಚ 'ಷಿತ್‌ಗೌರಾದಯಃ' ತೇಭ್ಯಃ। **ಸೂತ್ರಾರ್ಥ**—ಷಿತ್ತಾದ ಪ್ರಾತಿಪದಿಕಗಳಮೇಲೂ ಗೌರಾದಿಪ್ರಾತಿಪದಿಕಗಳಮೇಲೂ ಸ್ತ್ರೀತ್ವದಲ್ಲಿ ಙೀಷ್ ಬರುತ್ತದೆ. ಙೀಪ್, ಙೀಷಾದಿಗಳು ಬಂದಾಗ ಒಂದೇ ರೂಪವಾದರೂ ಸ್ವರದಲ್ಲಿ ವ್ಯತ್ಯಾಸವಿರುತ್ತದೆ. ಪ್ರಕೃತ ಷಿತ್ತಾದ ಪ್ರಾತಿಪದಿಕ ಗಾರ್ಗ್ಯಾಯಣ. ಙೀಷ್ ಬಂದಾಗ ಅಲೋಪ. ಗಾರ್ಗ್ಯಾಯಣೀ. ನರ್ತಕೀ. **ನೃತೀ**= ಗಾತ್ರವಿಕ್ಷೇಪೇ. ಧಾತು. ನರ್ತನಶೀಲಾರ್ಥದಲ್ಲಿ 'ಶಿಲ್ಪಿನಿ ಷ್ವುನ್' ಸೂತ್ರದಿಂದ ಷ್ವುನ್ ಪ್ರತ್ಯಯ. 'ಯುವೋರನಾಕೌ' ಅದಕ್ಕೆ ಅಕಾದೇಶ. ನೃತ್+ಅಕ. 'ಪುಗಂತಲಘೂಪಧಸ್ಯಚ' ಉಪಧಾಗುಣ. ನರ್ತಕ. ಷಿತ್ತಾದುದರಿಂದ ಙೀಷ್. ನರ್ತಕ+ಈ. ಅಲೋಪ. ನರ್ತಕೀ. ಗೌರಾದಿಗಳಿಗೆ—ಗೌರ+ಈ. ಅಲೋಪ ಗೌರೀ. ಅನುಡುಹ್ ಗೌರಾದಿಯಲ್ಲಿ ಪಠಿತವಾಗಿದೆ. 'ಆಮನಡುಹಃ ಸ್ತ್ರಿಯಾಂ ವಾ ವಾಚ್ಯಃ' ವಾರ್ತಿಕದಿಂದ ಇದಕ್ಕೆ ವಿಕಲ್ಪವಾಗಿ ಆಮ್ ಬಂದರೆ ಅನಡ್ವಾಹೀ. ಬಾರದಿದ್ದರೆ ಅನಡುಹೀ. (ಹಸು). ಗೌರಾದಿ ಆಕೃತಿಗಣ. ಇದರಂತೆ ಇತರ ಶಾಸ್ತ್ರದಿಂದ ಸಿದ್ಧವಾಗದೆ ಙೀಷಂತ ದೃಷ್ಟವಾದರೆ ಈ ಗಣದಲ್ಲಿ ಸೇರಿದೆಯೆಂದು ತಿಳಿಯಬೇಕು.

ಪ್ರಥಮವಯೋವಾಚಕದಮೇಲೆ ಙೀಪ್ ಹೇಳುವ ಸೂತ್ರ.

**೧೫೭೯. ವಯಸಿ ಪ್ರಥಮೇ ॥ ೪-೧-೨೦ ॥**

**ಪ್ರಥಮವಯೋವಾಚಿನೋಽದನ್ತಾತ್ ಸ್ತ್ರಿಯಾಂ ಙೀಪ್ ಸ್ಯಾತ್। ಕುಮಾರೀ ॥**

ದ್ವಿಪದ ಸೂತ್ರ. ಪ್ರಾಣಿಗಳ ಕಾಲಕೃತವಾದ ಅವಸ್ಥಾವಿಶೇಷಕ್ಕೆ ವಯಸ್ಸೆಂದು ಹೆಸರು. **ಸೂತ್ರಾರ್ಥ**—ಪ್ರಥಮವಯೋವಾಚಕ ಹ್ರಸ್ವಾಕಾರಾಂತಪ್ರಾತಿಪದಿಕದ

ಮೇಲೆ ಸ್ತ್ರೀತ್ವದಲ್ಲಿ ಙೀಪ್ ಬರುತ್ತದೆ. ಹಿಂದಿನಂತೆ ಅಧಿಕೃತವಾದ ಪ್ರಾತಿಪದಿಕಕ್ಕೆ ಅನುವೃತ್ತವಾದ 'ಅತಃ' ವಿಶೇಷಣವಾದುದರಿಂದ ತದಂತಲಾಭ. ಕುಮಾರ ಅವಸ್ಥಾ ವಿಶೇಷವನ್ನು ತಿಳಿಸುತ್ತದೆ. ಇದರ ಮೇಲೆ ಙೀಪ್ ಬಂದು ಅಲೋಪ ಬಂದರೆ ಕುಮಾರೀ ಎಂದಾಗುತ್ತದೆ. ಐದು ವರ್ಷದವರೆಗೆ ಕುಮಾರಾವಸ್ಥೆ; ಹತ್ತು ವರ್ಷದ ವರೆಗೆ ಪೌಗಂಡಾವಸ್ಥೆ; ಹದಿನೈದರವರೆಗೆ ಕೈಶೋರಾವಸ್ಥೆ; ಅದರಮೇಲೆ ಯೌವನ ವೆಂದು ಗ್ರಂಥಾಂತರದಲ್ಲಿ ಹೇಳಿದೆ. ಇನ್ನು ಆಯುಸ್ಸನ್ನು ನಾಲ್ಕು ಭಾಗಮಾಡಿ, ನಾಲ್ಕು ಪ್ರಕಾರ ಹೇಳುವುದೂ ಇದೆ. ಇಲ್ಲಿ 'ವಯಸ್ಯಚರಮೇ' ಎಂದು ಪಾಠಮಾಡಿ ವೃದ್ಧಾಪ್ಯವನ್ನು ಬಿಟ್ಟು ಉಳಿದ ವಯೋವಾಚಕ ಶಬ್ದದ ಮೇಲೆ ಙೀಪ್ ಎಂದು ಹೇಳುತ್ತಾರೆ. ಇದರಿಂದ ವಧೂಟೀ (ಯುವತಿ) ಇತ್ಯಾದಿ ಶಬ್ದಗಳು ಸಿದ್ಧವಾಗುತ್ತವೆ.

ದ್ವಿಗುವಿನ ಮೇಲೆ ಙೀಪ್ ಹೇಳುವ ಸೂತ್ರ.

### ೧೨೬೦. ದ್ವಿಗೋಃ ॥ ೪-೧-೨೧ ॥

**ಅದಂತಾತ್ ದ್ವಿಗೋರ್ಙೀಪ್ ಸ್ಯಾತ್ । ತ್ರಿಲೋಕೀ । ಅಜಾದಿತ್ವಾತ್ ತ್ರಿಫಲಾ । ತ್ರ್ಯನೀಕಾ ಸೇನಾ ॥**

'ಅಜಾದ್ಯತಃ—' ಸೂತ್ರದಿಂದ ಅನುವೃತ್ತವಾದ 'ಅತಃ' ಪದವು ದ್ವಿಗುವಿಗೆ ವಿಶೇಷಣವಾದುದರಿಂದ ತದಂತಲಾಭ. **ಸೂತ್ರಾರ್ಥ**—ಹ್ರಸ್ವಾಕಾರಾಂತ ದ್ವಿಗುವಿನ ಮೇಲೆ ಸ್ತ್ರೀತ್ವದಲ್ಲಿ ಙೀಪ್ ಬರುತ್ತದೆ. ಸಂಖ್ಯಾಪೂರ್ವವಾದ ಸಮಾಸಕ್ಕೆ (ತತ್ಪುರುಷ ಭೇದ) ದ್ವಿಗುಸಂಜ್ಞೆ ಹಿಂದೆ ಹೇಳಿದೆ. ತ್ರಯಾಣಾಂ ಲೋಕಾನಾಂ ಸಮಾಹಾರಃ । 'ತದ್ಧಿತಾರ್ಥೋತ್ತರಪದಸಮಾಹಾರೇ ಚ' ಸೂತ್ರದಿಂದ ಸಮಾಸ. ತ್ರಿಲೋಕ. ಅದಂತದ್ವಿಗುವಾದುದರಿಂದ ಙೀಪ್. ಟಾಪಿಗೆ ಅಪವಾದ. ತ್ರಿಲೋಕೀ. ತ್ರಿಫಲಾ, ತ್ರ್ಯನೀಕಾ ಇತ್ಯಾದಿಗಳೂ ದ್ವಿಗುವಾದುದರಿಂದ ಙೀಪ್ ಬರಬೇಕಾಗುತ್ತದೆ. ಅದಕ್ಕೋಸ್ಕರ ಸಮಾಧಾನ ಹೇಳುತ್ತಾನೆ. ಅಜಾದಿಗಣದಲ್ಲಿ ಇವುಗಳನ್ನು ಪಾಠ ಮಾಡಿರುವುದರಿಂದ ಙೀಪನ್ನು ಬಾಧಿಸಿ ಟಾಪ್ ಬರುತ್ತದೆ. ಅದಂತವಾದುದರಿಂದಲೇ ಅಜಾದಿಗಳಿಗೆ ಟಾಪ್ ಬರುತ್ತಿರುವಾಗ ಪುನಃ ವಿಶೇಷವಾಗಿ ಅಜಾದಿಪಾಠಮಾಡಿರು ವುದರಿಂದ ಙೀಪಾದಿಗಳಿಗೆ ಬಾಧ ತಿಳಿಸಲು ಹೇಳಿದೆಯೆಂದು ಹಿಂದೆ ವಿವೃತವಾಗಿದೆ. ಆದುದರಿಂದ ಇಲ್ಲಿ ಙೀಪ್ ಬಾಧಿತವಾಗಿ ಟಾಪ್ ಬಂದಿದೆ. ಪಾತ್ರಾದ್ಯಂತಕ್ಕೆ ಙೀಪ್ ನಿಷೇಧಮಾಡಿರುವುದರಿಂದ 'ತ್ರಿಭುವನಮ್' ಇತ್ಯಾದಿಗಳಿಗೆ ಙೀಪ್ ಬರುವು ದಿಲ್ಲ.

ವರ್ಣವಾಚಕದ ಮೇಲೆ ಙೀಪ್ ಹೇಳುವ ಸೂತ್ರ.

### ೧೨೬೧. ವರ್ಣಾದನುದಾತ್ತಾತ್ತೋಪಧಾತ್ತೋ ನಃ ॥ ೪-೧-೩೯ ॥

**ವರ್ಣವಾಚೀ ಯೋಽನುದಾತ್ತಾಂತಸ್ತೋಪಧಸ್ತದಂತಾದನುಪಸರ್ಜನಾತ್ ಪ್ರಾತಿಪದಿಕಾತ್ ವಾ ಙೀಪ್ ತಕಾರಸ್ಯ ನಕಾರಾದೇಶಶ್ಚ । ಏನೀ, ಏತಾ । ರೋಹಿಣೀ । ರೋಹಿತಾ ॥**

ವರ್ಣಾತ್, ಅನುದಾತ್ತಾತ್, ತೋಪಧಾತ್, ತಃ, ನಃ ॥ ಐದು ಪದಗಳುಳ್ಳ ಸೂತ್ರ. 'ವಾ', 'ಙೀಪ್' ಅನುವೃತ್ತಿ. ಅನುದಾತ್ತ ವರ್ಣಕ್ಕೆ ವಿಶೇಷಣವಾದುದರಿಂದ ತದಂತಲಾಭ. ವರ್ಣಪದದಿಂದ ವರ್ಣವಾಚಕ(ಬಣ್ಣ)ಪದಗಳನ್ನು ತೆಗೆದುಕೊಳ್ಳಬೇಕು. ತ್ ಉಪಧಾ ಯಸ್ಯ. ತ ಎಂಬಲ್ಲಿ ಅಕಾರ ಉಚ್ಚಾರಣಾರ್ಥ. ಪ್ರಾತಿಪದಿಕಕ್ಕೆ ವರ್ಣಾತ್ ವಿಶೇಷಣವಾದುದರಿಂದ ತದಂತಲಾಭ. **ಸೂತ್ರಾರ್ಥ**—ತಕಾರ ಉಪಧೆಯಾಗಿರುವ ವರ್ಣವಾಚಕವಾದ ಯಾವ ಅನುದಾತ್ತಾಂತಪದವಿದೆಯೋ ಅದೇ ಅಂತವಾದ ಅನುಪಸರ್ಜನವಾದ (ಪ್ರಧಾನ) ಪ್ರಾತಿಪದಿಕವಿದೆಯೋ ಅದರ ಮೇಲೆ ಸ್ತ್ರೀತ್ವದಲ್ಲಿ ವಿಕಲ್ಪವಾಗಿ ಙೀಪ್, ತಕಾರಕ್ಕೆ ನಕಾರಾದೇಶವೂ ಬರುತ್ತದೆ. ಏತ ಶಬ್ದ ಚಿತ್ರವರ್ಣವನ್ನು ಹೇಳುತ್ತದೆ. ಇಲ್ಲಿ ತಕಾರ ಉಪಧೆಯಾಗಿಯೂ, ಅನುದಾತ್ತಾಂತವಾಗಿಯೂ ಇದೆ. ವ್ಯಪದೇಶಿವದ್ಭಾವದಿಂದ ತದಂತವಾದ ಪ್ರಾತಿಪದಿಕ. ಏತ+ಈ. ಅಲೋಪ. ತಕಾರಕ್ಕೆ ನಕಾರ. ಏನೀ. ಬಾರದಿದ್ದರೆ ಏತಾ. ಅದಂತವಾದುದರಿಂದ ಟಾಪ್. ರೋಹಿತ ಶಬ್ದ ಕೆಂಪು ಬಣ್ಣವನ್ನು ಹೇಳುತ್ತದೆ. ಙೀಪ್ ನತ್ವ ಬಂದರೆ ರೋಹಿನೀ. ಣತ್ವ. ರೋಹಿಣೀ. ಬಾರದಿದ್ದರೆ ಟಾಪ್. ರೋಹಿತಾ.

ಗುಣವಾಚಕದ ಮೇಲೆ ಙೀಷ್ ಹೇಳುವ ಸೂತ್ರ.

**೧೨೬೨. ವೋತೋ ಗುಣವಚನಾತ್ ॥ ೪-೧-೪೪ ॥**

**ಉದನ್ತಾದ್ ಗುಣವಾಚಿನೋ ವಾ ಙೀಷ್ ಸ್ಯಾತ್ । ಮೃದ್ವೀ, ಮೃದುಃ ॥**

ವಾ, ಉತಃ, ಗುಣವಚನಾತ್ ॥ ತ್ರಿಪದ ಸೂತ್ರ. 'ಉತಃ' ಅಧಿಕೃತವಾದ ಪ್ರಾತಿಪದಿಕಕ್ಕೆ ವಿಶೇಷಣವಾದುದರಿಂದ ತದಂತಲಾಭ. **ಸೂತ್ರಾರ್ಥ**—ಹ್ರಸ್ವೋಕಾರಾಂತವಾದ ಗುಣವಾಚಕವಾದ ಪ್ರಾತಿಪದಿಕದ ಮೇಲೆ ಸ್ತ್ರೀತ್ವದಲ್ಲಿ ವಿಕಲ್ಪವಾಗಿ ಙೀಷ್ ಬರುತ್ತದೆ. ಮೃದು ಉಕಾರಾಂತ ಗುಣವಾಚಕ ಶಬ್ದ. ಙೀಷ್ ಬಂದರೆ ಮೃದು+ಈ. ಯಣ್. ಮೃದ್ವೀ. ಬಾರದಿದ್ದರೆ ಮೃದು ಎಂದೇ ಇರುತ್ತದೆ.

ಬಹ್ವಾದಿಗಳಿಗೆ ಙೀಷ್ ಹೇಳುವ ಸೂತ್ರ.

**೧೨೬೩. ಬಹ್ವಾದಿಭ್ಯಶ್ಚ ॥ ೪-೧-೪೫ ॥**

**ಏಭ್ಯೋ ವಾ ಙೀಷ್ ಸ್ಯಾತ್ । ಬಹ್ವೀ, ಬಹುಃ ।**

ದ್ವಿಪದ ಸೂತ್ರ. ಬಹು ಮುಂತಾದ (ಗಣಪಠಿತ) ಪ್ರಾತಿಪದಿಕಗಳ ಮೇಲೆ ಸ್ತ್ರೀತ್ವದಲ್ಲಿ ವಿಕಲ್ಪವಾಗಿ ಙೀಷ್ ಬರುತ್ತದೆ. ಬಹು+ಈ. ಯಣ್. ಬಹ್ವೀ. ಬಾರದಿದ್ದರೆ ಬಹುಃ। ಇಲ್ಲಿ ಬಹುಶಬ್ದ ವೈಪುಲ್ಯ(ವಿಸ್ತಾರ)ವಾಚಕವಾದುದರಿಂದ ಏಕವಚನದಲ್ಲಿದೆ. ಸಂಖ್ಯಾವಾಚಕವಾದರೆ ಬಹುವಚನ. ಈ ಸೂತ್ರದಲ್ಲಿ ಪಠಿತವಾದ ಕೆಲವು ವಾರ್ತಿಕಗಳನ್ನು ಹೇಳುತ್ತಾನೆ.

**ವಾ॥ (ಕೃದಿಕಾರಾದಕ್ತಿನಃ) ರಾತ್ರೀ, ರಾತ್ರಿಃ।**

**ವಾ॥ (ಸರ್ವತೋಽಕ್ತಿನ್ನರ್ಥಾದಿತ್ಯೇಕೇ) ಶಕಟಿಃ, ಶಕಟೀ॥**

ಕ್ತಿನ್‌ಪ್ರತ್ಯಯಸಂಬಂಧಿ ಇಕಾರವನ್ನು ಬಿಟ್ಟು (ಅಕ್ತಿನಃ) ಕೃತ್‌ಸಂಬಂಧಿಯಾದ ಯಾವ ಇಕಾರವಿದೆಯೋ ಅದೇ ಅಂತವಾದ ಪ್ರಾತಿಪದಿಕದಮೇಲೆ ವಿಕಲ್ಪವಾಗಿ ಙೀಷ್. ರಾ ಧಾತುವಿಗೆ ಔಣಾದಿಕ ತ್ರಿಪ್ರತ್ಯಯ. ರಾತ್ರಿ. ಇದಕ್ಕೆ ಙೀಷ್ ಬಂದರೆ ರಾತ್ರಿ+ಈ. ಇಲೋಪ. ರಾತ್ರೀ. ಬಾರದಿದ್ದರೆ ಹಾಗೆಯೇ ಇರುತ್ತದೆ. ರಾತ್ರಿಃ। ಇನ್ನು ಕೆಲವರು ಕ್ತಿನಿನ ಇಕಾರ ಬಿಟ್ಟು ಇನ್ನುಳಿದ ಇಕಾರಾಂತ ಪ್ರಾತಿಪದಿಕದ ಮೇಲೆ ಙೀಷ್‌ವಿಕಲ್ಪವೆನ್ನುತ್ತಾರೆ. ಕೃದಿನ ಇಕಾರವೆಂಬ ನಿಯಮವಿಲ್ಲ. ಶಕಟಿ. ಇಕಾರಾಂತ ಪ್ರಾತಿಪದಿಕ. ಙೀಷ್ ಬಂದರೆ ಶಕಟೀ ಎಂದಾಗುತ್ತದೆ. ಅವ್ಯುತ್ಪನ್ನಪ್ರಾತಿಪದಿಕಗಳಮೇಲೆ ಙೀಷ್‌ವಿಕಲ್ಪ ಇದರಿಂದ ಸಿದ್ಧವಾಗುತ್ತದೆ.

ಪುಂಯೋಗದಲ್ಲಿ ಙೀಷ್ ಹೇಳುವ ಸೂತ್ರ.

**೧೨೬೪. ಪುಂಯೋಗಾದಾಖ್ಯಾಯಾಮ್ ॥ ೪-೧-೪೮ ॥**

**ಯಾ ಪುಮಾಖ್ಯಾ ಪುಂಯೋಗಾತ್ ಸ್ತ್ರಿಯಾಂ ವರ್ತತೇ ತತೋ ಙೀಷ್। ಗೋಪಸ್ಯ ಸ್ತ್ರೀ ಗೋಪೀ। ವಾ॥ (ಪಾಲಕಾಂತಾನ್ನ)—**

ದ್ವಿಪದ ಸೂತ್ರ. ಆಖ್ಯಾ ಎಂದರೆ ಹೇಳುವುದು. ಅರ್ಥಾತ್ ಪುಲ್ಲಿಂಗವನ್ನು ಹೇಳುವುದು ಎಂದರ್ಥ. **ಸೂತ್ರಾರ್ಥ**—ಪುಲ್ಲಿಂಗವಾಚಕವಾಗಿ ಪ್ರಸಿದ್ಧವಾದ ಯಾವ ಶಬ್ದವು ಪುಂಸಂಬಂಧದಿಂದ ಸ್ತ್ರೀಲಿಂಗದಲ್ಲಿರುತ್ತದೆಯೋ ಆ ಪುಂವಾಚಕ ಶಬ್ದದ ಮೇಲೆ ಙೀಷ್. ಪುಂಸಂಬಂಧವೆಂದರೆ ದಾಂಪತ್ಯ ಅಥವಾ ಜನ್ಯಜನಕಾದಿಸಂಬಂಧ ತೆಗೆದುಕೊಳ್ಳಬೇಕು. ಗೋಪನ ಹೆಂಗಸು; ಹೆಂಡತಿ. ಗೋಪ+ಈ. ಅಲೋಪ. ಗೋಪೀ.

ವಾ॥ ಪಾಲಕಶಬ್ದಾಂತ ಪ್ರಾತಿಪದಿಕದ ಮೇಲೆ ಪುಂಯೋಗದಲ್ಲಿ ಙೀಷ್ ಬರುವುದಿಲ್ಲ. ಗೋಪಾಲಕ ಶಬ್ದ ಪಾಲಕಾಂತವಾಗಿದೆ. ಇವನ ಸ್ತ್ರೀ ಎಂದು ವಿವಕ್ಷೆ ಮಾಡಿದಾಗ ಙೀಷ್ ಬರುವುದಿಲ್ಲ. ಅದಂತವಾದುದರಿಂದ ಟಾಪ್. ಗೋಪಾಲಕಾ. ಇಲ್ಲಿ ಕಕಾರದ ಹಿಂದಿನ ಅಕಾರಕ್ಕೆ ಇತ್ವ ಹೇಳುತ್ತಾನೆ.

ಕಕಾರದ ಪೂರ್ವಕ್ಕೆ ಇತ್ವ ಹೇಳುವ ಸೂತ್ರ.

೧೨೬೫. ಪ್ರತ್ಯಯಸ್ಥಾತ್ಕಾತ್ಪೂರ್ವಸ್ಯಾತ ಇದಾಪ್ಯಸುಪಃ ॥ ೭-೩-೪೪ ॥

ಪ್ರತ್ಯಯಸ್ಥಾತ್ಕಾತ್ಪೂರ್ವಸ್ಯಾಕಾರಸ್ಯೇಕಾರಃ ಸ್ಯಾದಾಪಿ ಸ ಆಪ್ ಸುಪಃ ಪರೋ ನ ಚೇತ್। ಗೋಪಾಲಿಕಾ। ಅಶ್ವಪಾಲಿಕಾ। ಸರ್ವಿಕಾ। ಕಾರಿಕಾ। ಅತಃ ಕಿಮ್? ನೌಕಾ। ಪ್ರತ್ಯಯಸ್ಥಾತ್ ಕಿಮ್? ಶಕ್ನೋ-ತೀತಿ ಶಕಾ। ಅಸುಪಃ ಕಿಮ್? ಬಹುಪರಿವ್ರಾಜಕಾ ನಗರೀ।

ವಾ ॥ (ಸೂರ್ಯಾದ್ದೇವತಾಯಾಂ ಚಾಬ್ವಾಚ್ಯಃ) ಸೂರ್ಯಸ್ಯ ಸ್ತ್ರೀ ದೇವತಾ ಸೂರ್ಯಾ। ದೇವತಾಯಾಂ ಕಿಮ್?

ವಾ ॥ (ಸೂರ್ಯಾಗಸ್ತ್ಯಯೋಶ್ಛೇ ಚ ಙ್ಯಾಂ ಚ) ಯಲೋಪಃ। ಸೂರೀ—ಕುಂತೀ, ಮಾನುಷೀಯಮ್ ॥

ಪ್ರತ್ಯಯಸ್ಥಾತ್, ಕಾತ್, ಪೂರ್ವಸ್ಯ, ಅತಃ, ಇತ್, ಆಪಿ, ಅಸುಪಃ ॥ ಏಳು ಪದಗಳುಳ್ಳ ಸೂತ್ರ. **ಸೂತ್ರಾರ್ಥ**—ಪ್ರತ್ಯಯದಲ್ಲಿರುವ ಕಕಾರದ ಪೂರ್ವದಲ್ಲಿರುವ ಅಕಾರಕ್ಕೆ ಆಪ್ ಪರದಲ್ಲಿರುವಾಗ ಇಕಾರಾದೇಶ ಬರುತ್ತದೆ; ಆಪ್ ಸುಪಿನ ಪರದಲ್ಲಿರ ಬಾರದು. ಇತ್ ತಪರಮಾಡಿರುವುದರಿಂದ ಹ್ರಸ್ವ ಇಕಾರಾದೇಶ. ಗೋಪಾಲ ಏವ ಗೋಪಾಲಕಃ। ಸ್ವಾರ್ಥದಲ್ಲಿ ಕಪ್ರತ್ಯಯ ಬಂದಿದೆ. ತಸ್ಯ ಸ್ತ್ರೀ ಗೋಪಾಲಕಾ। ಅದಂತವಾದುದರಿಂದ ಟಾಪ್. ಇಲ್ಲಿ ಸ್ವಾರ್ಥದಲ್ಲಿ ಬಂದ ಕಪ್ರತ್ಯಯದ ಕಕಾರದ ಹಿಂದೆ ಅಕಾರವಿದೆ. ಅದಕ್ಕೆ ಆಪ್ ಪರದಲ್ಲಿದೆ. ಆಪ್ ಸುಪಿನ ಪರದಲ್ಲಿ ಇಲ್ಲ. ಆಪಿನ ಪರದಲ್ಲಿ ಸುಪ್ ಇದೆ. ಆದುದರಿಂದ ಇತ್ವ ಬಂದರೆ ಗೋಪಾಲಿಕಾ. ಅಶ್ವಪಾಲಕಸ್ಯ ಸ್ತ್ರೀ ಅಶ್ವಪಾಲಿಕಾ। ಸರ್ವ ಶಬ್ದಕ್ಕೆ ಟಿಯ ಹಿಂದೆ ಅಕಚ್. ಸರ್ವಕ. ಸ್ತ್ರೀತ್ವದಲ್ಲಿ ಟಾಪ್. ಸರ್ವಕಾ. ಇಲ್ಲಿ ಪ್ರತ್ಯಯ ಅಕಚ್. ಅದರ ಕಕಾರದ ಹಿಂದೆ ಅಕಾರವಿದೆ. ಅದಕ್ಕೆ ಟಾಪ್ ಪರದಲ್ಲಿದೆ. ಇತ್ವ ಬಂದರೆ ಸರ್ವಿಕಾ। ಕೃಞ್ ಧಾತುವಿಗೆ ಣ್ವುಲ್. ಣಿತ್ತಾದುದರಿಂದ ಕೃಞಿಗೆ ವೃದ್ಧಿ. ಣ್ವುಲಿಗೆ ಅಕಾದೇಶ. ಕಾರಕ. ಇದರ ಮೇಲೆ ಟಾಪ್. ಕಾರಕ+ಆ. ಸವರ್ಣದೀರ್ಘ. ಕಾರಕಾ. ಇತ್ವ. ಕಾರಿಕಾ. ಸೂತ್ರದಲ್ಲಿರುವ ಪ್ರತಿಯೊಂದು ಪದಕ್ಕೂ ಸಾರ್ಥಕ್ಯ ತೋರಿಸುತ್ತಾನೆ. ಅತಃ ಕಿಮ್? ಕಕಾರದ ಹಿಂದಿರುವ ಅಕಾರಕ್ಕೆ ಎಂದುದೇಕೆ? ಕಕಾರದ ಹಿಂದಿರುವ ವರ್ಣಕ್ಕೆ ಎಂದರೆ ನೌಕಾ ಇಲ್ಲಿಯೂ ಬರಬೇಕಾಗುತ್ತದೆ. ನೌ ಶಬ್ದದ ಮೇಲೆ ಸ್ವಾರ್ಥದಲ್ಲಿ ಕಪ್ರತ್ಯಯ ಬಂದಿದೆ. ಇಲ್ಲಿ ಕಕಾರದ ಹಿಂದೆ ಅಕಾರವಿಲ್ಲದಿರುವುದರಿಂದ ಇತ್ವವಿಲ್ಲ. ಪ್ರತ್ಯಯ ಸ್ಥಾತ್ ಕಿಮ್? ಪ್ರತ್ಯಯದ ಕಕಾರವೆಂದುದೇಕೆ? ಶಕ್ನೋತೀತಿ ಶಕಾ। ಶಕ್ಲ ಶಕ್ತೌ. ಪಚಾದ್ಯಚ್. ಶಕ್+ಅ. ಶಕ. ಟಾಪ್. ಶಕಾ. ಇಲ್ಲಿ ಧಾತುವಿನ ಕಕಾರದ ಹಿಂದೆ ಅಕಾರವಿರುವುದರಿಂದ ಇತ್ವ ಬರುವುದಿಲ್ಲ. ಸುಪಿನ ಪರದಲ್ಲಿ ಟಾಪ್ ಇರ

ಬಾರದು ಎಂದುದೇಕೆ? ಬಹುಪರಿವ್ರಾಜಕಾ ನಗರೀ. ಬಹವಃ ಪರಿವ್ರಾಜಕಾಃ ಯಸ್ಯಾಂ ಸಾ। (ಅನೇಕ ಸನ್ಯಾಸಿಗಳುಳ್ಳ ಪಟ್ಟಣ.) ಬಹು+ಜಸ್+ಪರಿವ್ರಾಜಕ +ಜಸ್. 'ಸುಪೋ ಧಾತುಪ್ರಾತಿಪದಿಕಯೋಃ' ಸೂತ್ರದಿಂದ ಜಸಿಗೆ ಲುಕ್. ಬಹುಪರಿವ್ರಾಜಕ ಶಬ್ದದ ಮೇಲೆ ಟಾಪ್. ಇಲ್ಲಿ 'ಪ್ರತ್ಯಯಲೋಪೇ ಪ್ರತ್ಯಯ ಲಕ್ಷಣಮ್' ಪರಿಭಾಷೆಯಿಂದ ಸುಪ್ ಲುಕ್ಕಾದರೂ ಸುಪ್ ಇದೆಯೆಂದು ಗ್ರಹಣ ಮಾಡುವುದರಿಂದ ಟಾಪ್ ಸುಪಿನ ಪರದಲ್ಲಿ ಬಂದಂತಾಗುತ್ತದೆ. ಆದುದರಿಂದ ಇತ್ವ ವಿಲ್ಲ. ಈ ಸೂತ್ರದಲ್ಲಿರುವ ಕೆಲವು ವಾರ್ತಿಕಗಳನ್ನು ಹೇಳುತ್ತಾನೆ.

ವಾ॥ ಸೂರ್ಯ ಶಬ್ದದ ಮೇಲೆ ದೇವತಾರ್ಥ ತೋರುವಾಗ ಚಾಪ್ ಬರುತ್ತದೆ. ಚಾಪಿನಲ್ಲಿ ಆ ಉಳಿಯುತ್ತಿದೆ. ಸೂರ್ಯನ ಹೆಂಗಸು (ಹೆಂಡತಿ) ದೇವತಾರ್ಥ ತೋರುವುದರಿಂದ ಚಾಪ್. ಸೂರ್ಯ+ಆ. ಸವರ್ಣದೀರ್ಘ. ಸೂರ್ಯಾ. ದೇವ ತಾರ್ಥ ತೋರುವಾಗ ಎಂದುದೇಕೆ? ಸೂರ್ಯಸ್ಯ ಸ್ತ್ರೀ। ಮನುಷ್ಯಳು (ಕುಂತಿ). ಇಲ್ಲಿ ಚಾಪ್ ಬರುವುದಿಲ್ಲ. 'ಪುಂಯೋಗಾದಾಖ್ಯಾಯಾಮ್' ಸೂತ್ರದಿಂದ ಙೀಷ್. ಸೂರ್ಯ+ಈ ಎಂದಿರುವಾಗ ಯಲೋಪ ವಾರ್ತಿಕದಿಂದ ಹೇಳುತ್ತಾನೆ.

ವಾ॥ ಸೂರ್ಯ, ಅಗಸ್ತ್ಯ ಶಬ್ದಗಳ ಉಪಧಾಯಕಾರಕ್ಕೆ ಛಪ್ರತ್ಯಯ, ಙೀ ಪರದಲ್ಲಿರುವಾಗ ಲೋಪಬರುತ್ತದೆ. ಇಲ್ಲಿ ಙೀಪರವಾದುದರಿಂದ ಉಪಧಾಯಕಾರಕ್ಕೆ ಲೋಪಬಂದರೆ ಸೂರ+ಈ ಎಂದಿರುವಾಗ 'ಯಸ್ಯೇತಿ ಚ' ಸೂತ್ರದಿಂದ ಅಕಾರ ಲೋಪ. ಸೂರೀ.

ಇಂದ್ರಾದಿಗಳಿಗೆ ಙೀಷ್ ಆನುಗಾಗಮ ಹೇಳುವ ಸೂತ್ರ.

೧೨೬೬. ಇಂದ್ರವರುಣಭವಶರ್ವರುದ್ರಮೃಡಹಿಮಾರಣ್ಯಯವಯವನ-
ಮಾತುಲಾಚಾರ್ಯಾಣಾಮಾನುಕ್ ॥ ೪-೧-೪೯ ॥

ಏಷಾಮಾನುಗಾಗಮಃ ಸ್ಯಾತ್ ಙೀಷ್। ಇಂದ್ರಸ್ಯ ಸ್ತ್ರೀ—ಇನ್ದ್ರಾಣೀ। ವರುಣಾನೀ। ಭವಾನೀ। ಶರ್ವಾಣೀ। ರುದ್ರಾಣೀ। ಮೃಡಾನೀ।

ವಾ॥ (ಹಿಮಾರಣ್ಯಯೋರ್ಮಹತ್ತ್ವೇ) ಮಹದ್ಧಿಮಂ ಹಿಮಾನೀ। ಮಹದರಣ್ಯಮರಣ್ಯಾನೀ॥ ವಾ॥ (ಯವಾದ್ದೋಷೇ) ದುಷ್ಟೋ ಯವೋ ಯವಾನೀ। ವಾ॥ (ಯವನಾಲ್ಲಿಪ್ಯಾಮ್) ಯವನಾನಾಂ ಲಿಪಿರ್ಯವ-ನಾನೀ। ವಾ॥ (ಮಾತುಲೋಪಾಧ್ಯಾಯಯೋರಾನುಗ್ವಾ) ಮಾತುಲಾನೀ, ಮಾತುಲೀ। ಉಪಾಧ್ಯಾಯಾನೀ, ಉಪಾಧ್ಯಾಯೀ। ವಾ॥ (ಆಚಾರ್ಯಾ-ದಣತ್ವಂ ಚ) ಆಚಾರ್ಯಸ್ಯ ಸ್ತ್ರೀ ಆಚಾರ್ಯಾನೀ। ವಾ॥ (ಅರ್ಯ-ಕ್ಷತ್ರಿಯಾಭ್ಯಾಂ ವಾ ಸ್ವಾರ್ಥೇ) ಅರ್ಯಾಣೀ, ಅರ್ಯಾ। ಕ್ಷತ್ರಿಯಾಣೀ, ಕ್ಷತ್ರಿಯಾ॥

ದ್ವಿಪದ ಸೂತ್ರ. 'ಙೀಷ್' ಅನುವೃತ್ತಿ. ಇಂದ್ರ, ವರುಣ, ಭವ, ಶರ್ವ, ರುದ್ರ, ಮೃಡ, ಹಿಮ, ಅರಣ್ಯ, ಯವ, ಯವನ, ಮಾತುಲ, ಆಚಾರ್ಯ ಶಬ್ದಗಳಿಗೆ ಸ್ತ್ರೀತ್ವದಲ್ಲಿ ಙೀಷ್, ಆನುಕ್ ಆಗಮವೂ ಬರುತ್ತವೆ. ಇಂದ್ರಾದಿ ಆರು ಶಬ್ದಗಳಿಗೂ, ಮಾತುಲ, ಆಚಾರ್ಯ ಶಬ್ದಗಳಿಗೂ, 'ಪುಂಯೋಗಾ—' ಸೂತ್ರದಿಂದಲೇ ಙೀಷ್ ಬರುತ್ತಿರುವಾಗ ಇಲ್ಲಿ ಆನುಕ್ ಮಾತ್ರ ವಿಧಾನವೆಂದು ತಿಳಿಯಬೇಕು. ಇತರ ನಾಲ್ಕು ಶಬ್ದಗಳಿಗೆ ಎರಡೂ ವಿಧಿಸಲ್ಪಡುತ್ತವೆ. ಇಂದ್ರನ ಹೆಂಡತಿ. ಇಂದ್ರ + ಆನ್ ಈ. ಇಂದ್ರಾನೀ. 'ಅಟ್‌ಕುಪ್ವಾಙ್—' ಸೂತ್ರದಿಂದ ಣತ್ವ. ಇಂದ್ರಾಣೀ. ವರುಣಸ್ಯ ಸ್ತ್ರೀ। ವರುಣ + ಆನ್ ಈ. ವರುಣಾನೀ. ಭವಾನೀ ಮುಂತಾದ ನಾಲ್ಕು ಶಬ್ದಗಳು ಪಾರ್ವತಿಯನ್ನು ಹೇಳುತ್ತವೆ. ಹಿಮ ಶಬ್ದಕ್ಕೆ ಙೀಷ್ ಬರಲು ನಿಯಮವನ್ನು ವಾರ್ತಿಕದಿಂದ ಹೇಳುತ್ತಾನೆ. ವಾ॥ ಹಿಮ ಮತ್ತು ಅರಣ್ಯ ಶಬ್ದಗಳ ಮೇಲೆ ಮಹತ್ವ ತೋರುವಾಗ ಙೀಷ್ ಆನುಗಾಗಮ. ಅಧಿಕಹಿಮ. ಹಿಮಾನೀ. ದೊಡ್ಡ ಕಾಡು. ಅರಣ್ಯಾನೀ. ವಾ॥ ಯವ ಶಬ್ದದ ಮೇಲೆ ದುಷ್ಟಯವ ಎಂಬಾರ್ಥದಲ್ಲಿ ಙೀಷ್ ಆನುಗಾಗಮ. ದುಷ್ಟವಾದ ನವಣೆಧಾನ್ಯ. ಯವಾನೀ. ವಾ॥ ಯವನ ಶಬ್ದದ ಮೇಲೆ ಲಿಪಿರೂಪಾರ್ಥ ತೋರುವಾಗ ಙೀಷ್ ಆನುಗಾಗಮ. ಯವನರ ಲಿಪಿ. ಯವನಾನೀ. ಸೂತ್ರದಿಂದ ಮಾತುಲ ಶಬ್ದಕ್ಕೆ ನಿತ್ಯವಾಗಿ ಆನುಕ್ ಪ್ರಾಪ್ತವಾದರೆ ವಾರ್ತಿಕದಿಂದ ವಿಕಲ್ಪ ಹೇಳುತ್ತಾನೆ. ವಾ॥ ಮಾತುಲ, ಉಪಾಧ್ಯಾಯ ಶಬ್ದಗಳಿಗೆ ಆನುಗಾಗಮವಿಕಲ್ಪವಾಗಿ ಬರುತ್ತದೆ. ಉಪಾಧ್ಯಾಯ ಶಬ್ದಕ್ಕೆ ಅಪ್ರಾಪ್ತ ವಿಭಾಷೆ. ಮಾತುಲಸ್ಯ ಸ್ತ್ರೀ. (ಸೋದರಮಾವನ ಹೆಂಡತಿ.) ಮಾತುಲಾನೀ. ಆನುಕ್ ಬಾರದಿದ್ದರೆ ಪುಂಯೋಗನಿಮಿತ್ತಕವಾಗಿ ಕೇವಲ ಙೀಷ್. ಮಾತುಲೀ. ಉಪಾಧ್ಯಾಯಸ್ಯ ಸ್ತ್ರೀ ಉಪಾಧ್ಯಾಯಾನೀ, ಬಾರದಿದ್ದರೆ ಉಪಾಧ್ಯಾಯೀ. ಉಪಾಧ್ಯಾಯನ ಹೆಂಡತಿಯೆಂಬ ಅರ್ಥ ತೋರದೆ ಸ್ವತಃ ಅಧ್ಯಾಪಕಿ ಎಂಬರ್ಥತೋರುವಾಗ ಉಪಾಧ್ಯಾಯಾ ಎಂದಾಗುತ್ತದೆ. ವಾ॥ ಆಚಾರ್ಯ ಶಬ್ದಕ್ಕೆ ಆನುಕ್ ಬಂದಾಗ ಣತ್ವ ಬರುವುದಿಲ್ಲ. ಆಚಾರ್ಯನ ಹೆಂಡತಿ ಆಚಾರ್ಯಾನೀ. 'ಅಟ್‌ಕುಪ್ವಾಙ್' ಸೂತ್ರದಿಂದ ಣತ್ವ ಬರುತ್ತಿದ್ದರೆ ಅದಕ್ಕೆ ಅಪವಾದ. ವಾ॥ ಅರ್ಯ, ಕ್ಷತ್ರಿಯ ಶಬ್ದಗಳಿಗೆ ಸ್ವಾರ್ಥದಲ್ಲಿ ವಿಕಲ್ಪವಾಗಿ ಆನುಕ್, ಙೀಷ್ ಬರುತ್ತವೆ. ವೈಶ್ಯಹೆಂಗಸು. ಅರ್ಯಾಣೀ. ಆನುಕ್ ಙೀಷ್ ಬಾರದಿದ್ದರೆ ಟಾಪ್. ಅರ್ಯಾ. ಹೀಗೆಯೇ ಕ್ಷತ್ರಿಯ ಸ್ತ್ರೀ ಕ್ಷತ್ರಿಯಾಣೀ—ಕ್ಷತ್ರಿಯಾ. ಇವುಗಳಿಗೆ ಪುಂಯೋಗದಲ್ಲಿ ಙೀಷ್. ಅರ್ಯೀ, ಕ್ಷತ್ರಿಯೀ ಎಂದಾಗುತ್ತದೆ.

ಕ್ರೀತಾಂತಕ್ಕೆ ಙೀಷ್ ಹೇಳುವ ಸೂತ್ರ.

೧೨೬೭. ಕ್ರೀತಾತ್ಕರಣಪೂರ್ವಾತ್ ॥ ೪-೧-೫೦ ॥

**ಕ್ರೀತಾನ್ತಾದದನ್ತಾತ್ ಕರಣಾದೇಃ ಸ್ತ್ರಿಯಾಂ ಙೀಷ್ ಸ್ಯಾತ್ । ವಸ್ತ್ರಕ್ರೀತೀ ಕ್ವಚಿನ್ನ । ಧನಕ್ರೀತಾ ॥**

ದ್ವಿಪದ ಸೂತ್ರ. ಅಧಿಕೃತವಾದ ಪ್ರಾತಿಪದಿಕಕ್ಕೆ 'ಕ್ರೀತಾತ್', 'ಅತಃ' ವಿಶೇಷಣ. ತದಂತಲಾಭ. **ಸೂತ್ರಾರ್ಥ**—ಕ್ರೀತ ಶಬ್ದವೇ ಅಂತವಾದ, ಕರಣ ವಾಚಕಪದವೇ ಆದಿಯಲ್ಲಿರುವ ಅದಂತಪ್ರಾತಿಪದಿಕದಮೇಲೆ ಸ್ತ್ರೀತ್ವದಲ್ಲಿ ಙೀಷ್ ಬರುತ್ತದೆ. ವಸ್ತ್ರೇಣ ಕ್ರೀತಾ । (ವಸ್ತ್ರದಿಂದ ಕೊಳ್ಳಲ್ಪಟ್ಟದ್ದು.) ವಸ್ತ್ರ ಕರಣವಾಚಕ ವಾಗಿದೆ. 'ಗತಿಕಾರಕೋಪಪದಾನಾಂ ಕೃದ್ಭಿಃ ಸಹ ಸಮಾಸವಚನಂ ಪ್ರಾಕ್‌ಸುಬು-ತ್ಪತ್ತೇಃ' ಪರಿಭಾಷೆಯಿಂದ ಸುಪ್ ಬರಬೇಕಾದರೆ ಮೊದಲು ಸಮಾಸ. ವಸ್ತ್ರ+ಟಾ +ಕ್ರೀತ. ವಸ್ತ್ರಕ್ರೀತ. ಅದಂತವಾದುದರಿಂದ ಙೀಷ್. ಅಲೋಪ. ವಸ್ತ್ರಕ್ರೀತೀ. ಕೆಲವು ಕಡೆ ಈ ಙೀಷ್ ಬರುವುದಿಲ್ಲ. ಧನೇನ+ಕ್ರೀತಾ. ಧನಕ್ರೀತಾ. ಹಿಂದಿನ ಪರಿಭಾಷೆಯನ್ನು ಸ್ವೀಕರಿಸದೆ ಸುಪ್ ಬಂದಮೇಲೆ ಸಮಾಸ ಮಾಡಿದರೆ ಅದಂತ ವಾದುದರಿಂದ ಮೊದಲೇ ಟಾಪ್ ಬರುತ್ತದೆ. ಆಗ ಹ್ರಸ್ವಾಕಾರಾಂತವಾಗದಿರುವುದ ರಿಂದ ಅದರ ಮೇಲೆ ಙೀಷ್ ಬರುವುದಿಲ್ಲ.

ಸ್ವಾಂಗವಾಚಕದಮೇಲೆ ಙೀಷ್ ಹೇಳುವ ಸೂತ್ರ.

**೧೨೬೮. ಸ್ವಾಙ್ಗಾಚ್ಚೋಪಸರ್ಜನಾದಸಂಯೋಗೋಪಧಾತ್ ॥ ೪-೧-೫೪ ॥**

**ಅಸಂಯೋಗೋಪಧಮುಪಸರ್ಜನಂ ಯತ್ ಸ್ವಾಙ್ಗಂ ತದಂತಾ-ದದಂತಾತ್ ಙೀಷ್ ವಾ ಸ್ಯಾತ್ । ಕೇಶಾನತಿಕ್ರಾನ್ತಾ—ಅತಿಕೇಶೀ । ಚಂದ್ರಮುಖೀ, ಚಂದ್ರಮುಖಾ । ಅಸಂಯೋಗೋಪಧಾತ್ ಕಿಮ್ ? ಸುಗುಲ್ಫಾ । ಉಪಸರ್ಜನಾತ್ ಕಿಮ್ ? ಶಿಖಾ ॥**

ಸ್ವಾಂಗಾತ್, ಚ, ಉಪಸರ್ಜನಾತ್, ಅಸಂಯೋಗೋಪಧಾತ್ ॥ ನಾಲ್ಕು ಪದಗಳುಳ್ಳ ಸೂತ್ರ. 'ಪ್ರಾತಿಪದಿಕಾತ್' ಅಧಿಕಾರ. ಅಸಂಯೋಗೋಪಧ, ಉಪಸರ್ಜನ ಪದಗಳು ಸ್ವಾಂಗಕ್ಕೆ ವಿಶೇಷಣ. 'ಅತಃ' ಸ್ವಾಙ್ಗಾತ್ ಪ್ರಾತಿಪದಿಕಕ್ಕೆ ವಿಶೇಷಣ. ತದಂತಲಾಭ. ಅಸಂಯೋಗವೇ ಉಪಧೆಯಾಗಿರುವುದು ಅಸಂಯೋ ಗೋಪಧ. **ಸೂತ್ರಾರ್ಥ**—ಸಂಯೋಗವು ಉಪಧೆಯಲ್ಲಿಲ್ಲದ ಉಪಸರ್ಜನವಾದ ಯಾವ ಸ್ವಾಂಗವಾಚಕಪದವಿದೆಯೋ ಅದೇ ಅಂತವಾಗಿರುವ ಅದಂತವಾದ ಪ್ರಾತಿ ಪದಿಕಕ್ಕೆ ಙೀಷ್ ವಿಕಲ್ಪವಾಗಿ ಬರುತ್ತದೆ. ಕೇಶಾನತಿಕ್ರಾಂತಾ । 'ಅತ್ಯಾದಯಃ ಕ್ರಾಂತಾದ್ಯರ್ಥೇ—' ಸೂತ್ರದಿಂದ ಸಮಾಸ. ಅತಿಕೇಶ. ಕೇಶ ಸ್ವಾಂಗವಾಚಕ. ಅದರ ಅರ್ಥಕ್ಕೆ ಪ್ರಾಧಾನ್ಯವಿಲ್ಲದಿರುವುದರಿಂದ ಉಪಸರ್ಜನವಾಗಿದೆ. ಅದೇ ಅಂತ ವಾದ ಅದಂತಪ್ರಾತಿಪದಿಕ ಅತಿಕೇಶ. ವಿಕಲ್ಪಙೀಷ್ ಬಂದರೆ ಅತಿಕೇಶೀ. ಬಾರ ದಿದ್ದರೆ ಅದಂತವಾದುದರಿಂದ ಟಾಪ್. ಅತಿಕೇಶಾ. ಚಂದ್ರ ಇವ ಮುಖಂ ಯಸ್ಯಾಃ

ಸಾ । ಮುಖ ಸ್ವಾಂಗವಾಚಕವಾಗಿ ಅಪ್ರಧಾನವಾಗಿದೆ. ಚಂದ್ರಮುಖೀ. ಙೀಷ್ ಬಾರದಿದ್ದರೆ ಟಾಪ್. ಚಂದ್ರಮುಖಾ. ಸಂಯೋಗ ಉಪಧೆಯಾಗಿರಬಾರದೆಂದು ದೇಕೆ ? ಸುಗುಲ್ಫಾ. ಶೋಭನೌ ಗುಲ್ಫೌ ಯಸ್ಯಾಃ ಸಾ । ಗುಲ್ಫ (ಕಾಲಿನ ಮಣಿ ಗಂಟು) ಸ್ವಾಂಗವಾಚಕವಾಗಿ ಅಪ್ರಧಾನವಾಗಿದ್ದರೂ ಉಪಧೆಯಲ್ಲಿ (ಲ್‌ಫ್) ಸಂಯೋಗವಿದೆ. ಅದುದರಿಂದ ಙೀಷ್ ಬರುವುದಿಲ್ಲ. ಟಾಪ್. ಅಪ್ರಧಾನವಾಗಿರ ಬೇಕೆಂದುದೇಕೆ ? ಶಿಖಾ (ಜುಟ್ಟು) ಸ್ವಾಂಗವಾಚಕವಾಗಿ ಅಸಂಯೋಗೋಪಧ ವಾಗಿದೆ. ಆದರೆ ಪ್ರಧಾನವಾಗಿದೆ. ಇದರಿಂದ ಙೀಷ್ ಬರುವುದಿಲ್ಲ. ಸ್ವಾಂಗವೆಂದರೆ ನಮ್ಮ ಅವಯವ ಎಂದರ್ಥವಾಗುತ್ತದೆ. ಇದಕ್ಕೆ ವ್ಯಾಖ್ಯಾಗ್ರಂಥದಲ್ಲಿ ಹೀಗೆ ಲಕ್ಷಣ ಹೇಳಿರುತ್ತಾರೆ :

**ಅದ್ರವಂ ಮೂರ್ತಿಮತ್ ಸ್ವಾಂಗಂ ಪ್ರಾಣಿಸ್ಥಮವಿಕಾರಜಮ್ ।**
**ಅತತ್ಸ್ಥಂ ತತ್ರ ದೃಷ್ಟಂ ಚ ತೇನ ಚೇತ್ತತ್ತಥಾ ಯುತಮ್ ॥**

ದ್ರವವಾಗಬಾರದು, ಮೂರ್ತಿಮತ್ತಾಗಿರಬೇಕು. ಪ್ರಾಣಿಯಲ್ಲಿರಬೇಕು. ವಿಕಾರದಿಂದ ಉಂಟಾಗಿರಬಾರದು. ಇದೊಂದು ಸ್ವಾಂಗಲಕ್ಷಣ. ಕೇಶಮುಖಾದಿಗಳು ಈ ಲಕ್ಷಣ ಕ್ಕೊಳಪಡುತ್ತವೆ. ಸುಸ್ವೇದಾ (ಚನ್ನಾಗಿರುವ ಬೆವರುಳ್ಳವಳು) ದ್ರವವಾಗಿದೆ. ಸುಜ್ಞಾನಾ. ಮೂರ್ತಿಮತ್ತಾಗಲಿಲ್ಲ. ಸುಮುಖಾ ಶಾಲಾ । (ಚನ್ನಾಗಿರುವ ಮುಂಭಾಗವುಳ್ಳ ಶಾಲೆ) ಪ್ರಾಣಿಯಲ್ಲಿರುವುದಲ್ಲ. ಆದುದರಿಂದ ಇವುಗಳಿಗೆ ಙೀಷ್ ಬರುವುದಿಲ್ಲ. ಪ್ರಾಣಿಯಲ್ಲಿದ್ದದ್ದು ಈಗ ಅಲ್ಲಿಲ್ಲದಿರುವುದು ಎರಡನೇ ಸ್ವಾಂಗಲಕ್ಷಣ. ಸುಕೇಶೀ—ಸುಕೇಶಾ ವಾ ರಥ್ಯಾ । ಕೇಶ ಪ್ರಾಣಿಯಲ್ಲಿರುವುದು. ಈಗ ರಸ್ತೆಯಲ್ಲಿದೆ. ಆದರೂ ಅದು ಸ್ವಾಂಗ. ಪ್ರಾಣಿಯಲ್ಲಿರುವಂತೆ ಆಯಾಯ ಸ್ಥಳದಲ್ಲಿ ಕೂಡಿರುವುದು. ಮೂರನೇ ಲಕ್ಷಣ. ಸುಸ್ತನೀ—ಸುಸ್ತನಾ ವಾ ಪ್ರತಿಮಾ. ದೇವಪ್ರತಿಮೆ ಮನುಷ್ಯ ರಲ್ಲಿರುವಂತೆ ಅವಯವದಿಂದ ಕೂಡಿದೆ. ಇಲ್ಲಿ ಸ್ತನ ಸ್ವಾಂಗವಾಚಕವಾಗುತ್ತದೆ.

ಸ್ವಾಂಗವಾಚಕಕ್ಕೆ ಙೀಷ್ ನಿಷೇಧ ಹೇಳುವ ಸೂತ್ರ.

೧೨೬೯. ನ ಕ್ರೋಡಾದಿಬಹ್ವಚಃ ॥ ೪-೧-೫೬ ॥

**ಕ್ರೋಡಾದೇರ್ಬಹ್ವಚಶ್ಚ ಸ್ವಾಙ್ಗಾನ್ನ ಙೀಷ್ । ಕಲ್ಯಾಣಕ್ರೋಡಾ । ಆಕೃತಿಗಣೋಽಯಮ್ । ಸುಜಘನಾ ॥**

ದ್ವಿಪದ ಸೂತ್ರ. ಕ್ರೋಡಾದಿಶ್ಚ ಬಹ್ವಚ್ ಚ ತಯೋಃ ಸಮಾಹಾರಃ ಕ್ರೋಡಾದಿಬಹ್ವಚ್ । ತಸ್ಮಾತ್. **ಸೂತ್ರಾರ್ಥ**—ಕ್ರೋಡಾದಿಗಣಪಠಿತಗಳಾದ ಮತ್ತು ಅನೇಕಾಜುಳ್ಳ ಸ್ವಾಂಗವಾಚಕ ಪ್ರಾತಿಪದಿಕದಮೇಲೆ ಙೀಷ್ ಬರುವುದಿಲ್ಲ. ಕಲ್ಯಾಣೀ ಕ್ರೋಡಾ ಯಸ್ಯಾಃ ಸಾ. ಕಲ್ಯಾಣಕ್ರೋಡಾ । ಸುಂದರವಾದ ಎದೆ

ಯುಳ್ಳದ್ದು ಹೆಣ್ಣು ಕುದುರೆ. ಕ್ರೋಡಾದಿಗಣ ಆಕೃತಿಗಣ. ಇದರಂತೆ ಙೀಷ್ ಬಾರದಿರುವವುಗಳನ್ನು ಈ ಗಣದಲ್ಲಿದೆಯೆಂದು ತಿಳಿಯಬೇಕು. ಅನೇಕಾಚಿಗೆ— ಶೋಭನಂ ಜಘನಂ ಯಸ್ಯಾಃ ಸಾ । ಸುಜಘನಾ । (ಸುಂದರವಾದ ನಿತಂಬವುಳ್ಳವಳು.) ಜಘನ ಅನೇಕಾಚಾಗಿರುವ ಸ್ವಾಂಗವಾಚಕವಾಗಿದೆ. ಹೀಗೇ ಕಮಲನಯನಾ, ಪದ್ಮವದನಾ ಇತ್ಯಾದಿ.

### ನಖ, ಮುಖಕ್ಕೆ ನಿಷೇಧ ಹೇಳುವ ಸೂತ್ರ.

**೧೨೭೦. ನಖಮುಖಾತ್ಸಂಜ್ಞಾಯಾಮ್** ॥ ೪-೧-೫೮ ॥

**ನ ಙೀಷ್** ॥

ದ್ವಿಪದ ಸೂತ್ರ. ನಖಂ ಚ ಮುಖಂ ಚ ತಯೋಃ ಸಮಾಹಾರಃ ನಖಮುಖಂ । ತಸ್ಮಾತ್. ಸ್ವಾಂಗವಾಚಕವಾದ ನಖ, ಮುಖ ಶಬ್ದಗಳೇ ಅಂತದಲ್ಲಿರುವ ಪ್ರಾತಿಪದಿಕದ ಮೇಲೆ ಸಂಜ್ಞಾ ತೋರುವಾಗ ಙೀಷ್ ಬರುವುದಿಲ್ಲ. ಶೂರ್ಪಾಣೀವ ನಖಾನಿ ಯಸ್ಯಾಃ ಸಾ । ಶೂರ್ಪನಖಾ । ರಾಕ್ಷಸಿಯ ಹೆಸರು. ಸಂಜ್ಞೆ ತೋರುವುದರಿಂದ ಙೀಷ್ ಬರುವುದಿಲ್ಲ. 'ಅಟ್‌ಕುಪ್ವಾಙ್—' ಸೂತ್ರದಿಂದ ಣತ್ವ ಬರಲು ಇಲ್ಲಿ ಸಮಾನಪದವಿಲ್ಲ. ಭಿನ್ನಭಿನ್ನ ಎರಡು ಪದಗಳಿವೆ. ಆದುದರಿಂದ ಇಲ್ಲಿ ಣತ್ವ ಸೂತ್ರಾಂತರದಿಂದ ತೋರಿಸುತ್ತಾನೆ.

### ಸಂಜ್ಞೆಯಲ್ಲಿ ಣತ್ವ ಹೇಳುವ ಸೂತ್ರ

**೧೨೭೧. ಪೂರ್ವಪದಾತ್ಸಂಜ್ಞಾಯಾಮಗಃ** ॥ ೮-೪-೩ ॥

**ಪೂರ್ವಪದಸ್ಥಾನ್ನಿಮಿತ್ತಾತ್ಪರಸ್ಯ ನಸ್ಯ ಣಃ ಸ್ಯಾತ್ । ಸಂಜ್ಞಾಯಾಂ ನ ತು ಗಕಾರವ್ಯವಧಾನೇ । ಶೂರ್ಪಣಖಾ । ಗೌರಮುಖಾ । ಸಂಜ್ಞಾ-ಯಾಂ ಕಿಮ್ ? ತಾಮ್ರಮುಖೀ ಕನ್ಯಾ** ॥

ತ್ರಿಪದ ಸೂತ್ರ. ಪೂರ್ವಪದಕ್ಕೆ ಪೂರ್ವಪದದಲ್ಲಿರುವ ಎಂಬರ್ಥವನ್ನು ಲಕ್ಷಣೆಯಿಂದ ಹೇಳಬೇಕು. 'ರಷಾಭ್ಯಾಂ ಣೋ ನಃ' ಅನುವೃತ್ತಿ. **ಸೂತ್ರಾರ್ಥ**—ಪೂರ್ವಪದದಲ್ಲಿರುವ ನಿಮಿತ್ತವಾದ ರೇಫಷಕಾರಗಳ ಪರದಲ್ಲಿರುವ ರೇಫಕ್ಕೆ ಣತ್ವ ಬರುತ್ತದೆ. ಸಂಜ್ಞಾ ತೋರುವಾಗ ಮಾತ್ರ ಈ ಣತ್ವ. ಮಧ್ಯದಲ್ಲಿ ಗಕಾರವ್ಯವಧಾನವಿರಬಾರದು. ಪ್ರಕೃತ ಶೂರ್ಪ ಪೂರ್ವಪದದಲ್ಲಿ ರೇಫರೂಪನಿಮಿತ್ತವಿದೆ. ಅದರ ಪರದಲ್ಲಿ ನಕಾರವಿರುವುದರಿಂದ ಇಲ್ಲಿ ಸಂಜ್ಞೆ ತೋರುವುದರಿಂದ ಣತ್ವ ಬಂದರೆ ಶೂರ್ಪಣಖಾ ಎಂದಾಗುತ್ತದೆ. ಗಕಾರವ್ಯವಧಾನವಿರುವುದರಿಂದ ಋಗಯನಮ್ ಇತ್ಯಾದಿ ಸ್ಥಲಗಳಲ್ಲಿ ಣತ್ವ ಬರುವುದಿಲ್ಲ. ಮುಖಾಂತನಿಷೇಧಕ್ಕೆ—ಗೌರಮುಖಾ. ಶ್ವೇತಂ ಮುಖಂ

ಯಸ್ಯಾಃ ಸಾ | ಇದು ಒಬ್ಬಳಿಗೆ ಸಂಜ್ಞೆಯಾದುದರಿಂದ ಙೀಷ್ ಬರುವುದಿಲ್ಲ. ಸಂಜ್ಞೆಯಲ್ಲಿ ಮಾತ್ರ ಙೀಷ್ ನಿಷೇಧವೆಂದುದೇಕೆ? ತಾಮ್ರಮುಖೀ ಕನ್ಯಾ | ತಾಮ್ರಂ ಮುಖಂ ಯಸ್ಯಾಃ ಸಾ | ಕೆಂಪು ಮುಖವುಳ್ಳ ಹುಡುಗಿ. ಇಲ್ಲಿ ಸಂಜ್ಞಾ ತೋರದಿರುವುದರಿಂದ ನಿಷೇಧವಿಲ್ಲ.

ಜಾತಿವಾಚಕದಮೇಲೆ ಙೀಷ್ ಹೇಳುವ ಸೂತ್ರ.

**೧೨೭೨. ಜಾತೇರಸ್ತ್ರೀವಿಷಯಾದಯೋಪಧಾತ್ || ೪-೧-೬೩ ||**

**ಜಾತಿವಾಚಿ ಯನ್ನ ಚ ಸ್ತ್ರಿಯಾಂ ನಿಯತಮಯೋಪಧಂ ತತಃ ಸ್ತ್ರಿಯಾಂ ಙೀಷ್ ಸ್ಯಾತ್ | ತಟೀ | ವೃಷಲೀ | ಕಠೀ | ಬಹ್ವೃಚೀ | ಜಾತೇಃ ಕಿಮ್ ? ಮುಂಡಾ | ಅಸ್ತ್ರೀವಿಷಯಾತ್ ಕಿಮ್ ? ಬಲಾಕಾ | ಅಯೋಪಧಾತ್ ಕಿಮ್ ? ಕ್ಷತ್ರಿಯಾ |**

**ವಾ || (ಯೋಪಧಪ್ರತಿಷೇಧೇ ಹಯಗವಯಮುಕಯಮನುಷ್ಯ-ಮತ್ಸ್ಯಾನಾಮಪ್ರತಿಷೇಧಃ) || ಹಯೀ | ಗವಯೀ | ಮುಕಯೀ | ಹಲ-ಸ್ತದ್ಧಿತಸ್ಯೇತಿ ಯಲೋಪಃ | ಮನುಷೀ | ವಾ || (ಮತ್ಸ್ಯಸ್ಯ ಙ್ಯಾಮ್ ಯಲೋಪಃ) ಮತ್ಸೀ ||**

ತ್ರಿಪದ ಸೂತ್ರ. ಜಾತಿಪದದಿಂದ ಜಾತಿವಾಚಕಪದ ವಿವಕ್ಷಿತ. ಸ್ತ್ರೀವಿಷಯಃ= ನಿಯಮೇನ ವಾಚ್ಯಾ ಯಸ್ಯಾಃ | ನಿತ್ಯಸ್ತ್ರೀಲಿಂಗಶಬ್ದವೆಂದರ್ಥ. ಅದು ಆಗಬಾರದು. ಅನಿಯತಸ್ತ್ರೀಲಿಂಗಶಬ್ದ. **ಸೂತ್ರಾರ್ಥ**—ಜಾತಿವಾಚಕವಾದ ನಿತ್ಯಸ್ತ್ರೀಲಿಂಗವಲ್ಲದ, ಯಕಾರ ಉಪಧೆಯಾಗದೇ ಇರುವ ಅದಂತಪ್ರಾತಿಪದಿಕದಮೇಲೆ ಙೀಷ್. ಜಾತಿ ಲಕ್ಷಣ ಭಾಷ್ಯದಲ್ಲಿ ಹೀಗೆ ಹೇಳಿದೆ:

**ಆಕೃತಿಗ್ರಹಣಾ ಜಾತಿಃ ಲಿಂಗಾನಾಂ ಚ ನ ಸರ್ವಭಾಕ್ |**
**ಸಕೃದಾಖ್ಯಾತನಿರ್ಗ್ರಾಹ್ಯಾ ಗೋತ್ರಂ ಚ ಚರಣೈಃ ಸಹ ||**

ಒಂದು ಸ್ವರೂಪದಿಂದ ತಿಳಿಯುವುದು. ತಟೀ ಉದಾಹರಣೆ. ಇದು ನಿತ್ಯಸ್ತ್ರೀಲಿಂಗ ವಲ್ಲ. ಯಕಾರ ಉಪಧೆಯಲಿಲ್ಲ. ಅದಂತವಾಗಿದೆ (ತಟ). ಎಲ್ಲಾ ಲಿಂಗವನ್ನು ಹೊಂದದೆ ಒಂದು ಸಾರಿ ತಿಳಿಸಿದರೆ ತಿಳಿಯಲು ಶಕ್ಯವಾದದ್ದು. ಉದಾ.—ವೃಷಲೀ =ಶೂದ್ರನ ಹೆಂಡತಿ. ಒಂದು ಸಾರಿ ಹೀಗೆ ಎಂದು ತಿಳಿಸಿದರೆ ಮುಂದೆ ಎಲ್ಲರಲ್ಲಿಯೂ ತಿಳಿಯಬಹುದು. ಇದು ಮೂರು ಲಿಂಗವನ್ನು ಹೊಂದುವ ಶಬ್ದವಲ್ಲ. ಆದುದರಿಂದ ಙೀಷ್. ಮೂರನೇ ಜಾತಿಲಕ್ಷಣ. ಗೋತ್ರಪ್ರತ್ಯಯಾಂತ ಶಬ್ದವೂ, ಶಾಖಾಧ್ಯೇತೃವಾಚಿ ಶಬ್ದವೂ ಜಾತಿಕಾರ್ಯವನ್ನು ಹೊಂದುತ್ತದೆ. ಉದಾ.—ಕಠೀ, ಬಹ್ವೃಚೀ. ಕಠಶಾಖೆಯನ್ನು ಓದುವವಳು; ಋಕ್‌ಶಾಖೆಯನ್ನು ಓದುವವಳು. ಗೋತ್ರ ಪ್ರತ್ಯಯಾಂತಕ್ಕೆ ಔಪಗವೀ ಇತ್ಯಾದಿಗಳನ್ನು ಊಹಿಸಿ ತಿಳಿದುಕೊಳ್ಳಬೇಕು. ಜಾತಿ

ವಾಚಕವೆಂದುದೇಕೆ ? ಮುಂಡಾ= ಬೋಳುತಲೆಯವಳು. ಇದು ಶಾಶ್ವತವಲ್ಲವಾದುದ ರಿಂದ ಯಾವ ಜಾತಿಲಕ್ಷಣಕ್ಕೂ ಒಳಪಡುವುದಿಲ್ಲ. ನಿಯತಸ್ತ್ರೀಲಿಂಗವಾಗಿರಬಾರದು ಎಂದುದೇಕೆ ? ಬಲಾಕಾ. ಇದು ನಿತ್ಯಸ್ತ್ರೀಲಿಂಗ ಪದ(ಬಕಪಕ್ಷಿಗಳ ಸಾಲು ಅಥವಾ ಪಕ್ಷಿವಿಶೇಷ ಅಥವಾ ಕಾಮುಕಿ)ವಾದುದರಿಂದ ಙೀಷ್ ಬರುವುದಿಲ್ಲ. ಯಕಾರ ಉಪಧೆಯಾಗಿರಬಾರದೆಂದುದೇಕೆ ? ಕ್ಷತ್ರಿಯಾ. ಇಲ್ಲಿ ಯಕಾರ ಉಪಧೆಯಾಗಿರು ವುದರಿಂದ ಙೀಷ್ ಬರುವುದಿಲ್ಲ.

ವಾ ॥ ಯಕಾರ ಉಪಧೆಯಾಗಿರುವವುಗಳಿಗೆ ನಿಷೇಧ ಹೇಳುವಾಗ ಹಯ, ಗವಯ, ಮುಕಯ, ಮನುಷ್ಯ, ಮತ್ಸ್ಯ ಶಬ್ದಗಳನ್ನು ಬಿಟ್ಟು ಉಳಿದವುಗಳಿಗೆ ಹೇಳ ಬೇಕು. ಈ ಶಬ್ದಗಳಿಗೆ ಙೀಷ್ ಬರುತ್ತದೆ. ಹಯೀ (ಹೆಣ್ಣು ಕುದುರೆ). ಗವಯೀ (ಗೋವಿನಂತಿರುವ ಪ್ರಾಣಿ). ಮುಕಯೀ (ಪ್ರಾಣಿವಿಶೇಷ). ಮನುಷ್ಯ+ಈ ಎಂದಿರುವಾಗ 'ಹಲಸ್ತದ್ಧಿತಸ್ಯ' ಸೂತ್ರದಿಂದ ಯಕಾರಲೋಪ. ಅಲೋಪ. ಮನುಷ್+ಈ. ಮನುಷೀ. ಮತ್ಸ್ಯ+ಈ ಎಂದಿರುವಾಗ ಮತ್ಸ್ಯ ಶಬ್ದಕ್ಕೆ ಙೀಷ್ ಪರವಾದಾಗ ಯಲೋಪ ಎಂದುದರಿಂದ ಉಪಧಾಯಕಾರಲೋಪ. ಅಲೋಪ. ಮತ್ಸೀ.

ಇದಂತಕ್ಕೆ ಙೀಷ್ ಹೇಳುವ ಸೂತ್ರ.

**೧೨೭೩. ಇತೋ ಮನುಷ್ಯಜಾತೇಃ ॥ ೪-೧-೬೫ ॥ ಙೀಷ್ । ದಾಕ್ಷೀ ॥**

ದ್ವಿಪದ ಸೂತ್ರ. ಇಕಾರಾಂತವಾದ ಮನುಷ್ಯಜಾತಿವಾಚಕ ಶಬ್ದದಮೇಲೆ ಸ್ತ್ರೀತ್ವದಲ್ಲಿ ಙೀಷ್ ಬರುತ್ತದೆ. ದಕ್ಷಸ್ಯ ಅಪತ್ಯಂ ಸ್ತ್ರೀ । (ದಕ್ಷನ ಹೆಣ್ಣುಮಗಳು.) ದಾಕ್ಷಿ+ಈ. ಇಲೋಪ. ದಾಕ್ಷೀ.

ಉದಂತಕ್ಕೆ ಊಙ್ ಹೇಳುವ ಸೂತ್ರ.

**೧೨೭೪. ಊಙುತಃ ॥ ೪-೧-೬೬ ॥**

**ಉದಂತಾದಯೋಪಧಾನ್ಮನುಷ್ಯಜಾತಿವಾಚಿನಃ ಸ್ತ್ರಿಯಾಮೂಙ್ ಸ್ಯಾತ್ । ಕುರೂಃ । ಅಯೋಪಧಾತ್ ಕಿಮ್ ? ಅಧ್ವರ್ಯುರ್ಬ್ರಾಹ್ಮಣೀ ॥**

ಊಙ್, ಉತಃ ॥ ದ್ವಿಪದ ಸೂತ್ರ. 'ಅಯೋಪಧಾತ್', 'ಮನುಷ್ಯ ಜಾತೇಃ' ಪದಗಳು ಅನುವೃತ್ತವಾಗುತ್ತವೆ. **ಸೂತ್ರಾರ್ಥ**—ಹ್ರಸ್ವ ಉಕಾರಾಂತ ವಾದ, ಯಕಾರ ಉಪಧೆಯಾಗಿಲ್ಲದಿರುವ ಮನುಷ್ಯಜಾತಿವಾಚಕ ಪ್ರಾತಿಪದಿಕದಮೇಲೆ ಸ್ತ್ರೀತ್ವದಲ್ಲಿ ಊಙ್ ಬರುತ್ತದೆ. ಕುರು=ಕುರುದೇಶದ ರಾಜ. ತಸ್ಯ ಅಪತ್ಯಮ್. ಕುರು+ಊ. ಸವರ್ಣದೀರ್ಘ. ಕುರೂಃ । ಯಕಾರ ಉಪಧೆಯಾಗಿರಬಾರದೆಂದು ದೇಕೆ ? ಅಧ್ವರ್ಯುಃ । ಯಜುರ್ವೇದವನ್ನು ತಿಳಿದ ಹೆಂಗಸು ಋತ್ವಿಕ್. (ಹೋಮ

ಮಾಡುವವಳು.) ಇಲ್ಲಿ ಯಕಾರ ಉಪಧೆಯಾಗಿರುವುದರಿಂದ ಊಙ್ ಬರುವುದಿಲ್ಲ. ಹಾಗೇ ಇರುತ್ತದೆ.

ಪಂಗು ಶಬ್ದಕ್ಕೆ ಊಙ್ ಹೇಳುವ ಸೂತ್ರ.

೧೨೭೫. **ಪಙ್ಗೋಶ್ಚ** ॥ ೪–೧–೬೮ ॥

**ಪಙ್ಗೂಃ (ಶ್ವಶುರಸ್ಯೋಕಾರಾಕಾರಲೋಪಶ್ಚ) ಶ್ವಶ್ರೂಃ ॥**

ದ್ವಿಪದ ಸೂತ್ರ. ಪಂಗು ಶಬ್ದದಮೇಲೆ ಸ್ತ್ರೀತ್ವದಲ್ಲಿ ಊಙ್ ಬರುತ್ತದೆ. ಪಂಗುತ್ವ ಜಾತಿಯಲ್ಲದಿರುವುದರಿಂದ ಹಿಂದಿನ ಸೂತ್ರದಿಂದ ಸಿದ್ಧವಾಗುವುದಿಲ್ಲ. ಪಂಗು + ಊ = ಪಂಗೂಃ । ಕುಂಟಾದ ಕಾಲುಳ್ಳವಳು.

ವಾ ॥ ಶ್ವಶುರ ಶಬ್ದಕ್ಕೆ ಊಙ್ಪ್ರತ್ಯಯವೂ, ಉಕಾರಾಕಾರಲೋಪವೂ ಬರುತ್ತದೆ. ಶ್ವಶುರ + ಊ. ಶ್ವಶ್ರ್ + ಊ = ಶ್ವಶ್ರೂಃ । ಹೆಂಡತಿಯ ತಾಯಿ.

ಊರು ಶಬ್ದಾಂತಕ್ಕೆ ಊಙ್ ಹೇಳುವ ಸೂತ್ರ.

೧೨೭೬. **ಊರೂತ್ತರಪದಾದೌಪಮ್ಯೇ** ॥ ೪–೧–೬೯ ॥

**ಉಪಮಾನವಾಚಿ ಪೂರ್ವಪದಮೂರೂತ್ತರಪದಂ ಯತ್ಪ್ರಾತಿಪದಿಕಂ ತಸ್ಮಾದೂಙ್ ಸ್ಯಾತ್ । ಕರಭೋರೂಃ ॥**

ದ್ವಿಪದ ಸೂತ್ರ. ಊರುಃ ಉತ್ತರಪದಂ ಯಸ್ಯ ತತ್ । ಪ್ರಾತಿಪದಿಕಕ್ಕೆ ವಿಶೇಷಣ. ಉಪಮಾ ಏವ ಔಪಮ್ಯಮ್. ಸ್ವಾರ್ಥ ಷ್ಯಞಂತಪದ. ಉತ್ತರಪದ ದಿಂದ ಪೂರ್ವಪದ ಆಕ್ಷಿಪ್ತವಾಗುತ್ತದೆ. ಔಪಮ್ಯೇ ಎಂಬುದು ಪೂರ್ವಪದದಲ್ಲಿ ಅನ್ವಯಹೊಂದುತ್ತದೆ. **ಸೂತ್ರಾರ್ಥ**— ಉಪಮಾನವಾಚಕಪೂರ್ವಪದವಾಗಿರುವ, ಊರು ಶಬ್ದ ಉತ್ತರಪದವಾಗಿರುವ ಪ್ರಾತಿಪದಿಕದಮೇಲೆ ಸ್ತ್ರೀತ್ವದಲ್ಲಿ ಊಙ್ ಬರುತ್ತದೆ. ಕರಭಾವಿವ ಊರೂ ಯಸ್ಯಾಃ ಸಾ । ಕಿರುಬೆರಳಿನಿಂದ ಮಣಿಗಂಟಿನವರೆಗೆ ಇರುವ ಭಾಗಕ್ಕೆ ಕರಭವೆಂದು ಹೆಸರು. ಅದರಂತೆ ನುಣುಪಾದ ಆಕಾರವುಳ್ಳ ತೊಡೆ ಉಳ್ಳವಳು. ಕರಭ ಉಪಮಾನವಾಚಕವಾಗಿದೆ. ಊರು ಉತ್ತರಪದವಾಗಿದೆ. ಕರಭೋರು + ಊ. ಕರಭೋರೂಃ ।

ಔಪಮ್ಯ ತೋರದಿರುವಾಗ ಊಙ್ ಹೇಳುವ ಸೂತ್ರ.

೧೨೭೭. **ಸಂಹಿತಶಫಲಕ್ಷಣವಾಮಾದೇಶ್ಚ** ॥ ೪–೧–೭೦ ॥

**ಅನೌಪಮ್ಯಾರ್ಥಂ ಸೂತ್ರಮ್ । ಸಂಹಿತೋರೂಃ । ಶಫೋರೂಃ । ಲಕ್ಷಣೋರೂಃ । ವಾಮೋರೂಃ ॥**

ದ್ವಿಪದ ಸೂತ್ರ. ಸಂಹಿತ, ಶಫ, ಲಕ್ಷಣ, ವಾಮ ಶಬ್ದವೇ ಆದಿಯಾಗಿರುವ ಊರು ಶಬ್ದ ಉತ್ತರಪದವಾಗಿರುವ ಪ್ರಾತಿಪದಿಕಕ್ಕೆ ಸ್ತ್ರೀತ್ವದಲ್ಲಿ ಊಙ್. ಸಂಹಿತೌ ಊರೂ ಯಸ್ಯಾಃ ಸಾ। ಸಂಹಿತೋರೂಃ। ಕೂಡಿರುವ ತೊಡೆಯುಳ್ಳವಳು. ಶಫೌ ಊರೂ ಯಸ್ಯಾಃ ಸಾ। ಗೊರಸಿನಂತೆ ಕೂಡಿರುವ ತೊಡೆಯುಳ್ಳವಳು. ಶಫೋರೂಃ। ಲಕ್ಷಣೌ ಊರೂ ಯಸ್ಯಾಃ। ಲಕ್ಷಣೋರೂಃ। ಲಕ್ಷಣಶಬ್ದ ಅರ್ಶ ಆದ್ಯಜಂತವಾದುದರಿಂದ ಲಕ್ಷಣವುಳ್ಳದ್ದೆಂದರ್ಥ. ಲಕ್ಷಣಯುಕ್ತವಾದ ತೊಡೆಯುಳ್ಳವಳು. ವಾಮೌ ಊರೂ ಯಸ್ಯಾಃ। ವಾಮೋರೂಃ। ಸುಂದರ ತೊಡೆಯುಳ್ಳವಳು. ಇಲ್ಲಿ ಔಪಮ್ಯ ತೋರದಿರುವುದರಿಂದ ಪುನಃ ಹೇಳಿದೆ. ಔಪಮ್ಯ ತೋರುವುದಾದರೆ ಹಿಂದಿನ ಸೂತ್ರದಿಂದ ಸಿದ್ಧವಾಗುತ್ತದೆ.

ಸ್ತ್ರೀತ್ವದಲ್ಲಿ ಙೀನ್ ಹೇಳುವ ಸೂತ್ರ.

**೧೨೭೮. ಶಾರ್ಙ್ಗರವಾದ್ಯಞೋ ಙೀನ್ ॥ ೪-೧-೭೩ ॥**

**ಶಾರ್ಙ್ಗರವಾದೇರಞೋ ಯೋಽಕಾರಸ್ತದಂತಾಚ್ಚ ಜಾತಿವಾಚಿನೋ ಙೀನ್ ಸ್ಯಾತ್। ಶಾರ್ಙ್ಗರವೀ। ಬೈದೀ। ಬ್ರಾಹ್ಮಣೀ।**

**ವಾ॥ (ನೃನರಯೋರ್ವೃದ್ಧಿಶ್ಚ) ನಾರೀ॥**

ಶಾರ್ಙ್ಗರವಾದಿ, ಅಞಃ, ಙೀನ್ ॥ ತ್ರಿಪದ ಸೂತ್ರ. ಶಾರ್ಙ್ಗರವಾದಿ ಲುಪ್ತ ಪಂಚಮೀಕ. ಅಞಃ ಷಷ್ಠೀ. 'ಅತಃ' ಅನುವೃತ್ತವಾಗಿ ಪ್ರಾತಿಪದಿಕಕ್ಕೆ ವಿಶೇಷಣ. **ಸೂತ್ರಾರ್ಥ**—ಶಾರ್ಙ್ಗರವಾದಿಗಣಪಠಿತಪ್ರಾತಿಪದಿಕದಮೇಲೂ, ಅಞಿನ ಯಾವ ಅಕಾರವಿದೆಯೋ ಅದೇ ಅಂತವಾದ ಜಾತಿವಾಚಕಪ್ರಾತಿಪದಿಕದಮೇಲೂ ಙೀನ್ ಬರುತ್ತದೆ. ಶೃಂಗರೋರಪತ್ಯಂ ಸ್ತ್ರೀ। ಶೃಂಗರು ಶಬ್ದದ ಮೇಲೆ ಅಪತ್ಯಾರ್ಥದಲ್ಲಿ 'ತಸ್ಯಾಪತ್ಯಮ್' ಸೂತ್ರದಿಂದ ಅಣ್. ಶೃಂಗರು+ಅ. ಆದಿವೃದ್ಧಿ. 'ಓರ್ಗುಣಃ' ಗುಣ, ಅವಾದೇಶ. ಶಾರ್ಙ್ಗರವ. ಇದರ ಮೇಲೆ ಙೀನ್. ಅಲೋಪ. ಶಾರ್ಙ್ಗರವೀ. ಹೀಗೇ ಆ ಗಣದಲ್ಲಿ ಹೇಳಿದ ಪ್ರಾತಿಪದಿಕಗಳಿಗೆ ಙೀನ್ ಬರುವುದನ್ನು ತಿಳಿಯಬೇಕು. ಅಞಂತಕ್ಕೆ—ಬಿದಸ್ಯ ಗೋತ್ರಾಪತ್ಯಂ ಸ್ತ್ರೀ। 'ಅನೃಷ್ಯಾನಂತರ್ಯೇ-ಬಿದಾದಿಭ್ಯೋಽಞ್' ಸೂತ್ರದಿಂದ ಬಿದ ಶಬ್ದದ ಮೇಲೆ ಅಪತ್ಯಾರ್ಥದಲ್ಲಿ ಅಞ್. ಬಿದ+ಅ. ಆದಿವೃದ್ಧಿ, ಅಲೋಪ. ಬೈದ. ಇಲ್ಲಿ ಅಞಿನ ಅಕಾರವಿರುವುದರಿಂದ ಙೀನ್. ಬೈದೀ.

**ವಾ॥** ನೃ, ನರ ಶಬ್ದಗಳಿಗೆ ಸ್ತ್ರೀತ್ವದಲ್ಲಿ ಙೀನ್ ಪ್ರತ್ಯಯವೂ ವೃದ್ಧಿಯೂ ಬರುತ್ತದೆ. ನೃ+ಈ. ಋಕಾರಕ್ಕೆ ವೃದ್ಧಿ (ಆರ್). ನರ+ಈ. ಅಲೋಪ. ನರ್ +ಈ. ವೃದ್ಧಿ. ನಾರೀ.

